ನನ್ನ ಜನ್ಮದಾತರಾದ

# ಮಾತಾಪಿತೃಗಳ

ಚರಣಾರವಿಂದಗಳಲ್ಲಿ.

ಶ್ರೀರಾಮಜಯ

# ಶ್ರೀ ತುಲಸೀ ರಾಮಾಯಣಂ

**ಅಥವಾ**

# ಶ್ರೀ ರಾಮಚರಿತ ಮಾನಸ

**ಮೈ. ಶೇ. ಅನಂತಪದ್ಮನಾಭರಾವ್**

ಪ್ರಕಾಶಕರು :

**ಕೆ. ನರಸಿಂಹಸ್ವಾಮಿ,**

251, ಜಯನಗರ, ಬೆಂಗಳೂರು-4.

# ಮುನ್ನುಡಿ

ಶ್ರೀಮಾನ್ ಅನಂತಪದ್ಮನಾಭರಾಯರವರಿಂದಲೂ ಅವರ ವಾಚಕ ರಿಂದಲೂ ನಾನು ಬಹುವಾಗಿ ಕ್ಷಮೆಯನ್ನು ಯಾಚಿಸಬೇಕಾಗಿದೆ. ಶ್ರೀ ಅನಂತಪದ್ಮನಾಭರಾಯರವರು ಈ ಗ್ರಂಥವನ್ನು ನನ್ನಲ್ಲಿಗೆ ಕಳುಹಿಸಿ ಮೂರು ವರ್ಷಗಳಾಗಿವೆ. ಕಳುಹಿಸುವುದಕ್ಕೆ ಮುಂಚೆ ಅವರು ನನ್ನನ್ನು ಕೇಳಿದ್ದಿದ್ದರೆ ಈ ಭಾರವನ್ನು ಹೊರುವ ಶಕ್ತಿ ನನಗೆ ಇಲ್ಲವೆಂದು ಆಗಲೇ ನಾನು ಅವರಿಗೆ ತಿಳಿಸಬಹುದಾಗಿತ್ತು. ಅವರಿಗೆ ನನ್ನ ವಿಷಯದಲ್ಲಿ ಇರುವ ಅಭಿಮಾನ ಎಷ್ಟು ದೊಡ್ಡದೋ ನನ್ನ ಶಕ್ತಿಯ ವಿಷಯದಲ್ಲಿರುವ ನಂಬಿ ಕೆಯೂ ಅಷ್ಟರಮಟ್ಟಿನದಿರುವಂತೆ ಕಾಣುತ್ತದೆ. ಆ ನಂಬಿಕೆಗೆ ಆಧಾರವಿಲ್ಲ ವೆಂದು ಬಿನ್ನಯಿಸಿಕೊಂಡೆ. ಆದರೆ ಅವರ ಸ್ನೇಹದ ಒತ್ತಾಯವನ್ನು ತಳ್ಳಿ ಹಾಕಲು ವಿಧಿಯಿಲ್ಲದವನಾದೆ. ನನ್ನ ಬೇರೆ ಕಾರ್ಯಾಕಾರ್ಯಗಳ ಅವಸರ ದಲ್ಲಿ ಅವರ ಗ್ರಂಥವನ್ನು ತೆರೆದು ನೋಡುವುದಕ್ಕೆ ಕೂಡ ನನಗೆ ಕಾಲಾವ ಕಾಶ ದೊರೆಯದೆ ಹೋಯಿತು.

ನನಗೆ ಹಿಂದೀ ಭಾಷೆಯ ಪರಿಚಯ ಇಲ್ಲ. ಆ ಭಾಷೆಯಲ್ಲಿ ತುಲಸೀ ದಾಸರೆಂಬವರು ರಚಿಸಿರುವ ರಾಮಾಯಣವು ಮಹಾ ಪ್ರಸಿದ್ಧವಾದ ಗ್ರಂಥ ವೆಂದು ಕೇಳಿದ್ದೇನೆ. ಮಹಾತ್ಮಾ ಗಾಂಧಿಯವರು ಆ ಗ್ರಂಥದಲ್ಲಿ ಗೌರವ ವನ್ನಿಟ್ಟಿದ್ದರೆಂದೂ ಕೇಳಿದ್ದೇನೆ. ಆದರೆ ವಾಲ್ಮೀಕಿ ರಾಮಾಯಣವನ್ನು ಅಷ್ಟಿಷ್ಟು ನೋಡಿರುವ ನನಗೆ ಮತ್ತೊಂದು ರಾಮಾಯಣ ಬೇಕೆನಿಸಿಲ್ಲ. ನಾನು ಹೊಸ ಭಾಷೆಗಳನ್ನು ಕಲಿತುಕೊಳ್ಳಬಹುದಾದ ವಯಸ್ಸು ಈಗ ಅಲ್ಲ. ಹಿಂದೀ ಮೂಲ ಗ್ರಂಥದಲ್ಲಿ ಏನೇನು ಸ್ವಾರಸ್ಯಗಳುಂಟೋ ಅದನ್ನರಿಯದ ವನು ಆ ಗ್ರಂಥದ ಕನ್ನಡದ ಅನುವಾದವನ್ನು ಕುರಿತು ಅಭಿಪ್ರಾಯಮಾಡಿ ಕೊಳ್ಳುವುದಾದರೂ ಹೇಗೆ? ಈ ನನ್ನ ಕಷ್ಟವನ್ನು ಶ್ರೀ ಅನಂತಪದ್ಮನಾಭ ರಾಯರವರಿಗೆ ತಿಳಿಯಪಡಿಸಿದ್ದೇನೆ.

ನಾನು ಹೇಳಬಹುದಾದ ಮಾತೆಂದರೆ ಶ್ರೀ ಅನಂತಪದ್ಮನಾಭರಾಯರವರ ಕನ್ನಡ ಪದ್ಯವನ್ನು ಕುರಿತದ್ದು. ಈ ಗ್ರಂಥವನ್ನು ನಾನು ಅಲ್ಲಲ್ಲಿ ನೋಡಿದ್ದೇನೆ. ಪದ್ಯಗಳ ಓಟ ಸೊಗಸಾಗಿದೆ. ಕುಮಾರವ್ಯಾಸನ ಪ್ರಸಾದ ಇದರ ರೀತಿಯಲ್ಲಿ ಕಾಣುತ್ತದೆ. ಕನ್ನಡ ಪದಗಳ ಮೇಲೆ ಶ್ರೀ ಅನಂತಪದ್ಮನಾಭರಾಯರಿಗಿರುವ ಹಿಡಿತವೂ, ಧಾಟಿಯಕಡೆ ಅವರಿಗಿರುವ ಕಿವಿಯೊಲವೂ, ಅವರ ಬರವಣಿಗೆಯ ಭಾವ ಪ್ರಸನ್ನತೆಯೂ ಲಾಲಿತ್ಯವೂ ಎಲ್ಲರನ್ನೂ ಮೆಚ್ಚಿಸಬಲ್ಲುವಾಗಿವೆ.

ಶ್ರೀಮಾನ್ ಅನಂತಪದ್ಮನಾಭರಾಯರವರು ನೈಜವಾಗಿ ವಿನಯ ಶಾಲಿಗಳು, ಮತ್ತು ಉದಾತ್ತ ವಿಚಾರಗಳಲ್ಲಿ ಶ್ರದ್ಧೆಯುಳ್ಳವರು. ಅವರು ರಾಮ ಕಥೆಯ ವಿಷಯದಲ್ಲಿ ಉತ್ಸಾಹವುಳ್ಳವರಾಗಿರುವುದು ಸ್ವಭಾವಾನುಗುಣವಾಗಿದೆ. ಲೋಕಪ್ರಸಿದ್ಧವಾದ ತುಲಸೀ ರಾಮಾಯಣದ ಛಾಯೆ ಕನ್ನಡಿಗರಿಗೆ ಪದ್ಯರೂಪದಲ್ಲಿ ದೊರಕುವಂತೆ ಮಾಡಿರುವುದು ಒಂದು ದೊಡ್ಡ ಉಪಕಾರವೆಂಬುದರಲ್ಲಿ ಯಾರಿಗೂ ಸಂದೇಹವಿರದು.

ಶ್ರೀಮಾನ್ ಅನಂತಪದ್ಮನಾಭರಾಯರ ಕೃತಿ ಲೋಕಪ್ರಿಯವಾಗಲಿ; ಅವರ ಕಾವ್ಯಶ್ರೀ ಅಭಿವೃದ್ಧಿ ಪಡೆಯುತ್ತಿರಲಿ.

ಬೆಂಗಳೂರು.
೧೮–೨–೧೯೪೯.

ಡಿ. ವಿ. ಜಿ.

# ವಿಜ್ಞಾಪನೆ

ನಾನು ಪ್ರಸಿದ್ಧ ಸಾಹಿತಿಯಲ್ಲ. ಕವಿಯೂ ಅಲ್ಲ. ಆದರೆ ಸಾಹಿತ್ಯವನ್ನು ಅಲ್ಪಸ್ವಲ್ಪ ಅವಲೋಕಿಸಿ ಸಾಹಿತಿಗಳ ಸೇವೆಮಾಡಿ, ಅವರೆಲ್ಲರ ಅನುಗ್ರಹದಿಂದ ಸಾಧ್ಯವಾದಷ್ಟು ಸಾಹಿತ್ಯದ ಅನುಭವ ಪಡೆದಿದ್ದೇನೆ. ಈ ಸಂದರ್ಭದಲ್ಲಿ ಅವರೆಲ್ಲರ ಉಪಕಾರವನ್ನು ಸ್ಮರಿಸಿಕೊಳ್ಳುವುದು ನನ್ನ ಕರ್ತವ್ಯ.

ಈ ಕಾವ್ಯವನ್ನು ಬರೆಯುವಂತೆ ಪ್ರೇರಿಸಿದವರು ಹಿರಿಯರೂ, ಪೂಜ್ಯರೂ ಆದ ವೇ|| ಬ್ರಂ|| ಶ್ರೀ|| ಬಿ. ಶ್ಯಾಮಣ್ಣನವರು. ಬೇಸರವಿಲ್ಲದೆ ನನ್ನ ಬಳಿಯಲ್ಲಿ ಕುಳಿತು ಹಿಂದಿಯಿಂದ ಕನ್ನಡಕ್ಕೆ ಆಗಾಗ್ಗೆ ಪರಿವರ್ತಿಸಿ, ಅನೇಕ ಮುಖದಿಂದ ನೆರವು ನೀಡಿದ್ದಾರೆ. ಅವರಿಗೆ ನಾನು ಚಿರಋಣಿ. ಈ ಕಾವ್ಯವನ್ನು ನಾನು ಬರೆದು ಮುಗಿಸಿದ್ದು ೧೯೩೬ ರಲ್ಲಿ. ಇದನ್ನು ಮಾನ್ಯ ಮಿತ್ರರಾದ ಪ್ರೊ|| ಡಿ. ಎಲ್. ನರಸಿಂಹಾಚಾರ್ಯರು ಅಲ್ಲಲ್ಲಿ ಅವಲೋಕಿಸಿ, ಪೂಜ್ಯ ಡಿ. ವಿ. ಜಿ. ಅವರಿಂದ ಮುನ್ನುಡಿಯನ್ನು ಬರೆಯಿಸೆಂದು ಆಜ್ಞಾಪಿಸಿದರು. ಪೂಜ್ಯರೂ, ಹಿರಿಯರೂ, ವಿದ್ವಾಂಸರೂ ಆದ ಶ್ರೀ|| ಡಿ. ವಿ. ಜಿ. ಅವರು ನನ್ನ ಮೇಲೆ ಕೃಪೆಯಿಟ್ಟು, ನಾನು ಕೊಡುತ್ತಿದ್ದ ತೊಂದರೆಗಳನ್ನೆಲ್ಲ ಸಹಿಸಿ, ಅಮೋಘವಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಅವರಿಗೆ ನನ್ನ ಪ್ರಣಾಮಗಳು. ಮಾನ್ಯ ಮಿತ್ರರಾದ ಆಸ್ಥಾನ ವಿದ್ವಾನ್ ವೇ|| ಬ್ರಂ|| ಶ್ರೀ|| ನೋ. ಶಂ. ಸುಬ್ರಹ್ಮಣ್ಯಶಾಸ್ತ್ರಿಗಳವರು ಈ ಕಾವ್ಯವನ್ನು ಅಷ್ಟಿಷ್ಟು ಓದಿ ನೋಡಿ, ಮೆಚ್ಚಿ, ಮೈಸೂರು ಸರಕಾರಕ್ಕೆ ಕಳುಹಿಸುವಂತೆ ಆಶ್ವಾಸನೆಯಿತ್ತರು. ಅವರ ಆಜ್ಞಾಪ್ರಕಾರ ಕಳುಹಿಸಿದ್ದೂ ಆಯಿತು. ಈ ಕಾವ್ಯಕ್ಕೆ ೧೯೩೮ರ ದೇವರಾಜಬಹದ್ದೂರ್ ಪ್ರಥಮ ಬಹುಮಾನವೂ ಬಂತು. ಪೂಜ್ಯರೂ ಗುರುಗಳೂ ಆದ ಗಮಕ ವಿದ್ವಾನ್ ಕೃಷ್ಣಗಿರಿ ಕೃಷ್ಣರಾಯರೂ, ಗೆಳೆಯರಾದ ಗಮಕ ವಿದ್ವಾನ್ ಸಂ. ಅಶ್ವತ್ಥನಾರಾಯಣರಾಯರೂ ಈ ಕಾವ್ಯದಿಂದ

ಒಂದೆರಡು ಭಾಗಗಳನ್ನು ವಾಚನಮಾಡಿ, ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲ ಹಿರಿಯರಿಗೂ, ಮಿತ್ರರಿಗೂ ನನ್ನ ಅನಂತಾನಂತ ವಂದನೆಗಳು.

ಗೆ|| ಕೆ. ಲಕ್ಷ್ಮೀನಾರಾಯಣ್ ಅವರು ಕಾರ್ಯಗೌರವದಿಂದ ಮಡಿಕೇರಿಗೆ ೧೯೫೦ನೇ ಜುಲೈ ತಿಂಗಳಲ್ಲಿ ಬಂದಿದ್ದರು. ಅವರು ಈ ಕಾವ್ಯದ ಪ್ರಕಟನಾಕಾರ್ಯವನ್ನು ತಾವೇ ನಿರ್ವಹಿಸುವುದಾಗಿ ಆಶ್ವಾಸನೆಯಿತ್ತು, ತಮ್ಮ ಜೊತೆಯಲ್ಲೇ ಹಸ್ತಪ್ರತಿಯನ್ನು ತೆಗೆದುಕೊಂಡು ಹೋದರು. ಇದರ ಬಹುಭಾಗ ಶೀಘ್ರವಾಗಿಯೇ ಮುದ್ರಣವಾಗಿದ್ದರೂ ಅನೇಕ ಅನಿವಾರ್ಯಗಳ ದೆಸೆಯಿಂದ ಈ ಕಾವ್ಯವು ಇದುವರೆಗೂ ಪ್ರಕಾಶಕ್ಕೆ ಬರಲು ಅವಕಾಶವೊದಗಿ ಬರಲಿಲ್ಲ. ಈಗ ಪ್ರಥಮ ಭಾಗವಾದರೂ ಪ್ರಕಟವಾಗುತ್ತಿದೆಯಲ್ಲಾ ಎಂದು ಸಂತೋಷಪಟ್ಟುಕೊಳ್ಳಬೇಕಾಗಿದೆ. ಪ್ರಕಟನೆಗೆ ನೆರವಾದ ದಿವಂಗತ ಶ್ರೀ ಕೆ. ತಮ್ಮಯ್ಯನವರ ಮಕ್ಕಳಾದ ಶ್ರೀ ಕೆ. ನರಸಿಂಹಸ್ವಾಮಿಯವರಿಗೆ ನಾನು ಕೃತಜ್ಞ.

ಮಡಿಕೇರಿ

ಮೈ. ಶೇ. ಅನಂತಪದ್ಮನಾಭರಾವ್

## ಭಾಗ ೧

॥ ಶ್ರೀಃ ॥

ವರ್ಣಾನಾಮರ್ಥ ಸಂಘಾನಾಂ ರಸಾನಾಂ ಛಂದಸಾಮಪಿ ।
ಮಂಗಳಾನಾಂಚ ಕರ್ತಾರೌ ವಂದೇ ವಾಣೀ ವಿನಾಯಕೌ ॥

ಭವಾನೀ-ಶಂಕರೌ ವಂದೇ ಶ್ರದ್ಧಾ ವಿಶ್ವಾಸರೂಪಿಣೌ ।
ಯಾಭ್ಯಾಂ ವಿನಾ ನಪಶ್ಯಂತಿ ಸಿದ್ಧಾಃ ಸ್ವಾಂತಸ್ಥಮೀಶ್ವರಮ್ ॥

ವಂದೇ ಬೋಧಮಯಂ ನಿತ್ಯಂ ಗುರುಂ ಶಂಕರ ರೂಪಿಣಮ್ ।
ಯಮಾಶ್ರಿತೋ ಹಿ ವಕ್ರೋಽಪಿ ಚಂದ್ರಃ ಸರ್ವತ್ರ ವಂದ್ಯತೇ ॥

ಸೀತಾರಾಮ ಗುಣಗ್ರಾಮ ಪುಣ್ಯಾರಣ್ಯ ವಿಹಾರಿಣೌ ।
ವಂದೇ ವಿಶುದ್ಧ ವಿಜ್ಞಾನೌ ಕವೀಶ್ವರ ಕಪೀಶ್ವರೌ ॥

ಉದ್ಭವಸ್ಥಿತಿ ಸಂಹಾರಕಾರಿಣೀಂ ಕ್ಲೇಶಹಾರಿಣೀಂ ।
ಸರ್ವ ಶ್ರೇಯಸ್ಕರೀಂ ಸೀತಾಂ ನತೋಽಹಂ ರಾಮವಲ್ಲಭಾಮ್ ॥

ಯನ್ಮಾಯಾ ವಶವರ್ತಿ ವಿಶ್ವಮಖಿಲಂ ಬ್ರಹ್ಮಾದಿ ದೇವಾಃಸುರಾ ।
ಯತ್ಸತ್ವಾದಮೃಷೈವ ಭಾತಿ ಸಕಲಂ ರಜ್ಜೌ ರಥಾಯೇಭ್ರ್ರಮಃ ॥

ಯತ್ಪಾದ ಪ್ಲವಮೇಕಮೇವಹಿ ಭವಾಂಭೋದೇ ಸ್ತಿತೀರ್ಷಾವತಾಂ ।
ವಂದೇಽಹಂ ತಮಶೇಷ ಕಾರಣಪರಂ ರಾಮಾಖ್ಯಮೀಶಂ ಹರಿಮ್ ॥

ನಾನಾ ಪುರಾಣ ನಿಗಮಾಗಮ ಸಮ್ಮತಂ ಯದ್-
ರಾಮಾಯಣೇ ನಿಗದಿತಂ ಕ್ವಚಿದನ್ಯತೋಽಪಿ ॥

ಸ್ವಾಂತಃ ಸುಖಾಯ ತುಲಸೀ ರಘುನಾಥಗಾಥಾ
ಭಾಷಾನಿಬಂಧಮತಿಮಂಜುಲಮಾತನೋತಿ ॥

ಶ್ರೀರಾಮ ಜಯ

# ಶ್ರೀ ತುಲಸೀ ರಾಮಾಯಣ

## ಬಾಲಕಾಂಡ.

### ಮಂಗಳಾಚರಣ

ಶ್ರೀ ರಮಣಿ ಹೃತ್ಕಮಲ ಸೂರ್ಯನು
ದಾರ ಗುಣಗಣ ಕಿರಣನಘತಮ
ಹಾರಿ ಸುಜ್ಞಾನಘನ ತೇಜೋರಾಶಿಯವಿನಾಶಿ ।
ನಾರದಾದಿ ಸಮಸ್ತ ಮುನಿಜನ
ಸೂರಿಗಳ ಸುಜ್ಞಾನ ಜ್ಯೋತಿಯ
ಪಾರ ಮಹಿಮಾರಾಮ ಸೀತಾರಾಮ ರಕ್ಷಿಪುದು ॥೧॥

ಜಾನಕೀಪತಿ ದಿವ್ಯನಾಮವ
ಸಾನುರಾಗದಿ ನೆನೆದು ಮುನಿಸತಿ
ಹೀನಜನ್ಮವ ನೀಗಿ ಪತಿಪದಪದ್ಮ ಸೇರಿದಳು
ಏನಮಾಡಿದೊಡೇನು ರಾಮನ
ಜಾನಿಸುವನೇ ಧನ್ಯ ಮುನಿಸುರ
ಧೇನು ಗಂಗಾತಾತ ರಕ್ಷಿಸುವೊಲಿದು ಶ್ರೀರಾಮ ॥೨॥

ನಾಗಭೂಷಣ ಸನಕ ನಾರದ
ಯೋಗಿಜನ ಹೃತ್ಕುಮುದ ಚಂದ್ರವಿ
ರಾಗಿ ಕರುಣಾವಾರಿನಿಧಿ ಗಂಗಾಧರನೆ ಹರನೆ
ರಾಘವೇಂದ್ರ ವಿಲಾಸ ಸಂತಸ
ರಾಗ ರಂಜನ ದೇವ ಶಿವ ಸು
ತ್ಯಾಗಿ ಗಿರಿಜಾರಮಣ ಪಾಲಿಸು ಸಕಲ ಲೋಕಗಳ ॥೩॥

ನನುವ ಚಂದ್ರನ ಗರ್ವ ಮುರಿಯುತ
ಲೊಗುಮಿಗೆಯ ಪ್ರೇಮದಲಿ ಲೋಕವ
ನಿಗಮನುತ ಕಯ್ಗಾಯ್ವೆ ಪರಿಹರಿಸುತಲಿ ವಿಘ್ನಗಳ ।
ಸಗುಣ–ನಿರ್ಗುಣರೂಪ ಗಜಮುಖ
ನಗೆಗೆಡೆಯ ಮಾಡದಿರು ಕರುಣದಿ
ಸೊಗದೊಳೀವರಕಾವ್ಯ ನುಡಿಯಲು ನೀಡು ಸನ್ಮತಿಯ ||೪||

ಸರಸಿಜಾಸನ ರಾಣಿ ಗುಣಮಣಿ
ಪರಮ ಘನ ವಿದ್ಯಾಭಿಮಾನಿನಿ
ಹರಿಹರಾದಿ ಸಮಸ್ತ ಸುರಗಣ ಮಾರ್ಗದರ್ಶಿನಿಯೆ ।
ತರುಣಿ ರವಿಶಶಿನಯನೆ ಶಾರದೆ
ನಿರುತ ಕವಿಕುಲ ಹೃದಯ ಮಂದಿರೆ
ನೆರೆದು ಸನ್ಮತಿ ಪಾಲಿಸೌ ನೀನೆಲಸು ರಸನೆಯಲಿ ||೫||

ಜಾನಕೀ ಪದಪದ್ಮಮೂಲದಿ
ಮೌನಿಪತಿ ಕುಳಿತಿರಲು ರಘುಪತಿ
ತಾನೆ ತೋರಿದ ತನ್ನ ಲೀಲೆಗಳೆಲ್ಲಮಂ ಮತ್ತೆ ।
ಮೌನಿ ತುಲಸೀದಾಸ ಕವಿಕುಲ
ಭಾನು ಕರುಣದೊಳಿತ್ತ ವರವನು
ಸಾನುರಾಗದಿ ರಾಮಚರಿತವ ನುಡಿಯೆ ಕನ್ನಡದಿ ||೬||

ಕವಿಯೆನಿಸಲಾನಜ್ಞ, ಕಾವ್ಯದ
ಸವಿಯನರಿತವನಲ್ಲ, ಗೂಢಾ
ರ್ಥವನು ಛಂದಸು ಭಾವ ಲಕ್ಷಣ ಪ್ರಾಸಗಳನರಿಯೆ ।
ಅವಿನಯವ ಸಜ್ಜನರು ತಾರದೆ
ಸವಿರಸವನೂಡುತ್ತ ಸನ್ಮತಿ
ಜವದೊಳೊರೆವುದು ನಡೆಸಿ ಸನ್ಮಾರ್ಗದಲಿ ಸಲಹುವುದು ||೭||

ಕನ್ನಡದ ಕವಿಕುಲದ ಗುರುಗಳು
ರನ್ನ ಕವಿ ಲಕ್ಷ್ಮೀಶ ಪಂಪರು
ಜನ್ನ ಕುವರವ್ಯಾಸ ಹರಿಹರ ಪೊನ್ನ ಮುದ್ದಣರು ।
ಕನ್ನಡದ ಹಿರಿಮೆಯನು ಬೆಳಗಿದ
ರನ್ನು ವಂದಿಸುತವರ ಚರಣಗ
ಳನ್ನು ನೆನೆದಾಂ ರಾಮಮಾನಸಚರಿತವೊರೆಯುವೆನು ॥೮॥

ರಾಮಮಾನಸ ಚರಿತವನು ಸಿರಿ
ರಾಮನೇ ನುಡಿಯುವನು ಭಕ್ತರ
ಕಾಮನೆಯ ನೀಡಲ್ಕೆ ಕವಿಗಳನಂತ ವಾಣಿಯಲಿ ।
ರಾಮನಾಮಾಮೃತದ ಸವಿಗಂ
ಡೀ ಮಹಾಕಾವ್ಯವನು ವಿರಚಿಸಿ
ರಾಮಭಕ್ತರ ಪಾದಮೂಲದೊಳರ್ಪಿಸುವೆ ಮುದದಿ ॥೯॥

ಪರಮಪುರುಷನೆ ಕಥೆಗೆ ನಾಯಕ
ಸಿರಿಯೆ ನಾಯಕಿ ರಾಜಋಷಿಗಳು
ಹಿರಿಯರೆನಿಸಿದ ಪ್ರಾಣದೇವರು ಜೀವವಿತ್ತವರು ।
ಹಿರಿಯ ಕವಿವಾಲ್ಮೀಕಿ ಕರುಣದಿ
ಮರಳಿ ತುಳಸೀದಾಸ ಜನುಮದೊ
ಳೊರೆದ ಸಿರಿ ರಘುರಾಮ ಚರಿತೆಯ ಸಾಧುಜನಕೊಲಿದು ॥೧೦॥

ಅವನಿಯೊಳು ಋಷಿ ಯೋಗಿ ಧರಣೀ
ದಿವಿಜರಿಗೆ ಮೇಣರಸು ಮಂತ್ರೀ
ನಿವಹಕಿದು ಸನ್ಮತಿಯ ನೀಡುವುದವರ ಕೃತಿಯಂತೆ ।
ಕವಿಗಮಕಿ ವಾಗ್ಮಿ ಪ್ರವರರಿಗೆ
ನವೆವ ವಿರಹೀಜನಕೆ ಮೆಚ್ಚಿದು
ಸವಿಯ ನವರಸ ಕಾವ್ಯ ರಘುಪತಿಚರಿತಮಾನಸವು ॥೧೧॥

ನುಡಿಯು ಕನ್ನಡ ನಡೆಯು ಕನ್ನಡ
ಒಡಲು ಕನ್ನಡ ತಾಯಿ ಕೊಟ್ಟುದು
ಬಿಡದು ಕನ್ನಡನಾಡು ನಮ್ಮನು ಪ್ರೇಮಬಂಧನದಿ ।
ನಡೆನುಡಿಗಳಿಂದೊಂದುಗೂಡಿಸಿ
ನಡೆಸುವಳು ನಲ್ಮೆಯಲಿ ಕರುಣದ
ಕಡಲು ಕನ್ನಡತಾಯಿ ಪದಪದ್ಮಗಳಿಗೆರಗುವೆನು ॥೧೨॥

ಪಡೆದು ರಘುವರಚರಿತಮಾನಸ
ಮಧುವ ಸಜ್ಜನ ಭೃಂಗ ಝೇಂಕಾ
ರದಲಿ ಕಾವ್ಯ ಸರೋರುಹಾಕರದಲ್ಲಿ ಹುಡುಕುತಿರೆ ।
ವಿದಿತಘನ ರಾಮಾಯಣ ಕಥಾ
ಮಧುವ ಕಾಣಲು ಸವಿದು ಕೀರ್ತಿಯ
ಮುದದಿ ಝೇಂಕೃತಿಯಿಂದ ಹಾಡುತ ಹಾರುತಿರುತಿಹವು ॥೧೩॥

# ವಿಶ್ರಾಮ ೧

**ಸೊ॥ ಶಿವನು ತನ್ನನು ತೊರೆಯೆ ದುಃಖದಿ**
**ಶಿವೆಯು ಯಾಗಾಗ್ನಿಯಲಿ ದೇಹವ**
**ಸವೆದು ಪರ್ವತ ಕುವರಿಯಾದಳು ಲೋಕ ನಲಿದಾಡೆ ॥**

ರಾಮಚಂದ್ರನ ಪರಮಮಂಗಳ
ನಾಮ ಪಾವನವೆಂದು ನಿತ್ಯವು
ಕಾಮಹರ ಸುಜ್ಞಾನ ಗುಣಯುತ ಜಾನಿಸುವ ಮುದದಿ ।
ಆ ಮಹಾಕಾಶಿಯೊಳು ನೆಲಸುತ
ತಾಮಸವ ಪರಿಹರಿಸಿ ದುರಿತ ವಿ
ರಾಮ ಗೈಯುವ ಕಾಶಿ ವಿಶ್ವೇಶ್ವರನು ತನ್ನವರ ॥೧॥

ಮುನಿಪ ಭಾರದ್ವಾಜ ಸಂಶಯ
ಮನದಿ ವಿನಯದಿ ಯಾಜ್ಞ್ಯವಲ್ಕ್ಯನ
ವನಜಪದಗಳಿಗೆರಗಿ ರಾಮನ ಮಹಿಮೆ ಬೆಸಗೊಂಡ ।
ಜನಕ ನೀಂ ಸುಜ್ಞರಿಗೆ ರಘುಪತಿ
ಘನ ಚರಿತೆಗಳನೆಲ್ಲ ತಿಳಿದಿರ
ಲೆನಗೆ ತತ್ವರಹಸ್ಯಮನ್ನೊರೆ ತಂದೆ ಸಲಹೆಂದ ॥೨॥

ಗುರುವೆ ಕಾಶೀವಿಶ್ವನಾಥನು
ದುರಿತವೊರೆಸುತ ಮೋಕ್ಷವೀವನು
ಕರುಣದಿಂ ರಘುರಾಮಮೂರ್ತಿಯ ನಾಮ ಮಹಿಮೆಯಲಿ ।
ತರಣಿ ವಂಶದೊಳೊಗೆದು ದಶರಥ
ನರಪಸುತನಾಗೆಸೆದು ಕೀರ್ತಿಯ
ಮೆರೆದನೆರಡನೆ ರಾಮ ಬಳಲಿದ ತೊಳಲುತಡವಿಯಲಿ ॥೩॥

ಪರಶಿವನ ಮನದಿಷ್ಟಮೂರ್ತಿಯು
ತರಣಿವಂಶ ಲಲಾಮರಾಮನು
ಧರೆಯೊಳಿರ್ವರು ರಾಮಚಂದ್ರರು ಬಂದಬಗೆಯೆಂತು ।
ಧರಣಿಜಾಪತಿ ರಾಮ ಗಂಗಾ
ಧರನ ಮಾನಸ ಮೂರ್ತಿಯೇಂ ಪರಿ
ಹರಿಸು ಸಂಧೆಗ ರಮಣ ರಾಮರ ಪರಿಯ ಪೇಳೆಂದ ॥೪॥

ನಗುತ ಮುದದಲಿ ಯಾಜ್ಞ್ಯವಲ್ಕ್ಯನು
ರಘುವರನ ಮಹಿಮೆಗಳ ನೀನೇ
ಸೊಗದೊಳರಿತಿಹೆ ಮತ್ತೆ ಶುಭವನು ಬಗೆವೆ ಲೋಕಕ್ಕೆ ।
ಮುಗುದನೊಲು ಕೇಳುವೆಯ ಮುನಿವರ
ನಗೆಗೆಡೆಯ ಮಾಡದಿರು ರಾಮನ
ಬಗೆಯರಿಯದವನಲ್ಲ ಸನ್ಮತಿ ಸುಗುಣಿ ನೀನೆಂದ ॥೫॥

ಆದೊಡಂ ನುಡಿಯುವೆನು ಸಿರಿ ಸೀ
ತಾಧವನ ಶುಭಚರಿತೆಯೆನಗುಂ
ಸಾಧನವ ಮಾಡುವೆನು ಮೋಕ್ಷವ ಪೊಂದಲೀ ಜಗದಿ ।
ಸಾದರದಿ ಹರಿ ಕರುಣೆ ಪಡೆದೊಡೆ
ಮೇದಿನಿಯು ವೈಕುಂಠ ಹರಪುರ
ಮಾದಪುದು ಮುನಿನಾಥ ರಾಮನ ಮಹಿಮೆ ಕೇಳೆಂದ ॥೬॥

ಆ ಮಹೇಶ್ವರಿಯೊಂದು ದಿವಸಂ
ಕಾಮಹರನಿಂಗೆರಗಿ ವಿನಯದಿ
ರಾಮಮಹಿಮಾ ವಿಸ್ತರವನೊರೆಯೆಂದು ಕೇಳಲ್ಕೆ ।
ಕಾಮಿನಿಯ ಬಯಕೆಯನು ಮನ್ನಿಸಿ
ರಾಮನಂ ನೆನೆನೆನೆದು ಶಂಕರ
ರಾಮ ಚರಿತೆಗಳೊರೆದ ದಾಕ್ಷಾಯಿಣಿಗೆ ಕರುಣದಲಿ ॥೭॥

ಕೇಳಲದ ಮೂಡಿದುದು ಸಂದೆಗ
ವ್ಯಾಳ ಶಂಕರಿಗಾಗ ಮನದಲಿ
ಫಾಲನೇತ್ರನ ಬೆಸಗೊಳಲು ಬಲುನೊಂದ ಮನದಲ್ಲಿ ।
ಪೇಳಿ ರಾಮರಹಸ್ಯ ಕುಂಭಜ
ನಾಲಯಕೆ ಕರೆತಂದ ಪತ್ನಿಯು
ಪಾಲಿಸಿದ ಮುನಿನಿಕರ ದರ್ಶನವಿತ್ತು ಕೃಪೆಯಿಂದ ॥೮॥

ಮುನಿಗಳಿಗೆ ಹರಿಭಕ್ತಿ ಮರ್ಮವ
ನನಘ ತಿಳುಹುತ ರಾಮಮೂರ್ತಿಯ
ಗುಣವ ಪಾಡುತಲಿದ್ದ ಋಷ್ಯಾಶ್ರಮಗಳಲಿ ಚರಿಸಿ ।
ಮುನಿ ಮುಖದಿ ರಘುವರನ ಮಹಿಮಾ
ಘನತೆಯುಪದೇಶಿಸುತ ಮಂಜಿನ
ಮನೆಯ ಸಾರ್ದ ಪರಾತ್ಪರನು ದಾಕ್ಷಾಯಿಣೀ ಸಹಿತ ॥೯॥

ಹರಿಯ ನೋಳ್ಪಾತುರವು ಮೊಳೆತುದು
ಹರಗೆ ಪರಮಾಶ್ಚರ್ಯಮಾದುದು
ತರಳೆ ದಾಕ್ಷಾಯಿಣಿಗೆ ಶಿವಪರಮಾತ್ಮನಾಗಿರಲು ।
ನರನ ರಾಮನ ದರ್ಶನಾತುರ
ಹರನಿಗೇಕೆಂದರಿಯುದಾದಳು
ಸರಿದಳಾ ಪತಿ ಹೋದ ಮಾರ್ಗದಿ ಸಂದೆಗದ ಮನದಿ ॥೧೦॥

ನರನ ಹಸ್ತದಿ ಮರಣ ಬಯಸಲು
ವರವನಿತ್ತನು ರಾವಣಗೆ ವಿಧಿ
ಹರಿಯದನು ಪಾಲಿಸಲು ಮಾನವ ಜನ್ಮ ತಾಳಿದನು ।
ಅರಿಯದೊಲು ನರರೂಪಿನಿಂದಿರೆ
ಸಿರಿವರನ ಕಾಣದೆಯೆ ಶಂಕರ
ತರಹರಿಸಿ ಮನದಲ್ಲಿ ನೊಂದನು ದರ್ಶನಾತುರದಿ ॥೧೧॥

ಅನಿತರೊಳು
ದನುಜ ರಾವಣ ಗೈಯೆ ದುಃಖದೊ
ಳಿನಕುಲಜ ಸೌಮಿತ್ರಿ ವೆರಸುತಲಳಲುತಿರುತಿರ್ದ ।
ಇನಕುಲಜ ಮಾಯಾವಿನೋದನು
ಮನುಜ ವೇಷದಿ ಗೈವ ಪರಿಯ
ನನಘ ಶಿವ ನೋಡುತ್ತಲಚ್ಚರಿಗೊಂಡ ಮನದಲ್ಲಿ ॥೧೨॥

ನೋಡಿದನು ಹರನಾಗ ಬಲುಕೊಂ
ಡಾಡಿದನು ಹರಿಮಹಿಮೆ ತನುವೀ
ಡಾಡಿದನು ಭಕ್ತಿಯಲಿ ರಘುಪತಿ ಪಾದಪದ್ಮದಲಿ ।
ಹಾಡಿದನು ಹರಿಗುಣವ ಮರೆಯೊಳು
ನೋಡಿ ಪುಳಕಾಶ್ರುಗಳು ಬರೆ ಕಾ
ಡಾಡಿ ರಾಮಗೆ ತಾನು ಕಾಣಿಸದಿರ್ದ ಸೂಕ್ಷ್ಮದಲಿ ॥೧೩॥

ಜಯ ಜಗತ್ಪಾಲಕನೆ ಜಯಜಯ
ಜಯ ಜಗತ್ಪಾವನನೆ ಜಯಜಯ
ಜಯತು ಸೀತಾರಾಮ ಜಯಜಯ ಸಚ್ಚಿದಾನಂದ ।
ಜಯತು ಮಂಗಳನಾಮ ರಾಮನೆ
ಜಯಯೆನುತ ರೋಮಾಂಚನದಿ ಹರ
ಭಯವಿದೂರನು ನಡೆದ ಸಂತಸ ಮನದಿ ಗಿರಿವರಕೆ ॥೧೪॥

ನರನ ವರ್ಣನೆಯಹಿತಮಾದುದು
ಪರಮ ಮಹಿಮಾರ್ಣವನು ಪರಶಿವ
ಸುರನರೋರಗ ವಿನುತ ಸನ್ಮುನಿವಂದ್ಯ ಜಗಭರಿತ ।
ಹರನೆ ಸೃಷ್ಟಿ ಸ್ಥಿತಿ ಲಯಾಧಿಪ
ಪರಮ ಮಂಗಳಧಾಮನಿವನಾ
ನರಪ ತನುಜನ ನುತಿಪುದೇಕೆನುತವಳು ನೋಡಿದಳು ॥೧೫॥

ಪಾವನನು ಪತಿ ಸತ್ಯರೂಪನು
ಕೋವಿದನು ಸರ್ವಜ್ಞ ಶಂಕರ
ದೇವನೀ ವಾಣಿಗಳು ಜಗದೊಳಗಿನ್ನು ಪುಸಿಯಹುದೆ ।
ಪಾವನನೆ ರಘುವರನು ಶಿವಗಿಂ
ದೇವದೇವನೆ ನಿರ್ಗುಣನೆ ಸಂ
ಭಾವ್ಯನೇನೀ ದಶರಥಾತ್ಮಜನೆಂದು ಮರುಗಿದಳು ॥೧೬॥

ಮತಿವಿಕಲ್ಪವನರಿತು ನಗುತಾ
ಸತಿಯ ಮನಮಂ ತಿರ್ದಿ ಸುರಮುನಿ
ನುತನ ರಾಮನ ಪರಿಯ ವಿವರಿಸಿ ಬಿಡಿಸಿ ತೋರಿದನು ।
ಕ್ಷಿತಿಯೊಳವನನ್ನರಿಯಲಾರರು
ಸುತಗುಣನ ನೀನೈದಿ ನೋಡಲಿ
ಸತಿಯೆ ಪರಿಕಿಸಿ ಬಂದು ತಿಳುಹೆನಗೆಂದ ಗಿರಿಪತಿಯು ॥೧೭॥

ದೇವಿಯಂ ಕಳುಹಲ್ಕೆ ಶಂಕರ
ಗಾವ ಬಗೆಯಿಂ ಶಾಂತಿದೋರದಿ
ರಾ ವಿರಾಗಿಯು ರಾಮಜಾನದಿ ಕುಳಿತ ಮೋನದಲಿ ।
ಆವ ಬಗೆಯಿಂದಾ ರಘೋತ್ತಮ
ಪಾವನತ್ವವ ಕೆಣಕಿ ನೋಡುವೆ
ದೇವನೋ ಮೇಣವನು ನರನೋ ತಿಳಿಯಬೇಕೆನುತ ॥೧೮॥

ಚಿತ್ರಕೂಟವ ಸೇರ್ದ ರಾಮ ವಿ
ಚಿತ್ರ ಮಾಯಾ ಶೋಧನದಿ ಶತ
ಪತ್ರಲೋಚನೆ ಸೀತೆಯಾದಳು ನೆನೆದ ಮಾತ್ರದಲಿ ।
ಮಿತ್ರ ಕುಲಜರ ಕಂಡು ನಿಂದು ಪ
ವಿತ್ರ ರೂಪದಿ ನಲಿಯೆ ಲಕ್ಷ್ಮಣ
ನತ್ತ ಕಂಡನು ಸೀತೆಯೋಲಿನ್ನೊರ್ವ ರಮಣಿಯನು ॥೧೯॥

ಎರಡನೆಯ ಜಾನಕಿಯ ಕಾಣುತ
ಲರರೆಯೆಂದಚ್ಚರಿಯ ತಾಳುತ
ಲರಿಯದಂತಿರುತಿರ್ದ ಲಕ್ಷ್ಮಣನಿದು ವಿಚಿತ್ರವೆನೆ ।
ತರುಣಿ ಕಣ್ಣೀರ್ಗಳಲಿ ಮುಂಬರಿ
ದರಿದು ರಾಮನ ಬರವ ನಿಂದಳು
ಪರಮ ಕರುಣಾಸಿಂಧು ಕಂಡನು ದಕ್ಷಜಾತೆಯನು ॥೨೦॥

ತಾಯೆ ದಶರಥ ಕುವರನಾಂ ರಘು
ರಾಯ ಕುಲಜಂ ರಾಮಚಂದ್ರನು
ಕೈಯ ಮುಗಿವೆನು ಲೋಕನಾಥನ ರಾಣಿ ಸದ್ವಾಣಿ ।
ಮಾಯೆ ನೀ ನಡೆಯುತ್ತಲೊರ್ವಳೆ
ನೋಯುವೆಯ ಕರುಣಿಸಲು ಭಕ್ತರ
ತಾಯಿ ನಿನಗೇಂ ದಯವೊ ಶರಣರೊಳೆಂದನಾ ರಾಮ ॥೨೧॥

ಎಲ್ಲಿ ಮಂಗಳರೂಪ ಪರಶಿವ
ನೆಲ್ಲಿ ಗಣಗಳು ಭೃಂಗಿ ಭೂತಗ
ಳೆಲ್ಲಿ ನಂದೀಶ್ವರನು ಬಳಲಿದೆ ನಡೆಯುತೆನಗಾಗಿ ।
ನಿಲ್ಲು ಪದಪದ್ಮಗಳ ತೊಳೆಯುವೆ
ನಿಲ್ಲೆನುತ ಶಿವಭಕ್ತಿಪರವಶ
ನಲ್ಲೆ ನಿಂದನು ನೋಡಿ ದಾಕ್ಷಾಯಿಣಿಯ ನಿಜವರಿತು ॥೨೨॥

ನೋಡಿದಾಗಲೆ ಮನದ ಶಂಕೆಗ
ಳೋಡಿದುವು ನುಡಿ ಕೇಳ್ದು ಸತಿ ಕೊಂ
ಡಾಡಿದಳು ರಘುವರನ ಮಹಿಮೆಗಳರಿತು ಸಂತಸದಿ ।
ಮೂಢಮತಿ ತಾನಾದೆನೆನ್ನುತ
ಬೇಡಿ ಮನ್ನಣೆ ಮೌನದಲಿ ಮಾ
ತಾಡದೆಯೆ ಹಿಂದಿರುಗಿದಳು ಪತಿಪಾದ ಸನ್ನಿಧಿಗೆ ॥೨೩॥

ಶೋಧನೆಯ ಹುರುಳರಿತ, ಭೀತಿಯ
ಬೋಧೆಯಾಗಲ್ಕನಿತರಲಿ ಸೀ
ತಾಧವನು ನಿಜಮಾಯೆಯನು ಬೀಸಿದನು ಕಾನನದಿ ।
ಆದುವಲ್ಲಿ ವಿಚಿತ್ರಗತಿಗಳು
ಮಾಧವನ ಮಾಯಾಪ್ರಪಂಚವು
ಸಾಧಿಸಿತು ದಾಕ್ಷಾಯಿಣಿಯ ಮುಂದೆಸೆದು ನಿವಿಸದಲಿ ॥೨೪॥

ಎತ್ತ ನೋಡಿದೊಡತ್ತ ರಘುವರ
ಚಿತ್ರವನು ಸೆಳೆಯುತಿಹ ದೃಶ್ಯವ
ನುತ್ತಮೆಗೆ ತೋರಿದನು ಬಹುರೂಪ ಪ್ರಪಂಚವನು ।
ಇತ್ತಲತ್ತಲು ರಾಮ ಜಾನಕಿ
ಮತ್ತೆ ಲಕ್ಷ್ಮಣರಿವರ ರೂಪ ವಿ
ಚಿತ್ರಮೆಸಗಿದುದಲ್ಲಿ ದಾಕ್ಷಾಯಿಣಿಯ ಮನಸೆಳೆದು ॥೨೫॥

ಸಿರಿ ಸರಸ್ವತಿ ತಾನು ಪತಿಗ
ಳ್ವೆರಸಿ ರಾಮನ ಸೇವೆ ಗೈವೆಡೆ
ಸುರರು ತಂತಮ ಸತಿಯರೊಡಗೂಡುತ್ತ ರಘುಪತಿಯ ।
ಚರಣತಲದಲ್ಲಿಹುದ ಕಂಡಳು
ಮೆರೆಯೆ ಸಚರಾಚರವು ಹರಿಯಲಿ
ತರುಣಿ ಬಹುರಾಮರನು ದರ್ಶನ ಮಾಡಿದಳು ವನದಿ ||೨೬||

ಹತ್ತು ದೆಸೆಗಳೊಳಾ ವಿಚಿತ್ರವೆ
ಕೆತ್ತಿರಲು ಸತಿ ದೇಹವನೆ ಮರೆ
ಯುತ್ತ ಮೂರ್ಛೆಗೆ ಸಂದಳಾಗಲು ಮಹಿಮೆಗಳ ನೋಡಿ ।
ಮತ್ತೆ ಶೀತಳ ಮಂದ ಪರಿಮಳ
ಯುಕ್ತ ಮಾರುತ ಬೀಸೆ ಕಣ್ದೆರೆ
ಯುತ್ತ ನಿಂದಳು ರಾಮಮೂರ್ತಿಯ ಲೀಲೆಗಳ ನೆನೆದು ||೨೭||

ತೊರೆಯುತನುಮಾನವನು ರಾಮನ
ಮರೆಯಹೊಕ್ಕರೆ ತೆರೆಯ ತೆಗೆದನು
ತರುಣಿ ಕಂಡಳು ವನದೊಳಳಲುವ ರಾಮಲಕ್ಷ್ಮಣರ ।
ಭರದಿ ವಂದಿಸುತಿರ್ವರಂ ಸತಿ
ಗಿರಿಗೆ ನಡೆದಳು ಶಿವನ ಭಕ್ತಿಯೊ
ಳೆರಗಿ ಭಯದಲಿ ನಿಂದಿರಲ್ಕುಪಚರಿಸಿದನು ಹರನು ||೨೮||

ಮನದ ಸಂಶಯ ನೀಗಿತೇ ಸತಿ
ಯಿನಕುಲಜ ದರುಶನವನಿತ್ತನೆ
ಘನಕರುಣಿ ರಘುರಾಮ ಮಹಿಮಾ ಬಗೆಯ ನುಡಿಯೆಂದ ।
ನಿನಗೆ ನಮಿಸುವ ಪರಿಯೊಳವನಂ
ಮಣಿದೆನಾಂ ನೋಡಿದೆನು ರಾಮನ
ಜನಿತಮಾದುದು ಸತ್ಯ–ಮಿಥ್ಯವನೊಗೆದೆ ಮನದಿಂದ ||೨೯||

ತರಳೆ ಸೀತಾಮಾತೆ ರೂಪವ
ಧರಿಸಿದುದ ಹರತಿಳಿದು ಸತಿಯೇ
ಧರಣಿಜಾಮಣಿಯೆಂದು ನಮಿಸಿದ ಮಾತೆ ನೀನೆನುತ ।
ಅರಿತೆ ನಿಜಮಂ ಯೋಗಬಲದಿಂ
ತರುಣಿ ನಿನ್ನಾಂ ಮುಂದೆ ಸತಿಯೆಂ
ದರಿದೆನಾದೊಡೆ ನರಕಭಾಜನನಹೆನು ತಾಯಿಯಲಿ ॥೩೦॥

ಇಷ್ಟದೈವದ ರಮಣಿ ಸೀತಾ
ದೃಷ್ಟಿ ಮೂಡಿತು ರೂಪ ಧರಿಸುತ
ಶಿಷ್ಟಮಾರ್ಗವ ತೊರೆದೆ ರಾಮನ ಪರಿಕಿಸುವ ನೆಪದಿ ।
ಮುಟ್ಟಿ ನಿನ್ನಂ ಸತಿಯ ಭಾವವ
ನಟ್ಟಿದೆಂ ಮನದಿಂದ ದಕ್ಷಜೆ
ತೊಟ್ಟು ನೀನಾ ಜನನಿ ರೂಪವ ಮಾತೆಯೆನಗೆಂದ ॥೩೧॥

ನೀನು ದೃಢಮತಿ ಭಕ್ತ ನಿನ್ನ ಸ
ಮಾನರಿಹರೇನುಗ್ರ ಶಪಥದಿ
ಮೀನಲೋಚನೆಯನ್ನು ತೊರೆದಿಹೆಯೆಂದು ಗಗನದಲಿ ।
ವಾಣಿ ಮೊಳಗಲು ಕೇಳ್ದು ಶಂಕರಿ
ಕಾಣದೆ ಸುಮಾರ್ಗವನು ಪತಿಪದ
ಜಾನದಿಂದೆರಗಿದಳು ದುಃಖದಿ ಕ್ಷಮೆಯ ಬೇಡುತ್ತ ॥೩೨॥

ಸತಿಗೆ ರಾಮನ ಕತೆಗಳೊರೆಯುತ
ಮತಿಯನೆರೆದನು ತಾನು ತಪದೊಳು
ಮಥಿಸಿದನು ಮನವನ್ನು ಲೋಕಕೆ ಮೌನಮಯನಾಗಿ ।
ಅತಿಚಪಲಮನ ಕೆಡಿಸಿತೆನ್ನನು
ಹುತವಹಗೆ ಬಲಿಗೊಟ್ಟು ದೇಹವ
ಪತಿಯ ಸೇರುವೆನೆಂದು ಸಂಕಲ್ಪವನು ಮಾಡಿದಳು ॥೩೩॥

ರಾಮ ಪಾಪವಿರಾಮ ಮಂಗಳ
ಧಾಮ ರವಿಕುಲ ಸೋಮ ರಾಕ್ಷಸ
ಭೀಮ ದಶರಥರಾಮ ಜಯಸಂಗ್ರಾಮ ರಘುರಾಮ ।
ಕಾಮಪಿತ ಭುವನಾಭಿರಾಮನೆ
ಸೋಮಮೌಳಿಯ ಪಾದ ನಂಬಿದ
ಕಾಮಿನಿಯ ಕರುಣಾಳು ಪೊರೆಯೆಂದೊರಲಿದಳು ಸತಿಯು ||೩೪||

ಇಂತು ದಕ್ಷಾಯಿಣಿಯು ವಿರಹದ
ಚಿಂತೆಗಾಸರೆಯಾಗಿ ಕಳೆದಳು
ಕಾಂತೆ ಎಂಬತ್ತೇಳುಸಾವಿರ ವರ್ಷಗಳ ನೂಕಿ ।
ಕಂತುಪಿತನಾಜ್ಞೆಯಲಿ ದಕ್ಷನ
ನಂತಪದವಿಯ ಪಡೆದನೆಂಬಾ
ಸಂತಸದ ಸದ್ವಾರ್ತೆ ಕೇಳ್ದಳು ಮನದೊಳುಬ್ಬಿದಳು ||೩೫||

ಕರೆಸಿ ದಿಕ್ಪಾಲಕರ ದಕ್ಷನು
ನೆರೆಸಿ ಮುನಿಗಳ ಯಾಗಕೋಸುಗ
ಸುರರ ಬರಿಸಿದ ಸುರಸದೀ ತೀರದಲಿ ನಡೆಸಲ್ಕೆ ।
ತೆರಳೆ ಕಿನ್ನರ ನಾಗವಿದ್ಯಾ
ಧರರು ಖೇಚರ ಸಿದ್ಧ ಯಕ್ಷರು
ತರಳೆ ಕಂಡಳು ಪಿತನ ನೋಳ್ಪಾತುರವು ಪೆರ್ಚಿದುದು ||೩೬||

ತವರು ಮನೆಯಂ ಸೇರುವಾಸೆಯೊ
ಳವಳು ಕೇಳಲು ಪತಿಯನುಜ್ಞೆಯ
ನವೆದುದಿಲ್ಲವೆ ರಮಣಿ ಪಿತನಿಂ ಪಿಂತ್ಸಸೂಯೆಯಲಿ ।
ಅವನು ನೂಕಿದನಲ್ಲವೇ ನಿಜ
ಕುವರಿಯುರ ಕರೆಸುತ್ತ ತೊರದಿಹ
ಕುವರಿಯೋರ್ವಳ ನಿನ್ನನದರಿಂ ಹೋಗಬೇಡೆಂದ ||೩೭||

ಹಿಂದೆ ಸರಸಿಜಭವನ ಸಭೆಯಲಿ
ನಿಂದಿಸಿದ ಪರಿಪರಿಯೊಳೆನ್ನನು
ತಂದೆಯೂರನು ಸೇರದಿರು ನೀನೆಂದು ನುಡಿಯುತಿರೆ ।
ಇಂದುಮುಖಿ ದುಃಖಗಳ ಶಿವಮನ
ದಂದು ಮಂತ್ರೀ ಸಹಿತ ದಕ್ಷನ
ಮಂದಿರಕೆ ಕಳುಹಿದರೆ ಹೊರಟಳು ಪತಿಯ ಪದಕೆರಗಿ ॥೩೮॥

ಬಂದ ಮಗಳಂ ಮನ್ನಿಸದೆ ಬಾ
ಯೆಂದು ಕರೆಯದೆ ಕುಶಲವರಿಯದೆ
ನಿಂದಿಸಲು ಪಿತ ಮುಗುಳುನಗುತಿಹರಕ್ಕತಂಗಿಯರು ।
ಪೊಂದಲಪಮಾನವನು ನಿಲಯಕೆ
ಬಂದ ತೆರನಾಯ್ತಿಲ್ಲಿ ನುಡಿಸದೆ
ನಿಂದು ಬಾಯ್ದೆರೆಯುತ್ತಲಣಕದಿ ನೋಡುವರು ಖಳರು ॥೩೯॥

ತಂದೆ ತನ್ನನು ತೊರೆದನೆಂಬುದ
ರಿಂದ ನೋಯಳು ಯಾಗದಲಿ ಪತಿ
ಗೊಂದು ತಾಣವ ನೀಡದಿರೆ ಕಂಡದನು ಮರುಗಿದಳು ।
ಇಂದುಧರಗಪಮಾನ ಮಾಡಲು
ತಂದೆಯೆಸಗಿದ ಕೃತ್ಯದಿಂ ಬಲು
ನೊಂದು ಕೇಳ್ದಳು ವಿನಯದಿಂ ನಮಿಸುತ್ತ ದಕ್ಷನನು ॥೪೦॥

ಮಾತನಾಡದೆ ಹೇಸಿ ನಡೆಯಲು
ತಾತ, ದಾಕ್ಷಾಯಿಣಿಯು ಸುರರಂ
ತೇತಕೀ ದುರ್ಮತಿಯು ಮೊಳೆತುದು ಪಿತನ ಯಾಗದಲಿ ।
ನಾಥನಿಲ್ಲದ ಯಜ್ಞವಿದು ನಿಮ
ಗೇತರಾಯಾಸವಿದು ಶಿವನಾ
ರಾತಿಯಾತನು ನಿಮ್ಮ ಸುಡಿಸುಡಿಯೆಂದು ಮುರುಹಿದಳು ॥೪೧॥

ಪತಿಯನಾಮ ಸ್ಮರಣೆಯಿಂದಾ
ಹುತವಹನ ಬಳಿಗೈದಿ ಕೈಮುಗಿ
ಯುತಲಿ ಶಂಕರ ಕೃಪೆಯ ಮಾಡೆನುತವಳು ಹಾರಿದಳು ।
ಸತಿಯು ಆತ್ಮನ ಶಿವನೊಳರ್ಪಿಸಿ
ಪತಿಯೊಳೆಣಿಸಿದ ಪಾಪದಹನಕೆ
ಪಿತನ ಯಾಗಾಗ್ನಿಯಲಿ ದೇಹಾರ್ಪಣವ ಮಾಡಿದಳು ॥೪೨॥

ಪುಡಿ ಪುಡಿಯ ಮಾಡಿದವು ಗಣಗಳು
ಸಿಡಿಲದನಿ ಗೈಯುತ್ತ ದಕ್ಷನ
ಕಡೆಯ ಸುರನರರನ್ನು ಕೊಂದವು ಸತಿಯ ಹಾನಿಯಲಿ ।
ಒಡಲುಳಿಸಿ ಕೊಳುವಾತುರದಿ ನಡು
ನಡುಗಿ ಸುರಪಡೆ ಬೆದರೆ ಭೃಗುಮುನಿ
ಕೆಡಹಿ ಮುರಿದನು ಶಿವಗಣಂಗಳ ಗರ್ವದರ್ಪಗಳ ॥೪೩॥

ವಾರ್ತೆ ಬಂದುದು ದೇವ ಮುನಿಯಿಂ
ದಾರ್ತನಾದನು ರುದ್ರ ದಕ್ಷ
ಸ್ವಾರ್ಥದಿಂ ಸತಿಯನ್ನು ಕೊಂದುದರಿಂದ ಕಿಡಿಯಾದ ।
ಮೂರ್ತಿಯುದಿಸಿತು ಹರನ ಕೋಪದಿ
ನರ್ತಿಸಿತು ಲಯಕರ್ತ ನಮಿಸುತ
ಲರ್ಥಿಯೇನೆನೆ ವೀರಭದ್ರನ ಶಿವನು ಮನ್ನಿಸಿದ ॥೪೪॥

ವೈರಿಯೆಮಗಾ ದಕ್ಷನವನಂ
ಗಾರುಗೆಡಿಸೆನೆ ತ್ವರದಿ ನಡೆದನು
ವೀರಭದ್ರನು ಕೊಂದು ದಕ್ಷನ ಯಾಗ ಕೆಡಿಸಿದನು ।
ಮಾರಹರ ನಿಂದಕರ ಮುರಿಯುವ
ನಾರಿಯಳಿದಾ ಯಾಗ ಕುಂಡಕೆ
ಶೂರಮಣಿಯುತ ನಿಲಯರುದ್ರನ ಮಾಟ ತೋರಿದನು ॥೪೫॥

ಶಿವನನಾಮ ಸ್ಮರಣೆಯನುದಿನ
ಶಿವನ ಸನ್ನಿಧಿ ಸಂಗ ಯೋಗವು
ಶಿವನ ಮತಿಗತಿ ಜನ್ಮಜನ್ಮಕ್ಕಿರಲಿ ತನಗೆನುತ ।
ಶಿವನ ಮೆಚ್ಚಿಸಿ ವರವ ಪಡೆದಳು
ಶಿವೆಯು ತನ್ನಾ ಮರಣಕಾಲದಿ
ಶಿವನ ಸಾನ್ನಿಧ್ಯವನು ಪುನರಪಿ ಸೇರುವಾತುರದಿ ||೪೬||

ಶಿವನು ಮುಟ್ಟದ ತನುವ ಸುಡುತಾ
ಶಿವೆಯು ಹಿಮಗಿರಿ ಸತಿಯ ಬಸುರಲಿ
ನವತನುವ ಪಡೆಯುತ್ತಲುದಿಸಿದಳೊಲಿದು ಜಗನಲಿಯೆ ।
ಅವಳ ಸನ್ನಿಧಿಯಲ್ಲಿ ಮುನಿಋಷಿ
ತವಸಿಗಳು ಜ್ಞಾನದಲಿ ನಿಂದರು
ರವಿಕುಲಜ ನಾಮವನು ಜಪಿಸುತಲನವರತ ಭರದಿ ||೪೭||

ಪಾರ್ವತಿಯು ರಘುರಾಮಜ್ಞಾನದೊ
ಳುರ್ವತಿಯ ಪಾವನವ ಮಾಡಲು
ಪರ್ವತನೊಳುದಿಸಿದಳು ಲೋಕವು ರಾಮಮಯವಾಯ್ತು ।
ಪರ್ವತವೆ ಸುರಲೋಕವೆನಿಸಿತು
ಸರ್ವ ಪುಣ್ಯಾಶ್ರಮವು ಗಿರಿಯೆನೆ
ಪಾರ್ವತೀ ಸನ್ನಿಧಿಯ ಮಹಿಮಾದರ್ಶವೇನೆಂಬೆ ! ||೪೮||

## ವಿಶ್ರಾಮ ೨

ಸೂ॥ ಫಾಲನೇತ್ರಾಗ್ನಿಯಲಿ ಹರಿಸುತ
ಕಾಲನರಮನೆವೊಗಲು ಶಂಭು ಹಿ
ಮಾಲಯಾತ್ಮಜೆಯನ್ನು ವರಿಸಿದ ಜಗವು ಜಯಯೆನಲು

ಒಂದು ದಿನ ನಾರದನು ಗಿರಿಗೈ
ತಂದು ಕಾಣಿಸಿಕೊಂಡು ರಾಯನ
ನಿಂದುಮುಖಿಯಂ ನೋಡಿ ಸಂತಸಗೊಂಡನೊಳಗೊಳಗೆ ।
ಮುಂದಿವಳ ಮಾನಾಭಿಮಾನವ
ನೊಂದು ತಿಳಿಯದಮಂಗಳನು ಮೇ
ಣಂದ ಹೀನನು ಭಸ್ಮಧಾರಿಯು ಕೈವಿಡಿವನೆಂದ ॥೧॥

ಸರುವ ಸಂಗತ್ಯಾಗಿ ನಿರ್ಗುಣ
ನರಸ ಮಸಣಕೆ ಯೋಗಿ ಭಿಕ್ಷುಕ
ನರ ಕಪಾಲವ ಪಿಡಿದ ಚರ್ಮಾಂಬರನ ಮಂಗಳನು ।
ಅರಿವಿದೂರನು ಮೋಹರಹಿತನು
ಪರುವತನೆ, ಪತಿಯಾಗುವನು ಕೇ
ಳ್ಸರುವ ಲಕ್ಷಣೆಗೀ ವಿಲಕ್ಷಣ ನಾಥನರಿಯೆಂದ ॥೨॥

ಕೇಳುತಲಿ ನಾರದನ ನುಡಿಗಳ
ನಾ ಲಲನೆ ಸಂತೋಷಗೊಂಡಳು
ಫಾಲನೇತ್ರನೆ ನಾಥ ತನಗೆಂದವಳು ನಿಶ್ಚೈಸಿ ।
ನೀಲಲೋಚನೆಗೀ ವಿಲಕ್ಷಣ
ಶೀಲ ಪತಿಯಹನೆಂದು ಪರ್ವತ
ಪಾಲ ದುಃಖದಿ ಬೆಂದು ನೊಂದನು ಗೂಢವರಿಯದೆಯೆ ॥೩॥

ಮನಕೆ ಸಂಶಯ ಬೇಡ ಮುಕ್ಕ
ಣ್ಣನಿಗೆ ಸತಿಯಾಗುವಳು ಪಾರ್ವತಿ
ಘನಮಹಿಮಗಿವು ನಿತ್ಯವಾಗಿಹುದೈ ವಿಲಕ್ಷಣವು ।
ಗುಣಮಹುದು ತಪದಿಂದ ಮೆಚ್ಚಿಸೆ
ತನುಜೆಗಾಣತಿಯಿತ್ತು ಕಳುಹೆನ
ಲನುನಯದಿ ಸಂತೋಷವಡೆದನು ಸರ್ವರುಂ ನಲಿಯೆ ॥೪॥

ತಂದೆಯಡಿಗಳಿಗೆರಗಿ ಪಾರ್ವತಿ
ಯಿಂದುಧರನನ್ನೊಲಿಸೆ ನಡೆದಳು
ಸುಂದರಾಂಗವನೊಡ್ಡಿ ಗಾಳಿಗೆ ನಿಂದು ತಪದಲ್ಲಿ |
ತಂದು ಮನದಲಿ ಶಿವನ ಮೂರ್ತಿಯ
ನಂದು ನಿಂದಳು ಘೋರ ತಪದಲಿ
ಮಂದಿ ನಡುಗಲ್ಕವಳ ಕಾಂತಿಯ ನೋಡಲಾರದೆಯೆ ||೫||

ತೊರೆದಳಾ ಸುತೆ ಸಕಲ ಭೋಗವ
ಮರೆಯುತರಮನೆ ಬಂಧುಬಳಗವ
ಹರನ ಚರಣದಿ ಸೂರೆಗೊಟ್ಟಳು ಮಾನಸಾತ್ಮಗಳ |
ಹರನ ಹೊರತಿನ್ನೇನ ಕಾಣಲು
ತರಳೆ ತನ್ಮಯಳಾಗಿ ತಾನೇ
ಕರುಣಿ ಶಂಕರಿ ಶಕ್ತಿಯಾದಳು ತನ್ನ ಮಹಿಮೆಯಲಿ ||೬||

ಕಂದ ಫಲ ಮೂಲಗಳ ಭಕ್ಷಿಸು
ತಿಂದುಮುಖಿ ತಪವೆಸಗಿ ಮೆರೆದಳು
ತಿಂದು ತರಗೆಲೆ ಬಿಲ್ವಪತ್ರವ ತಪವ ನೂಕಿದಳು |
ಮುಂದವನು ತೊರೆಯುತ್ತ ಸವಿಜಲ
ಬಿಂದುಗಳ ಸವಿಯುತ್ತ ಕೊನೆಯಲಿ
ನಿಂದಳಾಸತಿ ವಾಯುಭಕ್ಷಣಗೈದು ತಪದಲ್ಲಿ ||೭||

ಇಂತಿರುತ್ತಿರಲತ್ತ ಶಂಕರ
ಚಿಂತಿಸುತ ರಘುವರನ ನಾಮವ
ಕಂತುಪಿತ ವೈದೋರಿದನು ಹರುಷದಿ ರಾಮರೂಪವಲಿ |
ಸಂತತವು ಗಿರಿಜಾತೆ ನಿನ್ನನೆ
ಚಿಂತಿಪಳು, ತಪದಿಂದ ಬೆಂದಳು,
ಪಿಂತಿನಾ ದಾಕ್ಷಾಯಿಣಿಯು ಗಿರಿಜಾತೆ ಕೇಳೆಂದ ||೮||

ರಾಮದರ್ಶನದಿಂದ ಹರ್ಷವ
ಕಾಮಹರ ಪೊಂದಿದನು ತನ್ನನೆ
ಕಾಮಿಸುತ ತಪದೊಳಿರೆ ಪಾರ್ವತಿಯರಿತು ಮನದಲ್ಲಿ ।
ಭಾಮಿನಿಯ ಪರಿಕಿಸಲು ನಿಶ್ಚಲ
ರಾಮಭಕ್ತಿಯ ತಾಳ್ದು ಕುಳಿತನು
ನೇಮದಿಂ ಮೌನದಲಿ ಲೋಕಕೆ ವಿಮುಖನಾಗುತ್ತ ॥೯॥

ನಡೆದು ಋಷಿ ಸಪ್ತಕರು ಪಾರ್ವತಿ
ಯೆಡೆಗೆ ವಿಧವಿಧದಿಂದ ಪರಿಕಿಸಿ
ಕಡಲಶಯನನ ಗುಣವ ಬಣ್ಣಿಸಿ ಹೊಗಳಿದರೆ ಜರೆದು ।
ಮೃಡಗೆ ತೆತ್ತಿಹೆನಾತ್ಮ ವಂಚಿಸಿ
ದೊಡೆ ದುರಾಗ್ರಹಿಯಾಗಿ ನರಕದಿ
ಕೆಡೆದು ನೋವೆನು ಶಿವನ ಮಾತುಳಿದಾವುದಿಲ್ಲೆನಗೆ ॥೧೦॥

ಎರಡನರಿಯೆನು ಶಿವನ ನಂಬಿದೆ
ಪರಮ ಮಹಿಮರು ನೀವು ಎನ್ನೊಳು
ಕರುಣದೋರುತ ಶಿವನ ಚರಣವ ಕಾಣ್ಬ ಬಗೆದೋರಿ ।
ತರಳೆಯನು ಸಲಹುವುದು ಮೇಣದ
ನರುಹದಿದ್ದೊಡೆ ಬಳಲಿದಿರಿ ಪಿಂ
ತಿರುಗಿ ಬಂದೆಡೆಗೆಂದಳಾ ಗಿರಿಜಾತೆ ಋಷಿಗಳಿಗೆ ॥೧೧॥

ಅವನು ಭಿಕ್ಷುಕಯೋಗಿ ನಿರ್ಧನ
ನವನರಿಯ ಮಾನಾಪಮಾನವ
ನವನರೂಪನು ವಿಲಯಮೂರ್ತಿ ಕಪಾಲ ಪಿಡಿದಿಹನು ।
ಅವನು ಮನಬಂದಂತೆ ಕುಣಿವನು
ಸುವಧು ಸುಂದರಿ ಮೋಸಹೋಗದಿ
ಶಿವನ ಮರೆ ನಾರದನ ನುಡಿ ಪುಸಿಯೆಂದರಾಗವರು ॥೧೨॥

ಭೂತಗಳು ಸೇವಕರು ಶಿವಗೆ
ಪ್ರೇತಗಳು ಮಂತ್ರಿಗಳು ಮೇಣಾ
ತಾತ ವಿಧಿ ಶಿರವನ್ನು ಕಡಿದ ದ್ರೋಹಿ ನಿರ್ವಾಣ।
ಮಾತೆ ನೀ ಜಗದಂಬೆ ನಿನ್ನನು
ಮಾತಿನಿಂ ಕೆಡಿಸಿದನು ನಾರದ
ನಾತಗೀ ಗುಣ ಸಹಜ ಬಿಡುತಪವೆಂದರಾಗವರು ॥೧೩॥

ದೇವ ಮುನಿ ಮಹಿಮೆಗಳ ಬಲ್ಲೆನು
ಪಾವನನು ಸರ್ವಜ್ಞ ನಿರ್ಗುಣ
ಪಾವನತುಲಾಭರಣನಂ ಶಶಿಮೌಳಿ ಶಂಕರನ।
ಭಾವನೆಯನುಚಿತದಲಿ ಕೊಟ್ಟಿಹ
ದೇವನೊಳು ಹಗೆಯೇಕೆ ನಿಮಗಾ
ದೇವದೇವನ ಹರಕೆಯಿರಲೆಂದೊರೆದಳಾ ಗಿರಿಜೆ ॥೧೪॥

ಹರಸಿದರು ಮೆಚ್ಚಿದರು ಶಿವನೇ
ಕರವ ಪಿಡಿವನು ತಪವು ಫಲಿಸಿತು
ತರಳೆ ಗೃಹವನು ಸಾರು ನಡೆಯೆಂದವರು ಗಿರಿಗೈದಿ।
ಅರುಹಿದರು ಪರ್ವತಗೆ ಪಾರ್ವತಿ
ಯುರುತರದ ಮಹಿಮೆಗಳನಿವಳಾ
ಹರಗೆ ಸತಿಯಹಳೆಂದು ತಿಳುಹುತ ಸರಿದರಲ್ಲಿಂದ ॥೧೫॥

ಅತ್ತ ಶಂಕರ ವಿಮುಖನಾಗಿ ವಿ
ರಕ್ತನಾಗಿರೆ ದನುಜ ತಾರಕ
ಗಿತ್ತ ವರಬಲದಿಂದ ಕಂಟಕನಾದ ಜಗಗಳಿಗೆ।
ಮೃತ್ಯು ಶಿವಸುತನಿಂದ ತನಗೆ
ನ್ನುತ್ತ ಕೊಬ್ಬಿದನಿಂದ್ರ ಲೋಕವ
ಮುತ್ತುತಾಕ್ರಮಿಸಿದನು ಸುರರಂಕೆಡಿಸಿ ಸೋಲಿಸಿದ ॥೧೬॥

ಶಿವಗೆ ಸತಿಸುತರಿಲ್ಲ ವಿಧಿತಾ
ನಿವಗೆ ವರಗಳನಿತ್ತು ಕೆಡಿಸಿದ
ಜವನು ನಡುಗುವ ದುರುಳನಿಂ ಜಗನೊಂದು ಬೆಂಡಾಯ್ತು ।
ನವೆದನಿಂದ್ರನು ರಾಜ್ಯ ತೊರೆಯುತ
ಲಿವನ ಮರಣಕೆ ಶಿವಗೆ ಸುತನಾ
ಗುವನೆ ಕರುಣಿಸು ತಾತ ಹಾಯೆನುತಿರ್ದುದಮರಗಣ ॥೧೭॥

ಹರ ವಿರಕ್ತಿಯೊಳಿರುವನವನಂ
ಸ್ಮರನು ತಿರುಗಿಸಬಲ್ಲನದರಿಂ
ಕರೆಸಿ ಕೇಳುವುದೆನಲು ತುತಿಸಿದರಾಗ ಕಾಮನನು ।
ಹರನ ತುಡುಕಿದೊಡೆನಗೆ ನಿಶ್ಚಯ
ಮರಣವಾದೊಡೆ ಲೋಕಕಂಟಕ
ಪರಿಹರಿಸಲಾ ಶಿವವಿರಕ್ತಿಯ ಮುರಿವೆನಾನೆಂದ ॥೧೮॥

ಇಕ್ಷು ಚಾಪವ ಧರಿಸುತಾ ಫಾ
ಲಾಕ್ಷ ಗಿರಿಯನು ಹೊಕ್ಕ ವಿರತಿ ವಿ
ಲಕ್ಷಣರು ಸೈನಿಕರು ಶೀತಳ ಮಂದಮಾರುತರು ।
ಭಕ್ಷಿಸಿದ ಯೋಗಿಗಳ ಮನಮಂ
ಕುಕ್ಷಿಯೊಳು ಸುಖಮಂತ್ರ ಕಾಮನ
ಪೇಕ್ಷೆ ಪೆರ್ಚಲ್ಕಾತ್ಮ ಸುಜ್ಞಾನಗಳು ಜಾರಿದುವು ॥೧೯॥

ಪಸರಿಸಿತು ಮಧುಮಾಸ ಗಿರಿಯೊಳ
ಗೆಸೆದು ಕಾಮನ ಚೇಷ್ಟೆಯಿಂ ಸಂ
ತಸದಿ ಶುಕಪಿಕ ಸೋಗೆ ಕಲಹಂಸಗಳ ಸವಿಗಾನ ।
ಕುಸುಮ ಮಕರಂದವನು ಚೆಲ್ಲುತ
ಲೆಸೆಯುತಳಿಕುಲ ಸುಳಿಯೆ ಯತಿಮುನಿ
ರಿಸಿಗಳಾಗಲು ಮೋಹಮಂತ್ರವ ಜಪಿಸಿದರು ಮನದಿ ॥೨೦॥

ಸ್ಮರನ ರತಿಮಂತ್ರಗಳು ಶಿವನೊಳು
ಹುರುಳದೋರದೆ ಪುಸಿಯೆ ಮಾವಿನ
ತರುವನೇರುತ ಕುಸುಮ ಶರವನು ಹೂಡಿ ಗುರಿವಿಡಿದು ।
ಹರನ ವಕ್ಷದೊಳೆಸೆಯೆ ರತಿಕಳೆ
ಬರೆದುದಾ ಶರ ಯೋಗದಿಂದಾ
ಹರನ ಸೆಳೆದುದು ಕಲಕಿ-ಮನಮಂ ಕ್ಷೋಭೆಗೊಳಿಸಿದುದು ॥೨೧॥

ಯೋಗ ನಿದ್ರೆಯನುಳಿದು ಶಂಕರ
ನಾಗಲಾಕ್ರೋಶದಲಿ ನೋಡಲು
ನೀಗಿದನು ತನು ಫಾಲನಯನಾಗ್ನಿಯಲಿ ಮನ್ಮಥನು ।
ನಾಗಭೂಷಣನುರಿವ ದೇಹವ
ನಾಗ ಮಾವಿನ ಮರದಿ ಕಾಣುತ
ಮೂಗನಾದನು ಕೊಂದೆನೇ ರತಿಪತಿಯನೆಂದಳಲಿ ॥೨೨॥

ವಿಲಯ ರುದ್ರನು ಕೋಪ ಜಲದೊಳು
ತೊಳೆದನಾ ರತಿಪತಿಯು ಪೀಡೆಯ
ಕಳೆದು ಫಾಲಾಗ್ನಿಯಲಿ ದಹಿಸಿದ ಹರಿಕುಮಾರನನು ।
ಇಳೆಗೆ ಹಿತಮಂ ಬಯಸಿ ಮನ್ಮಥ
ನಳಿದನೇ ಹಾಯೆಂದು ಶಂಕರ
ಲಲನೆ ರತಿಯಂ ಕರೆದು ಕರುಣದಿ ವರವ ನೀಡಿದನು ॥೨೩॥

ಸರುವರೊಳನಂಗನೆನಿಸುತ ಪತಿ
ಯಿರುವ ಸೂಕ್ಷ್ಮದಿ - ಮುಂದೆ ಯದುಕುಲ
ಸರಸಿಯಲಿ ಶ್ರೀಕೃಷ್ಣನುದಿಸುವನವನ ಬಸುರಿನಲಿ ।
ಸ್ಮರನೊಗೆವ ಪ್ರದ್ಯುಮ್ನನಾಮದಿ
ತರಳೆ ನೀ ವರಿಸವನ ಕರವಿಡಿ –
ತೊರೆ ಬಸನ ರತಿಯೆಂದು ಕರುಣದಿ ಕಳುಹಿದನು ಶಿವನು ॥೨೪॥

ಹರಿವಿರಿಂಚಾದಿಗಳು ನೆರೆದರು
ಸುರರು ಬಂದರು ಕರುಣವಾರಿಧಿ
ಗೆರಗಿ ನಿಂದಿರಲರಿತು ಶಂಕರನಭಯ ನೀಡಿದನು ।
ವರಿಸಲೊಪ್ಪಿದ ಗಿರಿಜೆಯಂ ಹರ
ವಿರತಿ ಬಿಡುತಲಿ ತಾರಕನ ಭಯ
ಪರಿಹರಿಸೆ ಮನ್ನಿಸಿದ ದೇವರ್ಕಳನು ಕಳುಹಿದನು ॥೨೫॥

ನಡೆದು ಋಷಿ ಸಪ್ತಕರು ಪರ್ವತ
ನೆಡೆಗೆ ಗಿರಿಜೆಯ ಕರೆದು ಕಾಮನ
ಮೃಡನು ದಹಿಸಿದ ಬಗೆಯ ಪೇಳಲು ನಗುತ ಪಾರ್ವತಿಯು ।
ಮೃಡನು ರುದ್ರನು ಕರುಣಿ ಮನ್ಮಥ
ನಡಗಿರುವ ಹೃದಯದಲಿ ಪೊರೆಯುವ
ನೆಡಬಿಡದೆ ಸಾಂಬಶಿವ ಮೋಹದೊಳೆಂದಳಾ ತರಳೆ ॥೨೬॥

ಅವಳ ಮಾತಿಗೆ ಸೋತು ಹರಸುತ
ಶಿವನನುಗ್ರಹವಾಯ್ತು ಕರವಿಡಿ
ಯುವನು ನಿನ್ನನೆನುತ್ತ ಪರ್ವತರಾಯನಂ ಕರೆದು ।
ಶಿವಗೆ ಪಾರ್ವತಿ ವಧುವು ಸುವಿವಾ
ಹವನು ನಡೆಸಲು ಲಗ್ನಪತ್ರವ
ಜವದಿ ಬರೆಸೆಂದೆನಲು ನಿಶ್ಚೈಸಿದನು ಮದುವೆಯನು ॥೨೭॥

ಗಿರಿಜೆಯನು ಕೈವಿಡಿವ ಶಂಕರ,
ದುರುಳ ಸಂಹಾರವನು ಕೋರುತ
ಸುರರ ಹಿತವನು ಬಯಸಿ ಕರುಣವ ಸುರಿದನೆನ್ನುತಲಿ ।
ಸುರಿದರಾಗಸದಿಂದ ಸುಮಗಳ
ಹರನ ತುತಿಸುತ ಕಳಸವಿಟ್ಟರು
ಭರದಿ ದುಂದುಭಿ ಭೇರಿ ವಾದ್ಯ ಧ್ವನಿಯ ಮೊಳಗಿದರು ॥೨೮॥

ಬಂದು ನೆರೆದರು ಸುರರು ಕಿನ್ನರ
ರಿಂದುಧರನಂ ನಮಿಸಿ ತುತಿಸಿದ
ರಂದು ಖೇಚರ ಯಕ್ಷ ವಿದ್ಯಾಧರರು ನೆರೆಯಲ್ಕೆ ।
ಬಂದನಾಗ ವಿರಿಂಚಿ ವಾರ್ತೆಯ
ತಂದ ಘೇಯೆನೆ ಸುರರು ಭಕ್ತರ
ಬಂಧು ಸರ್ವರ ಮನ್ನಿಸಿದ ಕರುಣಾವಿಶೇಷದಲಿ ॥೨೯॥

ವೀರನಾರಾಯಣನು ಬರುತಿರೆ
ಮಾರಹರನೈತರುತಲಪ್ಪಿದ
ಶ್ರೀರಮಣ ಜಯಯೆಂದು ನುತಿಸಿದ ಹರಿ ಗುಣವ ನೆನೆದು ।
ಸೇರಿ ಶಿವಗಣ ಗಿರಿವರನ ಶೃಂ
ಗಾರ ಮಾಡುತ ಲಗ್ನಕಾ ಸಂ
ಭಾರಗಳನಣಿ ಮಾಡಿದವು ಭೂತಗಳು ಶೀಘ್ರದಲಿ ॥೩೦॥

ಕೊರಳಲುರಗಾಭರಣ ಗಂಗೆಯು
ಶಿರದಿ ಪಣೆಯೊಳು ಚಂದ್ರ ಚರ್ಮಾಂ
ಬರವು ಶಿವನಿಗೆ ರುಂಡ ಮುಕ್ತಾಹಾರ ಮಕುಟ ಜಟೆ ।
ಕರದಿ ಶೂಲ ಕಪಾಲ ಡಮರುಗ
ಹರಿಣಿಗಳ ಪಿಡಿದಿಹನು ಚೆಲುವಿನ
ವರನು ನಂದಿಯನೇರಿ ಪೊರಟನು ಶುಭಮುಹೂರ್ತದಲಿ ॥೩೧॥

ವಿವಿಧರೂಪವ ತಾಳ್ದು ನಡೆದುದು
ಶಿವನ ಭೂತ ಪ್ರೇತಗಣ ಮಾ
ಧವನು ರಚಿಸಿ ವ್ಯೂಹ ಕ್ರಮದಲಿ ಮುಂದೆ ತಾನಿಂದ ।
ಕವಿದುದಾಗಸ ಧೂಳಿರಾಶಿಯೊ
ಳವನಿಯನು ಮುಸುಕಿದುದು ಕತ್ತಲೆ
ಶಿವನ ಸೇನಾನಿಕರ ಸಾರುತ್ತಿರಲಸಂಖ್ಯೆಯಲಿ ॥೩೨॥

ಅತ್ತ ಪರ್ವತ ಶಿಲ್ಪಿಗಳ ಕರೆ
ಸುತ್ತ ನಗರವ ಸಿಂಗರಿಸಿದ ವಿ
ಚಿತ್ರವೆನೆ ಕೊಂಡಾಡಿದರು ನೋಡುತ್ತಲಚ್ಚರಿಯ ।
ಉತ್ತಮದ ಬೀಡಾರ ಗುಡಿಗಳ
ಚಿತ್ರ ತರದಲಿ ಕಟ್ಟಿಸಿದ ನ
ಕ್ಷತ್ರ ಕಾಂತಿಯ ಜರೆವವೊಲು ಮಣಿಕಾಂತಿಯೆಸೆಯುತಿರೆ ॥೩೩॥

ಇದಿರುಗೊಂಡನು ಶೈಲರಾಜನು
ವಧುಗಳುಪ್ಪಾರತಿಯನೆತ್ತಲು
ಮುದದಿ ಮಯನಾದೇವಿ ಶಂಕರನಡಿಯ ಸಾರುತಲಿ ।
ಅದುಭುತವ ಕಾಣಲ್ಕೆ ಭಯದಿಂ
ಮದುವಣಿಗನಿವನಲ್ಲ ಹಾಯೆಂ
ದೊದರೆ ನಾರದ ಶಿವನ ಮಹಿಮೆಯ ಬಣ್ಣಿಸಿದನಾಗ ॥೩೪॥

ಹಿಂದೆ ದಕ್ಷಬ್ರಹ್ಮನುದರದಿ
ಬಂದ ದಾಕ್ಷಾಯಿಣಿಯು ಶಿವನಂ
ಪೊಂದಿ ರಾಮನ ಪರಿಕಿಸಲು ಜಾನಕಿಯ ರೂಪದಲಿ
ನಿಂದಿರಲು ಶಿವ ಸತಿಯ ತೊರೆದನು
ದಂದುಗವಪಡಲಾರದಾ ವಧು
ವಂದು ದಕ್ಷನ ಯಾಗಶಿಖಿಯಲಿ ತನುವ ದಹಿಸಿದಳು ॥೩೫॥

ಇಂದವಳು ಸುತೆಯೆನಿಸಿ ನಿನಗಾ
ನಂದವಂ ನೀಡಿಹಳು ಜಗದಾ
ನಂದರೂಪಿಣಿ ಲೋಕನಾಯಕಿ ಸರ್ವಮಂಗಳೆಯು ।
ಇಂದುಧರನರ್ಧಾಂಗಿ ಶಿವನಂ
ಪೊಂದಲಾವಪರಾಧ ಹೃದಯದ
ದಂದುಗವತೊರೆ ನಿಜವನರಿಯೌ ತಾಯೆ ಹೋಗೆಂದ ॥೩೬॥

ನಾರದನ ನುಡಿಕೇಳಿ ಸರ್ವರ
ಪಾರ ಪರಿತೋಷದಲಿ ನಲಿದರು
ಮಾರಹರನಂ ಕಾಣುತುಪ್ಪಾರತಿಯನೆತ್ತಿದರು ।
ಪಾರುವತಿಯಲಿ ಶಕ್ತಿದೇವಿಯ
ಪಾರ ಮಹಿಮೆಯ ಕಂಡು ವಿನಯದಿ
ಬಾರಿಬಾರಿಗು ನಮಿಸಿದರು ಗಿರಿರಾಜರಾಣಿಯರು ॥೩೭॥

ವಿಧಿತಘನ ಸಿಂಹಾಸನವ ರಚಿ
ಸಿದನು, ಧಾರಾಮಂಟಪವ ಮಾ
ಡಿದನು ಮಣಿರತುನದಲಿ ವೇದಿಕೆಯನ್ನು ನಿರ್ಮಿಸಿದ ।
ವಿಧಿಯು ನಿಜಕರದಿಂದ ಸಿಂಗರಿ
ಸಿಧನು ಲೋಕಶರಣ್ಯನೀಶ್ವರ
ಸುದತಿ ಪಾರ್ವತಿಯರಿಗೆ ಕೇಸರಿಪೀಠಮಂ ರಚಿಸಿ ॥೩೮॥

ಚಿತ್ತದೊಳು ರಘುರಾಮನಂ ನೆನೆ
ಯುತ್ತಲೇರಿದ ದಿವ್ಯಪೀಠವ
ನುತ್ತಮಾಂಗನು ಸುರರು ಸುಮವರ್ಷವನು ಕರೆಯಲ್ಕೆ ।
ಮತ್ತಗಜಗಾಮಿನಿಯರಾಗಲ್ಕು
ಚಿತ್ತಜನ ಸೋಲಿಸುವ ರೂಪವ
ಪೊತ್ತ ಗಿರಿಜೆಯ ಸಿಂಗರಿಸಿ ಕರೆತಂದರಾ ಸಭೆಗೆ ॥೩೯॥

ಬರುವ ಪಾರ್ವತಿಗಾಗ ಸರ್ವರು
ಶಿರವ ಬಾಗಿಸಿ ನಮಿಸಿದರು ಉರು
ವರೆಯ ಭಾರವ ಕಷ್ಟಪರಿಹರಿಸೆಂದು ಪ್ರಾರ್ಥಿಸುತ ।
ಸರುವಲೋಕಶರಣ್ಯೆ ಮೆಲ್ಲನೆ
ಬರುತಲಭಯವನಿತ್ತು ಮನ್ನಿಸಿ
ಕರುಣದಲಿ ನೋಡುತ್ತ ಮಣಿಮಯ ಪೀಠವೇರಿದಳು ॥೪೦॥

ಆದಿಶಕ್ತಿಯ ಕರವಪಿಡಿದನ
ನಾದಿ ಪುರುಷನು ಸಪ್ತಋಷಿಗಳು
ವೇದ ಘೋಷವ ಮಾಡೆ ಪಾರ್ವತಿ ವರಿಸಿದಳು ಶಿವನ ।
ಸಾಧುಗಳು ಜಯರವದಿ ಹೊಗಳಲು
ಮೋದದಿಂದಲಿ ಪರ್ವತನು ಜಗ
ದಾದಿ ದೇವಿಯನಿತ್ತು ಕನ್ಯಾದಾನ ಮಾಡಿದನು ॥೪೧॥

ಮೊಳಗಿದವು ನಿಸ್ಸಾಳ ಭೇರಿಗ
ಳುಲಿಯೆ ಮಂಗಳವಾದ್ಯ ಬರ್ದಿಲ
ರೊಲಿದು ಸುರಿದರು ಕುಸುಮವರ್ಷವನುಬ್ಬಿ ಮನದಲ್ಲಿ ।
ನಲಿದು ನರ್ತಿಸೆ ಖಚರ ಕಿನ್ನರ
ರೊಲಿದು ಪಾಡಿದರಾಗ ಶಾಂತಿಯು
ನೆಲಸೆ ಸರ್ವರು ತಾರಕಾಸುರ ಭಯವ ನೀಗಿದರು ॥೪೨॥

ಜಗದ ಮಂಗಳ ಮೂರ್ತಿಯಿರ್ವರು
ಜಗದ ಶಾಂತಿಯ ಬಗೆದು ಕರವಿಡಿ
ದೊಗುವ ಪುಳಕಾಶ್ರುಗಳನೊರೆಸುತ ನೋಡಿದರು ಜನರ ।
ನಗುತಲುಪ್ಪಾರತಿಯನೆತ್ತುತ
ಮುಗುಧೆಯರು ಪಾಡಿದರು ಹರಸಿದ
ರಗಜೆಯನು ಮಣಿಯುತ್ತ ಕರುಣವ ಬೇಡಿದರು ಮುದದಿ ॥೪೩॥

ಮಾಡಿ ಕನ್ಯಾದಾನ ಪರ್ವತ
ರೂಢಿಯಿಂದುಡುಗೊರೆಯನಿತ್ತನು
ನೀಡಿ ಬಳುವಳಿ ದಾಸದಾಸೀ ಜನರನಿರ್ವರಿಗೆ ।
ದೂಡಿ ಮಯನಾದೇವಿ ಸಂಶಯ
ಪಾಡಿದಳು ಮಂಗಳವ ಶುಭವನು
ಬೇಡಿದಳು ಸುಜ್ಞಾನವೈರಾಗ್ಯಗಳ ಶಿವನನ್ನು ॥೪೪॥

ಮುಗಿಸಿ ವೈವಾಹವನು ಪರ್ವತ
ನಗಜೆ ಸಹಿತಾ ಶಿವನ ಕಳುಹಿಸಿ
ಜಗವು ಹೊಗಳಲು ಧನ್ಯನಾದನು ಸುತೆಯ ಲಗ್ನದಲಿ |
ಸೊಗದೊಳುಪಚರಿಸುತ್ತ ಕಳುಹಿದ
ನೊಗುವ ಬಾಷ್ಪದಿ ಬಂದುವರ್ಗವ
ನಿಗಮ ವೇದ್ಯನ ನೆನೆಯುತಿರ್ದನು ಮನದೊಳನವರತ ||೪೫||

ಯೋಗಿಯಾದಾ ಶಿವನು ಪಾರ್ವತಿ .
ಭೋಗಿಯಾದನು ಲೋಕ ರಕ್ಷಣೆ
ಗಾಗಿ ಲೋಕದ ತಂದೆತಾಯ್ಗಳು ಶಿವನು ಗಿರಿಜೆಯರು |
ನಾಗವೇಣಿಯೊಳೊಗೆದು ಷಣ್ಮುಖ
ಸಾಗುತೇಳನೆ ದಿವಸ ತಾರಕ
ನಾ ಗರುವ ಮುರಿದೊರೆಸಿದಾ ಕತೆ ಲೋಕಪಾವನವು ||೪೬||

ಪರಿಕಿಸುತ ಪತಿಯಿಷ್ಟದೈವವ
ನೆರಡೆಣಿಸಿ ರಾಮನೊಳು ದೇಹವ
ತೊರೆದು ದಾಕ್ಷಾಯಿಣಿಯು ಮಯನಾದೇವಿ ಸುತೆಯಾಗಿ |
ಹರನ ಮೆಚ್ಚಿಸಿ ಕರವ ಪಿಡಿದಳು
ಧರಣಿಜಾ ಪತಿಗಾಗಿ ಸತಿಯಂ
ತೊರೆದ ಶಿವನಾ ಮಹಿಮೆಯೆನಿತೋ ತಿಳಿದ ನರರಾರು ? ||೪೭||

ರಾಮ ಶಿವರಲಿ ಭೇದವೇತಕೆ ?
ರಾಮನೇ ಶಿವ ಶಿವನೆ ರಾಮನು
ರಾಮನಂ ಶಿವ–ಶಿವನ ರಾಮನು ಜಾನಿಪರು ನಿತ್ಯ |
ರಾಮನೊಲಿಯನು ಶಂಭುವೈರಿಗೆ
ರಾಮವೈರಿಗೆ ಶಂಭುವೊಲಿಯನು
ರಾಮ–ಶಿವರೊಳಗೊಂದು ನೋಡದ ಮನುಜನೇ ಮೂರ್ಖ ||೪೮||

ಇಂತು ಕಾಲವ ನೂಕಿ ಪಾರ್ವತಿ
ಕಂತುವೈರಿಯನೊಂದು ದಿವಸಂ
ಕಾಂತ, ರಘುವರನಿರವ ಪರಿಕಿಸಿ ಮಲಿನಮನಳಾಗಿ ।
ಪಿಂತಿನಾ ಗುಣವನ್ನು ಸುಟ್ಟೆನು
ಸಂತತ ಶ್ರೀರಾಮ ಚರಿತೆಯ
ನಂತವಾಗಿರಲೆನಗೆ ಪೇಳೆಂದೆರಗಿದಳು ಪದಕೆ ॥೪೯॥

ಸುಟ್ಟೆನಾನಜ್ಞಾನ ಕಾಮನ
ಸುಟ್ಟವೊಲು ಹಣೆಗಣ್ಣ ಕಿಡಿಯಲಿ
ತೊಟ್ಟೆನಾಂ ಭಕ್ತಿಯನು ರಘುವರ ಚರಣಯುಗಳದಲಿ ।
ಕೆಟ್ಟ ಪಡೆದೆನು ರಾಮನೊಲವನು
ಕೊಟ್ಟೆ ರಾಮಸುಧಾರಸವ ಮನ
ಕಿಟ್ಟ ಕಿಚ್ಚನು ದುರಿತವುರಿದುದು ನಾಥ ಕೇಳೆನಲು ॥೫೦॥

ಸತಿಯ ಮಾತನು ಮೆಚ್ಚಿ ಶಂಕರ
ಹಿತದಿ ರಾಮಧ್ಯಾನ ಮಾಡುತ
ಮತಿಯನೆರೆದನು ಸತಿಗೆ ತತ್ವವನರಿಯೆ ಸುಲಭದಲಿ ।
ನುತಗುಣನು ನೇವರಿಸಿ ಕುರುಳನು
ಸತಿಯ ತೊಡೆಯೊಳಗಿರಿಸಿ ರಾಮನ
ಕಥೆಗಳಭಿವರ್ಣಿಸಿದ ತತ್ವರಹಸ್ಯಗಳ ಬಿಡಿಸಿ ॥೫೧॥

## ವಿಶ್ರಾಮ ೩

ಸೂ॥ ಸ್ಮರನ ಗೆಲ್ದಾತುರದಿ ನಾರದ
ವಿರಹ ದುಃಖದಿ ಶಾಪವೀಯಲು
ಹರಿಯು ರಾಕ್ಷಸವಧೆಗೆ ಭಕ್ತನ ಶಾಪ ಕೈಗೊಂಡ ॥

ಹೊಳೆಯೆ ರಾಮನ ಮೂರ್ತಿ ಹೃದಯದಿ
ಲಲಿತೆಯಂ ಮನ್ನಿಸುತ, ಪಾರ್ವತಿ
ಯಲಘು ಮತಿ ನೀನರಿವೆ ರಾಮರಹಸ್ಯ ಸಕಲವನು ।
ಇಳೆಯ ಹಿತಮಂ ಬಯಸಿ ಕೇಳುವೆ
ಯೊಲವಿನಿಂದಾ ರಾಮು ಚರಿತೆಯ
ಸುಲಭ ರೀತಿಯೊಳೊರೆವೆನೆಂದನು ಶಿವನು ಸತಿಯೊಡನೆ ॥೧॥

ನಿದ್ದೆಯೆಚ್ಚರವೆರಡಲಿ ನರ
ಮೊದ್ದುತನವನು ನೀಗೆ ಮಾಯೆಯ
ನದ್ದಿ ಸುಜ್ಞಾನಾಬ್ಧಿಯಲಿ ಹರಿಭಕ್ತಿಗೊಲಿಯುತ್ತ ।
ಶುದ್ಧ ಮನದಿಂ ನೋಡೆ ಚರಣದಿ
ಬಿದ್ದು ಹೊರಳಲು ರಾಮನಲ್ಲಿಯೆ
ಎದ್ದು ಬರುವನು ಪರಮ ಕರುಣಾವನಧಿ ಕೇಳೆಂದ ॥೨॥

ರಾಮ ಪಾದಾಬ್ಜಾನುರಾಗದಿ
ಕಾಮಿಸಿದೆ ಸತ್ಕಥೆಗಳಾಲಿಸೆ
ರಾಮಲೀಲಾಶ್ರವಣ ಪಾವನ ಮೋಕ್ಷ ಸಾಧನವು ।
ರಾಮ ಗುಣಗಳ ಬಲ್ಲುದೇ ಪೆಣ
ರಾಮಕತೆಗಳ ಕೇಳ್ವುದೇ ಬಿಲ
ರಾಮಪದಕೆರಗುವುದೆ ಸೋರೆಯ ಬುರುಡೆ ಕೇಳೆಂದ ॥೩॥

ಹರಿಯ ಗಾನವ ಕಪ್ಪೆ ಬಲ್ಲುದೆ
ಮರವು ಪೋಪುದೆ ತೀರ್ಥಯಾತ್ರೆಗೆ
ಹರಿಯ ಗುಣಗಾನದಲಿ ಸುಖಿಸದ ಹೃದಯ ಕಬ್ಬುನವು ।
ನರಪ ದಶರಥತನಯ ಮೋಹಾಂ
ನಿರುತ ಜಾನಿಪ ರಾಮನೊಬ್ಬನೆ
ತರಳೆ ಲೋಕಾತ್ಮನೊಳು ಭೇದವ ತಾರದಿರು ಮನದಿ ॥೪॥

ಅರಿಯರುಚಿತಾನುಚಿತ ಜನಿಸುತ
ಕುರುಡರವರಾಗುವರು ದ್ವಂದ್ವವ
ನರಿಯದೆಯೆ ಜರಿಯುವರು ಬಗೆ ಬಗೆಯಿಂದ ಕುಹಕಿಗಳು ।
ಪರಮ ಭಕ್ತಿಗೆ ಸಿಲ್ಕಿ ರೂಪವ
ಧರಿಸಿ ಬರುವನು ಸಗುಣನಾಗುವ
ಹರಿಯು ಶರಣರ ಪಾಲಿಸಲು – ನಿಜವೆಣಿಸೆ ನಿರ್ಗುಣನು ॥೫॥

ಶೋಕ ಹರ್ಷ ಜ್ಞಾನವಜ್ಞತೆ
ಬೇಕು ಬೇಡೆಂಬಾಸೆ – ಅಹಮಿತಿ
ಭೀಕರ ವ್ಯಾಪಾರ ಜೀವನ ಧರ್ಮ ಕರ್ಮಗಳು ।
ಸೋಕಲಾರವು ರಾಮನಂ ಹರಿ
ಗೇಕೆ ದ್ವಂದ್ವದ ತೊಡಕು ಲೋಕದೊ
ಳೇಕ ರಾಮಬ್ರಹ್ಮ ನಾವರಿತಿಹುದು ತಿಳಿಯೆಂದ ॥೬॥

ಚರಿಸುವನು ಕಾಲಿಲ್ಲ ಮಾಡುವ
ಕರುಮವನು ಕೈಯಿಲ್ಲ ಕೇಳುವ
ಕರಣ ಮೊದಲವಗಿಲ್ಲ ರಸಗಳನರಿವ ಮುಖವಿಲ್ಲ ।
ಒರೆವ ನಾಲಿಗೆಯಿಲ್ಲ, ಯೋಗಿಗೆ
ಪರಮ ಸುಜ್ಞಾನವನು ನೀಡುವ
ಹರಿಯು ನಿರ್ಗುಣನುಯನು ರಾಮನ ತಿಳಿವರಾರೆಂದ ॥೭॥

ಮುಟ್ಟುವನು ತನುವಿಲ್ಲ ನೋಡುವ
ದಿಟ್ಟಿ ಮೊದಲವಗಿಲ್ಲ ಲೋಕವ
ಸೃಷ್ಟಿಸುವ ವಾಸನೆಯ ಕೊಳ್ವನು ಹರಿಗೆ ಮೂಗಿಲ್ಲ ।
ಮುಟ್ಟುವನು ಮೂಸುವನು ಕೇಳುವ
ದಿಟ್ಟಿಸುವ ತಿರುಗುವನು ಮಾಯಾ
ಪಟ್ಟವೇರಿದ ದೇವದೇವನಲೌಕಿಕದ ಕೃತಿಯಿಂ ॥೮॥

ಹರುಷ ದುಃಖಂಗಳಲಿ ರಾಮ
ಸ್ಮರಣೆಗೈದೊಡೆ ದುರಿತ ಸಂಚಿತ
ಹರಿದು ಪೋಪುದು ಸುಲಭದಲಿ ಭವಶರಧಿ ದಾಟುವನು ।
ಹರಿಯೆ ಪರಮಾನಂದರೂಪನು
ಧರಣಿಜಾಪತಿ ದಾಶರಥಿ ದನು
ಜಾರಿ ರಾಘವ ಮನ್ಮನೋದೇವತೆಯು ಪರಮಾತ್ಮ ॥೯॥

ರಾಮನವತಾರಗಳ ಕಾರಣ
ವೀ ಮಹಿಯ ರಾಕ್ಷಸರ ಪಾಪವ
ತಾಮಸವ ಪರಿಹರಿಸಲಾಯ್ತೆಂದೊರೆಯುವರು ಬುಧರು ।
ರಾಮನೆಸೆದನು ಹಲವು ಕಲ್ಪದೊ
ಳಾ ಮಹಾತ್ಮನು ಸಿಗನು ತರ್ಕಕೆ
ಭಾಮೆ ಕಾರಣವೊರೆಯಲರಿಯೆನಗೋಚರನ ಲೀಲೆ ॥೧೦॥

ಜಗದೊಳಾಗಲು ಧರ್ಮ ಸಂಕರ
ಸುಗುಣಿಗಳಿಗಪಮಾನವಾಗ
ಲ್ಕೊಗೆವ ರಾಕ್ಷಸ ನಿಕರಕೀಯುವ ಮೋಕ್ಷ ಕರುಣದಲಿ ।
ಜಗಕೆ ತನ್ನ ಯಶೋವಿಶಾಲವ
ಯುಗ ಯುಗಿಸಿ ತೋರಲ್ಕೆ ಬರುವನು
ನಿಗಮ ಮರ್ಯಾದೆಯನು ಪುನರುತ್ಥಾನ ಮಾಡಲ್ಕೆ ॥೧೧॥

ವೀರ ರಘುರಾಮನಿಗೆ ಮಮತಾ
ದ್ವಾರಪಾಲಕರಿರ್ವರಿರುವರು
ಚಾರುಗಾತ್ರರು ಮೆರೆಯೆ ಜಯವಿಜಯಾಭಿಧಾನದಲಿ ।
ಸಾರಸಾಕ್ಷನ ಭಕ್ತವರ್ಗವ
ಮೀರಿದೆಸಯಶದಿಂದ ಧರಣಿಗೆ
ಜಾರಿ ರಾಕ್ಷಸರಾಗಿ ಪುಟ್ಟಿದರವರು ಪಾಪದಲಿ ॥೧೨॥

ಕನಕ ಕಶ್ಯಪನೆನಿಸಿ ಜಯನುಂ
ಕೊನೆಗೆ ವಿಜಯನು ಹಿರಣ್ಯನಯನನ
ಜನುಮಮಂ ತಾಳಿದರು ತಾಪಸ ಶಾಪದಿಂದವರು ।
ವನಜನಾಭ ವರಾಹ ರೂಪದಿ
ಕನಕನಯನನ ಕೊಂದ ನರಹರಿ
ಯೆನಿಸಿ ಕೊಂದ ಹಿರಣ್ಯಕಶ್ಯಪನನ್ನು ಕರುಣದಲಿ ||೧೩||

ಎರಡನೆಯ ಜನುಮದಲಿ ರಾವಣ
ದುರುಳ ಕಂಟಕ ಕುಂಭಕರ್ಣನು
ಮರಳಿ ಬಂದರು ಜಗದ ಶಾಂತಿಗೆ ಭಂಗವೊಡ್ಡಿದರು ।
ಒರೆಸಿದನು ರಘುರಾಮನವರಂ
ಹರಿಯುಸಾರ್ದರು ಮೂರು ಜನ್ಮದೊ
ಳರಿಗಳೆನಿಸುತ ಜಯವಿಜಯರುಂ ಶೀಘ್ರದಲಿ ನಡೆದು ||೧೪||

ಒಂದು ಕಲ್ಪದಿ ಹರಿಗೆ ನಾರದ
ನಿಂದಲಾದುದು ಶಾಪ ಮೇಣರ
ವಿಂದನಾಭನ ಕಶ್ಯಪಾದಿತಿ ತಪದಿ ಮೆಚ್ಚಿಸುತ ।
ನಂದನನು ನೀನಾಗು ತಮಗೊಲ್ಲಿ
ದೆಂದು ವರಗಳ ಪಡೆಯೆ ಲೀಲೆಯೊ
ಳಂದು ತಾನೇ ಮನುಜರೂಪವ ತಾಳ್ದನೇನೆಂಬೆ ||೧೫||

ನಾರದನು ಸಂಚಾರವಶದಿಂ
ಸೇರಿದನು ಹಿಮಗಿರಿಯು ಗಂಗಾ
ತೀರದಲಿ ಕುಳಿತಿರಲು ರಾಮಧ್ಯಾನ ಪರನಾದ ।
ಸಾರುತಿರೆ ದಿವಸಗಳು ತಪದೊಳ
ಪಾರ ಸಂತೋಷದಲಿ ಮುಳುಗಿರೆ
ಮಾರುವೋದನು ಶಕ್ರ ಸುರಮುನಿ ತಪದ ಬಲ್ಮೆಯಲಿ ||೧೬||

ಮನದೊಳಾಶಯವೇನೊ ಬಗೆವನೊ
ಮುನಿಪ ಮೋಕ್ಷವನಿಂದ್ರಪದವಿಯ
ನೆನೆವನೋ ಹಾಯೆಂದು ಭಯದಲಿ ಮನ್ಮಥನ ಕರೆದು ।
ಮನ ವಿಕಾರವಗೊಳಿಸಿ ನಾರದ
ಮುನಿ ಸಮಾಧಿಯ ತೊರೆಸಿ ರಕ್ಷಿಸು
ಘನಮಹಿಮ ನಿನಗವನು ತೋಟಿಯೆ ಕಾಮ ನಡೆಯೆಂದ ॥೧೭॥

ಕಾಮಜಾಲವನೊಡ್ಡಿ ನಾರದ
ನಾ ಮಹಾತಪಕಿತ್ತ ಕಿಚ್ಚನು
ಭಾಮೆಯರು ಸುರನಾರಿಯರು ನಲಿಯುತ್ತ ನರ್ತಿಸಲು ।
ಕಾಮ ಮೋಹಕೆ ಸಿಲ್ಕದಾಮುನಿ
ರಾಮಪದದಲಿ ಬಂಧಿಸಿದ ಮತಿ
ಧೂಮವೇಳುತ ಕಾಮನಾಟವನಡಗಿಸಿತು ಮುರಿದು ॥೧೮॥

ಮರಳಿದನು ಲಜ್ಜೆಯಲಿ ಮನ್ಮಥ
ಸುರಮುನಿಯ ಬಲ್ಮೆಯನು ಹೊಗಳಲು
ಸುರರು ಸುಮವರ್ಷವನು ಕರೆದರು ತುಹಿನಗಿರಿಯಲ್ಲಿ ।
ಸ್ಮರನ ಗರ್ವವ ಮುರಿದ ಪೆರ್ಮೆಯೊ
ಳಿರದೆ ಮುನಿಪತಿ ಜರಿದ ವಿಧಿ ಹರಿ
ಹರರ, ಮೆಚ್ಚಿದ ತನ್ನ ತಾನೇ, ನಡೆದ ಪಯಣದಲಿ ॥೧೯॥

ಮುನಿಯ ಹಿತಮಂ ಬಯಸಿ ಮಾಯಾ
ವನಿತೆಗಾಣತಿಯಿತ್ತ ಸಿರಿಪತಿ
ಮುನಿಪತಿಯ ಮಾರ್ಗದಲಿ ನಡೆಸಿದಳಚ್ಚರಿಯ ಮಾಯೆ ।
ಜನಪನೊರ್ವಂ ಇದಿರುಗೊಳುತಾ
ಮುನಿಯನರಮನೆಗೊಯ್ದು ಕನ್ಯಾ
ಮಣಿಯ ಸುಂದರಿ ವಿಶ್ವಮೋಹಿನಿಯನ್ನು ತೋರಿದನು ॥೨೦॥

ನೆರೆದಿಹರು ಬಹು ರಾಜಪುತ್ರರು
ತರಳೆಯನು ವರಿಸಲ್ಕೆ ಕರುಣದಿ
ಹರಸಿ ನೀವೆನೆ ರೂಪರಾಶಿಯ ಕಂಡು ಬೆಮೆಗೊಂಡ |
ತೊರೆದ ಮತಿಯಂ ಜಪವು ಜಾರಿತು
ಸರಿಯೆ ವೈರಾಗ್ಯಗಳು ಮನಸಿಜ
ಶರದಿ ನೊಂದನು ವಿಶ್ವಮೋಹಿನಿಯಂಗಸುಖ ಬಯಸಿ ||೨೧||

ಜನಪತಿಯು ಹೊಗಳುತ್ತ ಹರಸಿದ
ವನಿತೆಯನು ನೋಡುತ್ತ ಹರಿಪದ
ವನಜಮಂ ನೆನೆಯುತ್ತಲವನಾ ದಿವ್ಯರೂಪವನು |
ಅನಘ ನೀಡರಘಳಿಗೆ ಮೋಹಿನಿ
ಮನವನೆನ್ನೊಳು ನಿಲಿಸಿ ಕರುಣದಿ
ತನುಜನಂ ಸಲಹೆಂದು ಬೇಡಿದ ರಿಸಿಯು ಮೋಹದಲಿ ||೨೨||

ತನುವ ಬಾಧಿಪ ರೋಗಕೌಷಧ
ವನು ಕೊಡುವವೊಲು ಹಿತದೊಳಾಂ ಮೋ
ಹಿನಿಯ ಮೋಹಾತುರವ ಕಳೆವೆನು ನಿನ್ನ ಕೈಬಿಡೆನು |
ಮುನಿಯೆ ಭಕ್ತರ ಪೊರೆವ ಬಿರುದಿರ
ಲೆನಗೆ ಸಲಹೆನೆ ನಿನ್ನ ! ನಡೆಯೆಂ
ದನಘನೊರೆಯಲು ಬಂದ ನಾರದ ಲಗ್ನ ಮಂಟಪಕೆ ||೨೩||

ಮದನ ಮಂತ್ರವ ಜಪಿಸುತಾಮುನಿ
ಪದುಮನಾಭನು ರೂಪರಾಶಿಯ
ನೊದವಿಸಿದ ತನಗೆಂಬ ಹರುಷದಿ ಮನದೊಳಾತುರದಿ |
ಇದಿರು ನೋಡುತಲಿರಲು ಸಮಯುವ
ಮನದಿ, ಶಿವಗಣವೆರಡು ನಾರದ
ಗೊದವಿದಾಶಯದಿಂದ ಹಾಸ್ಯವಮಾಡೆ ಚೇಷ್ಟೆಯಲಿ ||೨೪||

ವರಿಸಿದುದು ಕಪಿರೂಪ ಮುನಿಯನು
ಹರಿಯು ಹಿತವನೆ ಬಯಸಿ ತಿದ್ದಿದ
ಸುರಮುನಿಯ ಮುಖ ಕಪಿಯತೆರನಾಯ್ತರಿಯದೊಲು ಜನರು ।
ಪರಮ ಸಂತೋಷದಲಿ ಮೋಹಿನಿ
ಕರವನೇ ಬಯಸುತ್ತ ಕುಳಿತಿರೆ
ಹರಗಣಂಗಳ ಹಾಸ್ಯ ಮಿತಿಮೀರಿದುದು ಸಭೆಯೊಳಗೆ ॥೨೫॥

ವೀರ ರಘುವರ ಮೂರ್ತಿ ರಾಜ ಕು
ಮಾರರೂಪದಿ ಬಂದು ಕುಳಿತಿರೆ
ನಾರದನ ಕಪಿಮುಖವ ಕಾಣುತ ನಕ್ಕು ಮೋಹಿನಿಯು ।
ಹಾರ ಹಾಕುತ ಹರಿಯ ವರಿಸಿದ
ಳಾ ರಮಾಧವ ವಿಶ್ವಮೋಹಿನಿ
ವೆರಸಿ ನಿಮಿಷದಿ ಮಾಯವಾದನು ತೋರುತಚ್ಚರಿಯ ॥೨೬॥

ಹರುಷಮಾರಿತು ಕೋಪವೇರಿತು
ಹರಿಗಣಂಗಳ ಮಾತಿನಲಿ ಮುನಿ
ನಿರುಕಿಸಲು ನೀರಿನಲಿ ಕಪಿಮೊಗ ಕಂಡಸಹ್ಯದಲಿ
ಸರಿಸಿಯಲಿ ಮತ್ತೊಮ್ಮೆ ನೋಡಲು
ಹರಿದುದಾ ಕಪಿರೂಪ ಮುನ್ನಿನ
ಪರಮ ಕಾಂತಿಯ ಪೊಂದುತಾಕ್ರೋಶವನು ತಾಳಿದನು ॥೨೭॥

ಮರೆಸೆ ನಿಜವನು ಶಿವಗಣಂಗಳು
ದುರುಳ ರಕ್ಕಸರಾಗುತಲಿ ಕಪಿ
ವರರ ಕರದಿಂ ಮೋಕ್ಷವೆನ್ನುತ ಶಾಪನೀಡಿದನು ।
ವಿರಹ ದುಃಖವನೊಡ್ಡಿ ಕವಡಿನೊ
ಳಿರಿದೆ ಹೃದಯವ ಮಾನಗೆಡಿಸಿದೆ
ವಿರಹದುಃಖದಿ ನೋವಜನ್ಮವು ಬರಲಿ ಹರಿಗೆಂದ ॥೨೮॥

ಒಡನೆ ಶಾಂತಿಯು ಪಡೆದು ನಾರದ
ಕೆಡೆದ ದೇಹವ ಹರಿಯು ಚರಣದಿ
ಮಡಿದ ತೆರನಾಯ್ತಾನು ಮಾಯದ ಬಲೆಗೆ ಸಿಲ್ಕಿದೆನು ।
ಜಡಮತಿಯ ತೊಡೆಯೆಂದ – ಮುನಿಪತಿ
ಬಿಡು ವಿಷಾದವ ಮಾಯಹರಿದುದು
ತೊಡುವೆ ದೇಹವ ಮುಂದೆ ಶಾಪವಕೊಂಡೆ ನಾನೆಂದ ॥೨೯॥

ಮುನಿಯ ಶಾಪದೊಳೊಂದು ಕಲ್ಪದಿ
ವನಜನಾಭನು ರಾಮನಾದನು
ವಿನಯದಿಂ ಸ್ವಾಯಂಭುವನು ಶತರೂಪೆಯೊಡಗೂಡಿ ।
ತನುವದಂಡಿಸಿ ತಪವಗೈದರು
ಘನಮಹಿಮೆಯಿಂ ಕಂಡು ಮೆಚ್ಚುತ
ವಿನುತ ವಿಧಿ ಹರಿ ಹರರು ದರ್ಶನವಿತ್ತು ಹೊಗಳಿದರು ॥೩೦॥

ಹರಿಯು ಕರುಣದಿ ವರವಬೇಡೆನೆ
ತರಳ ನೀನೆಮಗಾಗಿ ಸಲಹೆನೆ
ದುರುಳ ರಾಕ್ಷಸ ವಧೆಯ ಕಾರ್ಯಕೆ ನಿಮ್ಮೊಳುದಿಸುವೆನು ।
ತರಣಿ ಕುಲದಲಿ ನಿಮಗೆ ಜನ್ಮವು
ಬರಲು ಮಗನಹೆನೆಂದು ಹರಿ ಕ
ಣ್ಮರೆಸಿ ನಡೆದನು ಮನುವು ಹರ್ಷದಿ ತುತಿಸಿ ಪಾಡಿದನು ॥೩೧॥

ಮನುವೆ ದಶರಥ ಸತಿಯೆ ಕೋಸಲೆ
ಘನತರದಿ ಮೆಚ್ಚಿಸಲು ಪರಿಯೋ
ತನಯನಾದನು ರಾಮಚಂದ್ರನು ಮಹಿಮೆದೋರಿದನು ।
ವಿನಯವೆನಿತೋ ಕರುಣವೆನಿತೋ
ವನಜನಾಭಗೆ ಭಕ್ತರಲಿ ಕೇ
ಳ್ದನಿತು ವರಗಳನೀವ ವೈದೋರುವನು ಕಾಯುವನು ॥೩೨॥

# ವಿಶ್ರಾಮ ೪

ಸೂ॥ ಧರೆಯಗೆಲ್ದು ರವಿಪ್ರತಾಪನು
ಗರುವದಲಿ ವಿಧಿವಶದಿ ಶಾಪದಿ
ಜುರುಳ ರಾವಣನೆನಿಸಿ ಜನಿಸಿದ ಬಂಧುಜನ ಸಹಿತ ॥

ಕೇಳು ಮುಂಗತೆ ಸತ್ಯಕೇತು ನೃ
ಪಾಲಸುತ ಭಾನುಪ್ರತಾಪನು
ಪಾಲಿಸಿದ ಧರ್ಮದಲಿ ಕೇಕಯರಾಜ್ಯಮಂ ಪಡೆದು ।
ಸೋಲಿಸಿದ ನೃಪ ನಾಲ್ಕುದಿಕ್ಕಿನ
ಮೂಲೆಯರಸುಗಳನ್ನು ಮೆರೆದನು
ಮೇಲೆನಿಸಿ ಭಯಗೊಳಿಸಿ ಸರ್ವರ ಬಾಹುವೀರ್ಯದಲಿ ॥೧॥

ಕಿರಿಯನರಿಮರ್ದನನುಮಂತ್ರಿಯು
ಧರುಮರುಚಿಯತಿ ವೀರರಿರ್ವರು
ಧುರದೊಳಪಜಯಮೆಂಬುದರಿಯರು ನೀತಿಕೋವಿದರು ।
ನರಪನಿಕರವ ಗೆಲ್ದು ಕೈಯೊಳ
ಗಿರಿಸೆ ಸಕಲರಸೂಯೆಯಲಿ ನರ
ವರನ ಹಾನಿಯ ಬಯಸುತಿರ್ದರು ಬದ್ಧ ವೈರದಲಿ ॥೨॥

ಏಕ ಚಕ್ರಾಧಿಪತಿ ಲೋಕೋ
ದ್ರೇಕವಡಗಿಸಿ ಬಾಹುವಿಕ್ರಮಿ
ಲೋಕವಿಖ್ಯಾತಿಯನು ಪಡೆದನು ಧರ್ಮನೀತಿಯಲಿ ।
ನಾಕಕಿಂ ಮಿಗಿಲಾದ ಭೋಗವ
ನೇಕವುಡಿಯಿಂದನುಭವಿಸಿದನು
ಮೂಕರಾದರು ಸುರರು ಧರೆಯಮರಾವತಿಯಿದೆಂದು ॥೩॥

ಕಟ್ಟಿಸಿದ ಕೊಳ ಬಾವಿ ಕೆರೆಯರ
ವಟ್ಟಿಗೆಯ ದೇವಾಲಯಂಗಳ
ಕಟ್ಟಿ ಭೂಸುರನಿಲಯವಿಡಿಸಿದನನ್ನ ಸತ್ರಗಳ |
ಅಟ್ಟಿ ಹಿಡಿದುದು ಕೇಡು ನೃಪಜಗ
ಜಟ್ಟಿಯಂ ವಿಧಿ ಸೋತರಾಯರ
ನಿಟ್ಟುಸುರು ಕಟ್ಟಿದುದು ರಾಯನ ಪುಣ್ಯಕೀಲಿಸುತ ||೪||

ನಡೆದ ಮೃಗಯಾವ್ಯಸನದಲಿ ನೃಪ
ನಡವಿಯಲಿ ಮೃಗಗಳನು ಬಾಣದಿ
ಕೆಡಹುತೊಟ್ಟಿದ ರಾಶಿ – ಭೀಕರ ಹಂದಿಯಿದಿರಾಯ್ತು |
ಬಿಡದೆ ಬಾಣವ ಹೂಡಿ ಕೋಪದಿ
ಕಿಡಿಯಕಾರುತಲೋಡಿ ನೃಪ ನ
ಟ್ಟಡವಿ ಸೇರ್ದನು ಮಾಯಮಾದುದು ಹಂದಿ ಮರೆಯಾಗಿ ||೫||

ಶಶಿಯ ನುಂಗುವ ರಾಹುವೊಲು ಕ
ಣ್ಗೆಸೆದುದಾ ಮಿಗವಡಗಿ ಕುದುರೆಯ
ಬುಸು ಬುಸು ಸ್ವರದಿಂದಲೆದ್ದುದು ನುಸೆದು ದಾಡೆಯನು |
ನಿಶಿಯ ತಮ ಪಥದಲ್ಲಿ ಬೆಚ್ಚುತ
ಲೆಸೆದ ವಿಶಿಖವ ತಪ್ಪಿದುದು ಗುರಿ
ಬಿಸಿಯುಸುರುಗರೆಯುತ್ತ ಮುಂದಕೆ ನಡೆದ ಕಷ್ಟದಲಿ ||೬||

ಹಳುವದಲಿ ಸಂಚರಿಸಿ ದಾಹದಿ
ಬಲುಬಳಲಿ ಬೆಂಡಾಗಿ ಮೂರ್ಛೆಯೊ
ಳಿಳೆಗೊರಗಿ ಬಿದ್ದಿರಲು ಶೀತಲವಾಯು ಸೋಕುತಿರೆ |
ತಿಳಿದು ನೃಪನೇಳುತ್ತ ನಡೆದನು
ಜಲವನರಸುತಲಿರಲು ಕಂಡನು
ಕುಳಿತಿರಲು ಮುನಿಯೊರ್ವ ಯೋಗಾರೂಢನಾಗಿಹುದ ||೭||

ತ್ವರದಿ ಕುದುರೆಯನಿಳಿದು ಮುನಿಪದ
ಕೆರಗಿ ತಿಳುಹದೆ ತನ್ನ ಕುರುಹನು
ಶರವ ಯಾಚಿಸಿ ನಿಂದ ನರಪತಿ–ಕಣ್ದೆರೆದೆ ಮುನಿಯು ।
ಸರಸಿಜಾಕರವನ್ನು ತೋರಲು
ಪರಮಹರುಷದಿ ನೀರನೀಂಟುತ
ತೆ ೀರೆದನಾಯಾಸವನು–ಕುದುರೆಗೆ ಜಲವ ಕುಡಿಸಿದನು ||೮||

ರಣದಿ ಸೋತು ರವಿಪ್ರತಾಪಗೆ
ಜನಪನೊರ್ವನಸೂಯೆಯಿಂದಲಿ
ಮುನಿಯ ವೇಷವ ತಳೆದು ಪೊಕ್ಕನು ಕಾನನಾಂತರವ ।
ದನುಜಪಡೆ ನೇಹದಲಿ ವೈರಿಯ
ಹಸನಗೈವೆನೆನುತ್ತ ದುಃಖದ
ಹೊನಲಿನಲಿ ಸಿಕ್ಕಿರ್ದ ಸಮಯವ ಸಾಧಿಸುತ ಕಪಟಿ ||೯||

ಹಲವು ರಾಯರ ಧುರದಿ ಪರಿಭವ
ಗೊಳಿಸಿ ಭೂಮಿಯ ಕೊಂಡ ಬಗೆಯನು
ತಿಳಿಯುತುಳಿದಿಹ ಭೂಪರಿಗೆ ಹಗೆಯನ್ನು ತೀರಿಸಲು ।
ಹೊಳಹುದೋರುತ ಸಮಯ ಸಾಧಿಸಿ
ತಲೆದರಿವೆನೆನ್ನುತ್ತ ರಕ್ಕಸ
ಝೊಲವ ಸಂಪಾದಿಸಿದ ಕಪಟ ಮುನೀಶ್ವರನು ಭರದಿ ||೧೦||

ಬಂದಿರಲು ನೃಪಭೇಂಟಿಗಾವನ
ಕಂದು ರಾಕ್ಷಸ ಕಾಲಕೇಯನು
ಹಂದಿಯಾದನು ಸುಳಿದು ನರಪತಿ ಬಟ್ಟೆದಪ್ಪಿಸಿದ ।
ನಿಂದು ಕಪಟವನರಿಯದವ ಮುನಿ
ಯೆಂದೆ ನಂಬಿ ರವಿಪ್ರತಾಪನು
ತಂದೆ ದರುಶನದಿಂದ ಪಾವನನಾದೆ ನಾನೆಂದ ||೧೧||

ಕುರುಹ ಮರೆಸಿರೆ ನಿನ್ನ ನಿಜಗಳ
ನರಿಯಬಲ್ಲೆ ರವಿಪ್ರತಾಪನು
ನರಪರೊರೆಯರು ತಮ್ಮ ಪದವಿಯನಿದುವೆ ಧರ್ಮವಲಾ ।
ಇರುಳು ಕವಿದುದು ನಾಳೆ ನಗರಕೆ
ಸರಿವೆ ಮಲಗಿರಲಿನ್ನ ಶಕ್ತಿಯು
ಕರೆದು ಕಳುಹುವೆ ನಿನ್ನ ನೀನರಿಯದೊಲು ನೋಡೆಂದ ॥೧೨॥

ಇನಿತು ಶಕ್ತಿಯ ಪಡೆದ ನೀನಾ
ರೆನಲು ಜನಪ ಬಿಬಾರನೆಂಬರು
ಜನರು ನಿರ್ಧನ ಗೃಹವಿಹೀನನು ರಾಜ್ಯಬಾಹಿರನು ।
ಜನರ ಕಾಣೆನು ಕಾಣರೆನ್ನಂ
ಜನರು ಯೋಗಾರೂಢನಾಗಿಹೆ
ನೆನಿತೊ ಸಾವಿರ ವರುಷದಿಂದಾನಿಲ್ಲಿ ಕೇಳೆಂದ ॥೧೩॥

ನಿನ್ನ ಭುಜಬಲ ನೃಪರನಾಹುತಿ
ಯನ್ನು ಗೈದುದ ಬಲ್ಲೆ ಮೆಚ್ಚುತ
ನಿನ್ನ ಸತ್ಯಕೆ ಕುರುಹನೊರೆದೆನು ಗೂಢವಿರಿಸಿದೆನು ।
ಅನ್ಯರಿಂದೆನಗೇನು ಲೋಕದೊ
ಳೆನ್ನನೇ ಮರೆಯುತ್ತ ನೆನೆವೆನ
ನನ್ಯ ಭಾವದಿ ದೇವದೇವನ ನೃಪತಿ ಕೇಳೆಂದ ॥೧೪॥

ಬಂದೆನೊಂದೇ ಸಾರಿ ಭೂಮಿಗೆ
ಬಂದುದೊಂದೇ ತನುವನಾದಿಯು
ತಂದೆ ಪೆಸರಾಯ್ತೇಕತನುವೆಂದೆನಗೆ ಧರಣಿಯಲಿ ।
ಪೊಂದಲಿಲ್ಲೆರಡನೆಯ ದೇಹವ
ನಿಂದಿರಾಪತಿಯೊಲಿಸಿ ಸಕಲವ
ನಿಂದು ವನದೊಳೆ ಕಾಣ್ಕೆನೆಂದನು ಕಪಟದಲಿ ಮುನಿಯು॥೧೫॥

ಒರೆದುದಿಲ್ಲಾರೊಡನೆ ಮೇಣಾ
ನರಿಯೆನಾರಂ ಹಲವು ಕಾಲಕೆ
ತರಳ ನಿನ್ನಂ ಕಂಡೆ ಮೆಚ್ಚಿದೆ ನಿನ್ನ ಭಕ್ತಿಯನು ।
ವರವ ನೀಡುವೆ ಕೇಳೆನಲು ನೃಪ
ಹರುಷದಲಿ ಮುನಿಪದದಿ ಹೊರಳಿದ
ನರಿಯದಿರ್ದನು ಕವಡುಯೋಗಿಯ ಕಪಟಮಂತ್ರಗಳ ॥೧೬॥

ಕರುಣವೆನಿತೋ ತರಳನಲಿ ಮುನಿ
ವರನೆ ಪಾಲಿಸು ಸಮರ ಜಯಸಿರಿ
ಧರಯನೇಕಚ್ಛತ್ರಪತಿಯೆನಿಸುತ್ತ ಶತಕಲ್ಪ ।
ಪೊರೆದು ಕೀರ್ತಿಯ ಪಡೆಯೆ ಕರುಣಿಸು
ಮರಣದುಃಖ ಜರಾದಿ ಸಂಕಟ
ವರವಿದೂರನ ಮಾಡು ಮನದಿಷ್ಟಾರ್ಥ ನೀಡೆಂದ ॥೧೭॥

ಕವಡುಮುನಿ ಸಂತಸವ ನಟಿಸುತ
ಲವನಿಪತಿ ನಿನಗಿತ್ತೆ ವರಗಳ
ಬುವಿಯ ಶತಕಲ್ಪಗಳು ಪಾಲಿಪೆ ಕೀರ್ತಿವಡೆಯುತ್ತ ।
ದಿವಿಜಪಡೆ ಭಯವೊಂದು ನಿನಗುಂ
ಟವರು ಜಪತಪಯೋಗ ಬಲದಿಂ
ಭವವಿದೂರರು–ಹಾರುವರು ವೈರಿಗಳು ನಿನಗೆಂದ ॥೧೮॥

ಅವರ ಶಾಪದಿ ನಿನಗಳಿವು ನೀ
ನವರ ವಶಪಡಿಸಿದೊಡೆ ಸರಿಸಿಜ
ಭವನು ಹರಿಹರರೂಳಿಗವ ಮಾಡುವರು ನಿತ್ಯದಲಿ ।
ಅವರ ಮೈತ್ರಿಗುಪಾಯವೊಂದಿಹು
ದವನಿಪತಿ ಮಾಡಿದೊಡೆ ಕೈಗೂ
ಡುವುವು ಮನದಿಷ್ಟಾರ್ಥ ರಾಜ್ಯಸ್ಥಿರವು ಕೇಳೆಂದ ॥೧೯॥

ಮೇಲೆನಿಪ ಸೌಭಾಗ್ಯಗಳ ನೀ
ಪಾಲಿಸಿದೆ ಕರುಣದಲಿ ಧರೆಯುವು
ರಾಳಿಯನ್ನೊಲಿಸಿಂದು ನೀನಾಯುಕ್ತಿಯಂ ರಚಿಸಿ ।
ಕಾಲನಂ ಸೋಲಿಸಿದೆ ವರದಿಂ
ದೇಳಿಗೆಯ ನಾಂ ಪಡೆದೆ ಕೃಪೆಯಿಂ
ದೇಳು ಕಾರ್ಯವ ಮಾಡು ಕರವಿಡಿಯೆಂದನಾ ಭೂಪ ॥೨೦॥

ಅರಸ ಯುಕ್ತಿಯ ಮಾಡುವೊಡೆ ನಾಂ
ಪುರಕೆ ಬಾರೆನು ಬಾರದಿರ್ದೊಡೆ
ವರವು ನಿಷ್ಫಲಮುಪ್ಪುದದರಿಂ ಕಷ್ಟಮಾಗಿಹುದು ।
ಅರಿಯರೆನ್ನಂ ಬುವಿಯೊಳಾರುಂ
ಪುರಕೆ ಗಮಿಸಿದುದಿಲ್ಲ ನಾನಿದು
ವರೆಗೆ ನಿನ್ನಿಷ್ಟಗಳನೆಂತಾಂ ಗೈವೆ ಹೇಳೆಂದ ॥೨೧॥

ನೋಡಿದನು ಕಪಟ ಪ್ರವೀಣನು
ನೀಡಿ ವರಗಳ ತಂತ್ರಜಾಲವ
ಹೂಡಿ ಮೋಹದಿ ಸೆಳೆದ ನರಪತಿ ಮನವ ಮೋಸದಲಿ ।
ಮೋಡಿಯರಿಯದೆ ಚರಣಗಳಲೀ
ಡಾಡಿದನು ದೇಹವನು ಮುನಿಯನು
ಕಾಡಿದರೆ ಬಹೆನೆಂದ ಹೃದಯದೊಳಹಿತ ಮಂತ್ರದಲಿ ॥೨೨॥

ಒರೆಯದಿರು ಗೂಢವಿದು ಬರುವೆನು
ಪುರಕೆ ನಿನ್ನ ಪುರೋಹಿತನೊಲಾಂ
ಮರೆಸುತೆನ್ನೀ ಮುನಿಯ ವೇಷವ ಕೆಲವು ದಿನಗಳಲಿ ।
ವರಪುರೋಹಿತನೆನ್ನ ರೂಪದೊ
ಳರಸ ವನದಲ್ಲಿರಲಿ ಪುರಜನ
ರರಿಯದಿರಲೆಮ್ಮಾ ರಹಸ್ಯವನೆಂದ ಕಪಟಮುನಿ ॥೨೩॥

ಅವನ ರೂಪದೊಳರಮನೆಯ ಸೇ
ರುವೆನು ಸವಿರಸ ಪಾಕಗಳ ಗೈ
ಯುವೆನು ದಿವಸಕೆ ಲಕ್ಷವಿಪ್ರರಿಗಶನವೀಯುತಲಿ |
ವಿವಿಧ ಸೇವೆಯೊಳವರ ಮೆಚ್ಚಿಸೆ
ಕುವರ ನಿನಗೆಣೆಯಾರು ಲೋಕದಿ
ಜವದಿ ಬರುವೆನು ಮೂರು ದಿನಗಳೊಳೆಂದ ಮಾಯಾವಿ ||೨೪||

ನರಪ ನಿದ್ರಿಸು ಪುರಕೆ ಕಳುಹುವೆ
ತುರಗ ಸಹಿತಲಿ ಯೋಗ ಬಲದಿಂ
ದಿರುಳು ಕಳೆಯುವ ಮುನ್ನ ಕತಿಪಯ ದಿನಕೆ ನಾ ಬಂದು |
ಪುರದಿ ಕಾಣಿಸಿಕೊಂಡು ಕುರುಪ
ನ್ನೊರೆವೆ ಯುಕ್ತಿಯ ಸಾಧಿಸುತ ಬುವಿ
ಸುರರ ಜಯಿಸುವ ಹವಣಗೈವೆನು ಚಿಂತೆ ಬೇಡೆಂದ ||೨೫||

ಇತ್ತ ನರಪತಿ ಮುದದಿ ನಿದ್ರಿಸ
ಲತ್ತ ಬಂದನು ಕಾಲಕೇತು ನೃ
ಪೋತ್ತಮನ ಹಾನಿಯನು ನೆನೆದರು ರಾತ್ರಿಯಲಿ ನೆರೆದು |
ತೆತ್ತಿಹರು ಭಾನುಪ್ರತಾಪಗೆ
ಪೊತ್ತ ದೇಹವ ಹಿಂದೆ ರಾಕ್ಷಸ
ರೊತ್ತೆಯಾಗಿರೆ ಕಾಲಕೇಯನು ತಲೆಮರೆಸಿಕೊಂಡ ||೨೬||

ರೋಷದಿಂ ರಕ್ಕಸರು ಭೂಪತಿ
ನಾಶಗೈಯಲು ಸೋತನರಪತಿ
ಗಾಸೆಯಂ ತೋರಿಸುತ ಭಾನುವ ಯುಕ್ತಿಯಿಂ ಜಯಿಸೆ |
ಭಾಷೆವಡೆದರು ದುರುಳ ಸೂಕರ
ವೇಷದಿಂ ಸೆಳೆಯುತ್ತ ಜನಪನ
ಮೋಸದಾಸರೆಯಲ್ಲಿ ಹಿಡಿದನು ಕಾಲಕೇತನನು ||೨೭||

ದುರುಳ ನಿಪಿಸದೊಳೊಯ್ದು ರಾಯನ
ತುರಗ ಸಹಿತರಮನೆಯೊಳಿರಿಸಿದ
ಸೆರೆಯೊಳಿರಿಸಿ ಪುರೋಹಿತನ ತಾನವನ ಪರಿಜಿಂದ ।
ಪುರವ ಹೊಕ್ಕನು ಕಾಲರಾಕ್ಷಸ
ನರಿಯ ಹಾನಿಯು ಬಗೆದು ಸೇರಿದ
ನರಮನೆಯ ಮೂರನೆಯ ದಿವಸದಿ ಕಂಡ ರಾಯನನು ॥೨೮॥

ಬಂದನೇ ಗುರು ಸಿರಿಯ ಸೆಳೆದೈ
ತಂದನೇ ಮುನಿ ಜನನ ಶಕ್ತಿಯು
ನಂದಿಸಿದನೇ ಕೃಪೆಯೊಳೆಂದ ರವಿಪ್ರತಾಪನೃಪ ।
ಹಿಂದರಣ್ಯದೊಳೆರೆದ ನುಡಿಗಳ
ನಂದುಮನದೊಳು ತಂದು ಮೋಸದ
ಬಂಧನವ ಸೇರಿದನು ಕಾಳೋರಗನ ಪಿಡಿದಂತೆ ॥೨೯॥

ದುರುಳನಾಣತಿಯಂತೆ ವಿಪ್ರರ
ಕರೆಸಿ ಬಹುಸಂಖ್ಯೆಯಲಿ ಭೋಜನ
ವಿರಿಸುತೊಲಿಸೆಲು ಭೂರಿದಕ್ಷಿಣೆ ದಾನ ಧರ್ಮದಲಿ ।
ಅರಸ ಮನಮಾಡುತ್ತ ಕರೆಸ
ಲ್ಕರಮನೆಗೆ ಸಂತಸದಿ ಬಂದರು
ಧರಣಿಯಮರರು ನೃಪನ ಸುಗುಣಾವಳಿಯ ತುತಿಸಿದರು ॥೩೦॥

ಮಾಡಿದನು ಪಾಕವ ಪುರೋಹಿತ
ಲಾಡು ಹೋಳಿಗೆ ಫೇಣಿರಾಶಿಯು
ಮಾಡಿ ಮೃಷ್ಟಾನ್ನಗಳ ಬಗೆಬಗೆಯಿಂದಲೊಟ್ಟಿದನು ।
ಮಾಡಿ ಪರಿಪರಿ ಪಾಯಸಂಗಳ
ರೂಢಿಗತಿಶಯಮಾದ ಪರಿಮಳ
ಕೂಡಿದುದು ನೃಪತೋಷಗೊಂಡನು ಮುನಿಯ ಸಹೃದಯಕೆ ॥೩೧॥

ಸದೆದು ದುಷ್ಟ ಬ್ರಾಹ್ಮಣರ ಮಾ
ಡಿದನು ಪಾಕವ ವಿಪ್ರಮಾಂಸದಿ
ವಿಧವಿಧದ ಮೃಗಮಾಂಸ ಪಕ್ವವಗೈದ ಮೋಸದಲಿ ।
ಬುಧನಿಕರ ಕಾಲ್ತೊಳೆದು ಕುಳಿತಿರೆ
ಮುದದಿ ರಾಯನು ತಂದು ಬಡಿಸಿದ
ನಧಮ ಮಾಡಿದ ಸಕಲ ಪಾಕವ ಮಾಂಸಭಕ್ಷ್ಯಗಳ ॥೩೨॥

ಖಳನು ಭೂಸುರ ಮಾಂಸಪಾಕದಿ
ಸೆಳೆದ ರಾಯನ ಸಕಲ ಧರ್ಮವ
ಕುಲವ ದಹಿಸಿದ ಸಿರಿಯ ತುಳಿದನು ತಲೆಯುಮೆಟ್ಟಿದನು ।
ಮೊಳಗಿದುದು ನಭವಾಣಿ ವಿಪ್ರರೆ
ತೊಳೆಯಿರೈ ಕೈಗಳನು ಕೆಡುತಿಹಿ
ರಿಳೆಯಮರ ಮಾಂಸವನು ಸವಿಯದಿರೆಂದು ಕೇಳಿದುದು ॥೩೩॥

ನಡುಗಿದರು ಭೂಸುರರು ನರಪತಿ
ಸಿಡಿಲೆರಗಿದೊಲು ಬಿದ್ದ ಭೂಮಿಯೊ
ಳಡಗಿದುದು ಸಂತಸವು – ವಿಪ್ರರು ತಾಳ್ದ ರೋಷವನು ।
ಜಡಮತಿಯೆ ನರಮಾಂಸವಿಕ್ಕಿದೆ
ಸುಡು ಸುಡೆಲವೋ ನಿನ್ನ ಧರ್ಮವ
ಪೊಡವಿಯೊಳು ರಾಕ್ಷಸನು ನೀನಾಗೆಂದು ಶಪಿಸಿದರು ॥೩೪॥

ಅಳಿದು ಹೋಗಲಿ ನಿನ್ನ ಬಾಂಧವ ।
ಕುಲವು ರಾಕ್ಷಸ ಜನ್ಮಪಡೆಯಲಿ
ಕುಲದ ನಾಮಕ್ಷಯವು ನಿನ್ನೀ ಪಾಪಕೃತಿಯಿಂದ ।
ಉಳಿದುವೆಮ್ಮಾ ಕರ್ಮ ನೀತಿಯು
ನಳಿನನಾಭನ ಕರುಣದಲಿ ನಿನ
ಗಳಿವು ಶೀಘ್ರದೊಳೆಂದು ಶಾಪವನಿತ್ತರಾ ದ್ವಿಜರು ॥೩೫॥

ಮೊಳಗಿದುದು ಮತ್ತೊಮ್ಮೆ ಗಗನದಿ
ಕುಲವನಳಿಸಿದಿರೇಕೆ ನರಪತಿ
ತಿಳಿಯನೊಂದನು–ನೃಪನ ಹಾನಿಯ ಬಯಸಿ ರಾಕ್ಷಸನು ।
ತುಳಿಯೆ ರಾಯನ ಸಿರಿಯ ಮೋಸದೊ
ಳೊಲಿಸಿ ಭೂಸುರ ಮಾಂಸವಿಕ್ಕಿಸಿ
ಸಿಲುಕಿಸಿದ ಶಾಪಾಗ್ನಿಯಲಿ ಖಳನೆಂದು ಕೇಳಿದುದು ॥೩೬॥

ಗಗನ ವಾಣಿಯ ಕೇಳಿ ಭಯದಿಂ
ದಗಿದು ವಿಪ್ರೋತ್ತಮರು ಮರುಗಲು
ಬಿಗಿದು ಬರುತಿಹ ದುಃಖದಲಿ ಭಾನುಪ್ರತಾಪನೃಪ ।
ಮುಗಿದು ಕೈಗಳ ನಮಿಸಿ ಚರಣದಿ
ಹಗೆಯ ತಾರದೆ ಮನಕೆ ಕರುಣದಿ
ತೆಗೆದು ಶಾಪವ ಕುಲವನುಳುಹಿರಿಯೆನುತ ಬೇಡಿದನು ॥೩೭॥

ಶಾಪವಾಗಲು ನೃಪಗೆ ರಾಕ್ಷಸ
ಸೂಪಕಾರನು ಮಾಯವಾದನು
ಪಾಪಿಯಾಮುನಿ ಕುಲವಿಘಾತಿಯಗೈದ ಕೈಮೆಯಲಿ ।
ಭೂಪತಿಯು ಕೆಡಿಸಲ್ಕೆ ವಿಪ್ರರು –
ಶಾಪ ಕಠಿನವು ತೆಗೆಯಲೆಂತಿಧ
ರೂಪುಗೆಡಿಸಿದೆವೆಂದು ಶೋಕದ ಭರದಿ ಮರುಗಿದರು ॥೩೮॥

ಮರುಗಿದರು ಧರಣೀಸುರರು ಪುರ
ವರವು ಶೋಕದೊಳದ್ದಿ ಮುಳುಗಿತು
ಧರುಮವಳಿದುದು ಸತ್ವವುರುಳಿತು ನೃಪನ ಹಾನಿಯಲಿ ।
ಧರೆಗೆ ರಕ್ಷಕರಾರು ಲೋಕದ
ಧರುಮ ದೇವತೆ ಕೆಟ್ಟನಕಟಾ
ತಿರೆಯು ತಬ್ಬಲಿಯಾಯ್ತೆನುತ ಜನ ಕೊರಗಿ ಮರುಗಿದುದು ॥೩೯॥

ಅತ್ತಲಾ ಖಳನೈದಿ ವಿಪ್ರನ
ಪತ್ತನಕೆ ನೂಕಿದನು ಸಕಲವ
ಬಿತ್ತರಿಸಲಾ ಕವಡು ಯೋಗಿಗೆ ಶಾಪಸಂಗತಿಯ
ಪತ್ರ ಬರೆಸುತಲಿತರ ನೃಪರಂ
ಶತ್ರುವನ್ನೊರೆಸಲ್ಕೆ ಕರೆಸಲು
ಮುತ್ತಿ ಕೇಕಯರಾಜ್ಯ ಯುದ್ಧವ ಮಾಡಿದರು ಮತ್ತೆ ॥೪೦॥

ಮೊಳಗಿದುದು ರಣಭೇರಿ ವೈರಿಗ
ಳಿಳಿದು ಕರೆದು ರವಿಪ್ರತಾಪನ
ಬಲವ ಮುರಿದರು ಕೇಡುಹಿಡಿದುದು ನೃಪನ ಬಂಧಿಸುತ ।
ತಲೆಯ ಮೆಟ್ಟಿತು ವಿಪ್ರಶಾಪದೊ
ಳಿಳೆಗೊರಗಿದನು ಬಂಧುಸಹಿತಲೆ
ಕುಲವ ತೊಡೆದರು ಪೂರ್ವವೈರಿಗಳಂದು ಕಳನೊಳಗೆ ॥೪೧॥

ಘೋರ ಧುರದಲಿ ಗೆಲ್ದು ತಂತಮ
ಧಾರುಣಿಯ ಪಡೆಯುತ್ತ ಹೊಕ್ಕರು
ವೈರಿರಾಯರು, ವಿಪ್ರಶಾಪದಿ ಸತ್ಯಕೇತುಕುಲ ।
ಮಾರುವೋದುದು ಕಾಲಮುನಿದರೆ
ಭಾರಮಪ್ಪುದು ತೃಣವು ತಾಯೇ
ವೈರಿಯೆನಿಪಳು ಹಗ್ಗ ಹಾವಹುದೆಂದ ಮುನಿನಾಥ ॥೪೨॥

ಕಾಲವುರುಳಲು ದೈವವಿಧಿಯಿಂ
ಖೂಳ ರಾಕ್ಷಸ ವಂಶದಲಿ ಭೂ
ಪಾಲನೊಗೆದನು ರಾವಣಾಂಕಿತದಿಂದ ದಶಶಿರದಿ ।
ಮೇಲೆನಿಪ ವಿಶ್ರವಸು ಬಸುರಲಿ
ತಾಳಿದನು ಜನ್ಮವನು ಧರಣೀ
ಪಾಳ ಸೋದರ ಮಂತ್ರಿಯರ್ವೆರಸುತ್ತ ಭೂಮಿಯಲಿ ॥೪೩॥

ಅನುಜನೇ ಘಟಕರ್ಣನಾಮದಿ
ಜನಿಸಿದನು ಧರೆನಡುಗೆ, ಮಂತ್ರಿಯು
ಜನಿಸಿದನು ಧರ್ಮಾತ್ಮ ಭಕ್ತ ವಿಭೀಷಣಾಂಕಿತದಿ ।
ಅನುಜ ತನುಜರು ಬಂಧು ಬಳಗವು
ಜನಿಸೆ ದನುಜಾನ್ವಯದಿ ರಾವಣ
ನನುಜರೊಡಗೂಡುತ್ತ ತಪವಾಚರಿಸಿದನು ಭರದಿ ॥೪೪॥

ಸರಸಿಜಾಸನ ಮೆಚ್ಚಿ ಬರೆ ದಶ
ಶಿರನು ಮಾನವರೆತ್ತ ಬಲದಲಿ
ಧರೆಯೊಳಾರುಂ ಕೊಲದ ಶಕ್ತಿಯ ನೀಡು ತನಗೆಂದ ।
ಮರೆತು ಬುದ್ಧಿಯ ಕುಂಭಕರ್ಣನು
ಭರದಿ ಬೇಡಿದ ನಿದ್ರೆಯನು, ರಘು
ವರನ ಭಕುತಿಯ ಕೇಳ್ದ ವಿನಯದೊಳಾ ವಿಭೀಷಣನು ॥೪೫॥

ವರಗಳಿತ್ತಾ ವಿಧಿಯು ತೆರಳಿದ
ಹರಸಿ – ಮೂವರು ಮರಳೆ ಹರುಷದಿ
ವರಿಸಿ ರಾವಣ ಮಯಕುಮಾರಿಯ ಕರವಿಡಿದ ಭರದಿ ।
ಅರಿತು ರಾಕ್ಷಸರವನತಿಯ ದಶ
ಶಿರನು ರಾಕ್ಷಸ ರಾಜ್ಯಕಟ್ಟಲು
ಧರೆಯ ದಿಗ್ವಿಜಯಾಭಿಲಾಷೆಯೊಳೈದಿದನು ಜವದಿ ॥೪೬॥

ಹಿಂದೆ ತನ್ನವರಾಳ್ದ ಲಂಕೆಯ
ಪೊಂದಲೋಸುಗ ಬರಲು ಬಲುಭಯ
ದಿಂದ ಬಿಟ್ಟೋಡಿದರು ಯಕ್ಷರು ತೊರೆದು ಲಂಕೆಯನು ।
ಅಂದದಿಂ ಹರಿಪೀಠವೇರುತ
ನಿಂದ ರಾವಣ ಭುಜಪರಾಕ್ರಮ
ದಿಂದಲವನೀ ಸಕಳರುಂ ಸೋಲಿಸಿದ ಪೆರ್ಮೆಯಲಿ ॥೪೭॥

ಪುತ್ರ ಮಿತ್ರ ಕಳತ್ರ ಬಾಂಧವ
ನಿತ್ಯ ಸಂಪದ ಪೆರ್ಚಿ ರಾವಣ
ಗತ್ಯಧಿಕ ಭುಜಶಕ್ತಿ ಮೆರೆದುದು ಲೋಕನಡುಗುತಿರೆ ।
ಎತ್ತಿ ಕೈಲಾಸವನು ತನ್ನಿ
ಪ್ಪತ್ತು ತೋಳ್ಗಳ ಬಲದಿ ಶಿವನಿಗೆ
ತೆತ್ತು ಗರ್ವವ ನೊಂದ ರಾವಣನೊಮ್ಮೆ ದರ್ಪದಲಿ ||೪೮||

ಹೋಮ ಜಪತಪ ಯಜ್ಞ ಪೈತೃಕ
ಧೂಮಗಳ ಕಂಡಲ್ಲಿಗೈದುತ
ಕಾಮರೂಪರು ರಾವಣಾಜ್ಞೆಯ ತಳೆದು ಕೆಡಿಸುವರು ।
ನೇಮ ಮೌನ ಸಮಾಧಿಯಡಗಿತು
ಭೂಮಿ ನಡುಗಿತು ಭಯದೊಳುಡುಗಿತು
ಸೋಮ ಸೂರ್ಯ ವಿರಿಂಚಿ ದಿಗುಪಾಲಕರ ಬಳಲಿಸಲು ||೪೯||

ನಡುಗಿದುದು ಹದಿನಾಲ್ಕು ಲೋಕಗ
ಳಡಗಿದ್ದುದು ಜಯಸಿರಿಯು ಸರ್ವರು
ಕೆಡೆದರಾ ದಶಶಿರನ ಚರಣದಿ ಸಕಲವರ್ಪಿಸುತ ।
ನಡೆದು ಖೇಚರ ಯಕ್ಷ ಕಿನ್ನರ
ಪೊಡವಿಪಾಲರ ಸುರರ ಸೋಲಿಸಿ
ಕೆಡಿಸುತವರಾ ಸುಂದರಿಯರಂ ಸೆಳೆದ ಮೋಹದಲಿ ||೫೦||

ಇಳೆಯು ನೊಂದಳು ಧರ್ಮವಡಗಲು
ಬಲಕೆ ಬೆದರುತ ಹರಿಯ ಚರಣದಿ
ಬಿಳಲು ದಶರಥ ತನುಜನಾಗುತ ಬರುವೆ ಶೀಘ್ರದಲಿ ।
ಇಳೆಯ ಭಯಮಂ ಬಿಡಿಸಿ ದನುಜರ
ತಲೆಯ ಚೆಂಡಾಡುವೆನು ಲೋಕದ
ಕಲೆಗಳೆತ್ತುವೆ ಮತ್ತೆ ತಾನೆಂದಭಯ ನೀಡಿದನು ||೫೧||

ಅತ್ತಯೋಧ್ಯಾಪುರದಿ ರಘುಕುಲ
ವೃತ್ತಮಣಿ ದಶರಥನು ಹರಿ ಸ
ರ್ವೋತ್ತಮನ ನೆನೆಯುತ್ತ ರಾಜ್ಯವನಾಳುತಿರುತಿಹನು ।
ಉತ್ತಮ ಸ್ತ್ರೀವೆರಸಿ ಧರ್ಮಾದಿ
ಸತ್ಯಕಾಮನು ರಾಜಋಷಿಯೆನಿ
ಸುತ್ತಲೆಸೆದನು ರಾಮಚಂದ್ರನ ಪಡೆಯುವಾತುರದಿ ॥೫೨॥

# ವಿಶ್ರಾಮ ೫

ಸೂ॥ ಪುತ್ರಕಾಮೇಷ್ಟಿಯಲಿ ನಾಲ್ವರು
ಪುತ್ರರಂ ಪಡೆಯುತ್ತ ನೃಪತಿ ಪ
ವಿತ್ರರೂಪಗೆ ಮಾಡಿದನು ಚೌಲೋಪನಯನಗಳ ॥

ಶ್ರೀವರನ ಕೃಪೆಗಳಿಸುತನುದಿನ
ದೇವ ದೇವನ ಚರಣಕಮಲದ
ಸೇವೆ ಜನತಾ ಸೇವೆಯೆಂದರಿಯುತ್ತ ದಶರಥನು ।
ಆವಗಂ ಪ್ರಜೆಗಳನು ಪಾಲಿಪ
ತೀವಿ ಸದ್ಗುಣದಿಂದ ಕೋಸಲ
ದೇವಿಯಾರಾಧನೆಯೆ ಜನತಾಸೇವೆಯೆಂದರಿದು ॥೧॥

ಸತ್ಯವಚನವೆ ತಾಯಿ ನಿತ್ಯಾ
ನಿತ್ಯಮತಿಯೇ ತಂದೆಯನುಜರು
ಸತ್ಯಧರ್ಮವು ದಯವೆ ಗೆಳೆಯನು ಶಾಂತಿ ಸತಿಯೆನಿಸೆ ।
ಉತ್ತಮಕ್ಷಮೆ ಸೂನು ಸೂರ್ಯಕು
ಲೋತ್ತಮನ ಗುಣವನಧಿ ನಿಲುಕದು
ಮತ್ತೆ ಶೇಷಾದ್ಯರಿಗೆ ಮಿಕ್ಕುಳಿದವರ ಪಾಡೇನು ? ॥೨॥

ಧರಣಿಪತಿಯರುವತ್ತು ಸಾವಿರ
ವರುಷ ರಾಜ್ಯವನಾಳ್ದು ಸರ್ವರ
ಪರಮ ಪ್ರೀತಿಯ ಪಡೆದು ತೃಪ್ತಿಯ ಪೊಂದಿರಲು–ಮನದಿ ।
ಜರೆಯು ಮೂಡಿರೆ ತನುಜರಿಲ್ಲದೆ
ಹರುಷ ತಗ್ಗಿತು–ನಿಲಲು ಸಂತತಿ
ನರಪ ಪೀಳಿಗೆಯುಳಿದುದಕಟೆನುತೊರಗಿದನು ಬಿಳ್ದು ॥೩॥

ಹಿಂದೆ ಮನುವಾಗಿರಲು ನಿಜತಪ
ದಿಂದೊಲಿಸೆ ಕರುಣದಲಿ ಜನಿಸುವೆ
ನೆಂದ ಸಿರಿಪತಿ, ನಮ್ಮ ಪೂರ್ವಜ ಭೂಪನನರಣ್ಯ ।
ಹಿಂದೆ ರಾವಣನಿಂದ ಪರಿಭವ
ಪೊಂದಿ ದಶರಥನಿಂದ ಸಿರಿಗೋ
ವಿಂದನುದಿಸುತ ಕೊಲುವನೆಂದೊರೆದ ನುಡಿ ಪುಸಿಯಾಯ್ತೆ ॥೪॥

ಕುಲವಿಘಾತುಕನಾದೆ ವರ ರಘು
ಕುಲದವಾನಲನಾದೆನೆನ್ನಿಂ
ನಿಲುವುದೀ ರವಿವಂಶ ಕೇಸರಿಪೀಠ ತೆರಪಾಯ್ತು ।
ನಳಿನನಾಭನ ಕರುಣೆ ಪಡೆಯದ
ಖಳನು–ಬದುಕಿನ್ನೇಕೆ ಧರ್ಮದ
ಕಳಶ ಮುರಿದುದು ಪಾಪಿಯುಕಟಾಯೆಂದು ಕೊರಗಿದನು ॥೫॥

ಅನಿತರಲಿ ಗುರುಮಂತ್ರಿ ಪರಿಜನ
ಜನಪನಿದಿರಲಿ ನಿಂದು ಮರುಗಲು
ಮುನಿ ವಸಿಷ್ಠನು ನೃಪನ ದುಃಖವ ತಿಳಿದು ನುಡಿಸಿದನು ।
ತನುಜರನು ನೀಪಡೆವೆ ಬಿಡು ಬಿಡು
ಮನದ ತಾಪವ, ಋಷ್ಯಶೃಂಗನ
ನನಘ ಕರೆಸುತ ಮಾಡು ಸುತಕಾಮೇಷ್ಟಿ ಯಾಗವನು ॥೬॥

ಪರಮ ಪಾವನ ಯಜ್ಞಮಿದು ಮುನಿ
ವರನ ಕೃಪೆಯಿಂ ಸಾಂಗವಾಗಲು
ಹರಿಯೊಲಿವ ಸುತರಾಗುವರು ನೀ ಮಾಡು ಯಾಗವನು ।
ತೊರೆದು ದುಃಖವ ಋಷ್ಯಶೃಂಗನ
ಕರೆಸು ಸಂಭಾರಗಳ ತರಿಸೆನೆ
ಭರದೊಳಧ್ವರ ಮಾಡೆ ಮನಮಾಡಿದನು ಭೂಪಾಲ ॥೭॥

ತ್ವರದಿ ಹರಿದೈದಿದರು ದೂತರು
ಧರಣಿಪಾಲಕ ರೋಮಪಾದನ
ಭರದಿ ಕಾಣಿಸಿಕೊಂಡು ಕಾಣಿಕೆಯಿತ್ತು ವಿನಯದಲಿ ।
ನರಪ ದಶರಥನಿತ್ತ ಪತ್ರವ
ಕರದೊಳಿತ್ತರೆ ಮುದದಿ ಮನ್ನಿಸಿ
ಕರೆದು ಕಳುಹಿದ ಋಷ್ಯಶೃಂಗನ ದಶರಥನ ಪುರಕೆ ॥೮॥

ಗುರುವಸಿಷ್ಠನ ನೇಮದಿಂದ
ಧ್ವರವ ನಡೆಸಿದ ವಿಭವದಿಂ ನೃಪ
ಧರಣಿ ಧನ ಕನಕಾದಿ ದಾನಗಳಿತ್ತು ವಿಪ್ರರಿಗೆ ।
ಕರು ಸಹಿತ ಗೋವ್ಗಳನು ಶತಸಾ
ವಿರದೊಳಿತ್ತನು ಭಕ್ತಿಯಲಿ ಸಿಂ
ಗರಿಸಿ ರತ್ನಾಭರಣದಿಂ ತಣಿಸಿದನು ಸರ್ವರನು ॥೯॥

ಪ್ರೇಮದಿಂದಾಹುತಿಯ ನೀಡ
ಲ್ಕಾ ಮಹಾಗ್ನಿಯೊಳೆದ್ದು ಬಂದನು
ಭೂಮಿಪನ ನೇಹಕ್ಕೆ ಮೆಚ್ಚುತ ದಿವ್ಯಪೂರುಷನು ।
ಆ ಮಹೀಶನ ಕರೆದು ಮನ್ನಿಸಿ
ತಾಮರಸ ಕರಗಳಲಿ ನೀಡಿದ
ಕಾಮಿತಾರ್ಥವನೀವ ಪಾಯಸಪಾತ್ರೆಯಂ ಮುದದಿ ॥೧೦॥

ಎಲೆ ಮಹೀಪತಿ ಸತಿಯರುಣಲಿದ
ನೊಲಿವುವೈ ಪುರುಷಾರ್ಥಗಳು ಮನ
ದಳಲ ತೊಡೆ ಸುತರುಗಳ ಪಡೆಯುವೆ ತೆಗೆದುಕೋಯೆಂದ ।
ನಲಿದು ಪಾತ್ರೆಯ ಕೊಂಡು ಸತಿಯರಿ
ಗೊಲಿದು ಪಾಯಸವಿತ್ತ ಮೂವರು
ಲಲನೆಯರು ಭುಜಿಸಿದರು ಪುತ್ರಾಪೇಕ್ಷೆಯಿಂ ಮುದದಿ ॥೧೧॥

ಧರಿಸಿದರು ಗರ್ಭವನು ಮೂವರು
ತರಣಿವಂಶದ ಕೀರ್ತಿ ಬೆಳಗಿಸೆ
ನರಪ ದಶರಥನೀಪ್ಸಿತಾರ್ಥವ ಪಡೆಯುವಾತುರದಿ ।
ದುರುಳ ಬಾಧೆಯ ಪರಿಹರಿಸೆ ರಘು
ವರನ ಬಸುರಲಿ ಧರಿಸಿದಳು ಕುಶಲೇ
ಶ್ವರಿಯು ಪದುಳದಿ ಲೋಕಕಲ್ಯಾಣವನು ಬಯಸುತಲಿ ॥೧೨॥

ಹರನು ನಾಲ್ಮೊಗ ಸಕಲ ಸುರಪಡೆ
ವೆರಸಿ ಲಕ್ಷ್ಮೀಪತಿಯ ಕಾಣಿಸಿ
ದುರುಳ ರಾವಣ ವಧೆಯ ಕಾರಣ ಮನುಜರೂಪಿನಲಿ ।
ಅರಸ ದಶರಥನಿಷ್ಟವೀಯಲು
ತರಣಿಕುಲದಲಿ ಜನ್ಮವೆತ್ತುವೆ
ಹರಿಯೆ ಕರುಣಾಮಯನೆ ವೈದೋರೆಂದು ತುತಿಸಿದನು ॥೧೩॥

ದೇವ ದೇವ ಜಗತ್ಪತಿಯೆ ಕರು
ಣಾವಲಂಬನ ಲೋಕಮೋಹ ಪ
ರಾವರೇಶನೆ ಮತ್ಸ್ಯಕೂರ್ಮ ವರಾಹ ನರಸಿಂಹ ।
ವಾಮನನೆ ಜಯಜಯತು ನಿಜ ಭ
ಕ್ತಾವಳಿಯ ಮನದಿಷ್ಟ ಕರುಣಿಸು
ಪಾವನನೆ ಸಲಹೆಂದು ತುತಿಸಿದರಂದು ಕೈಮುಗಿದು ॥೧೪॥

ಕೊಟ್ಟ ವರಗಳ ಸಲಿಸೆ ದಶರಥ
ಪಟ್ಟದರಸಿಯ ಬಸುರೊಳೊಗೆವೆನು
ಬಿಟ್ಟು ಕಳೆಯಿರಿ ಮನದ ದಗುಡವ ದುಷ್ಟ ಶಿಕ್ಷಣಕೆ ।
ಕಟ್ಟ ಹಿಡಿದುದು ಮೃತ್ಯು ದನುಜರ
ಕಟ್ಟಡವಿಯಲ್ಲಿಹರು ಕಪಿಗಳು
ತೊಟ್ಟುದೇಹವನಿದಿರು ನೋಡುತ್ತಿಹರು ಸಮಯವನು ॥೧೫॥

ಕೋಸಲೇಶ್ವರಿಯುದರ ಹೊಕ್ಕನು
ಶ್ರೀಶನಾನಂಧಾತಿಶಯ ಸುಖ
ಸೂಸಿದುವು ಸಂಪದವು ಲೋಕದಿ ಪಾಪವಡಗಿದುದು ।
ಮಾಸಿದುದು ದುರ್ನೀತಿ ಮುನಿಗಳು
ಪಾಸನೆಯ ಮಾಡಿದರು ಹೊಗಳುತ
ಭೂಸುರರು ಕೌಸಲ್ಯೆಯನು ಕೊಂಡಾಡಿದರು ನಲಿದು ॥೧೬॥

ದೇವದೇವನು ಜಗದಿ ಜನಿಸುವ
ಪಾವನದ ಸುಮುಹೂರ್ತ ಬರೆ ತಾ
ರಾವಳಿಗಳೊಡಗೂಡುತುಚ್ಚಸ್ಥಾನದಲ್ಲಿರಲು ।
ದೇವನವತಾರವನು ತಿಳಿಯುತ
ತೀವಿದುದು ಸಂತೋಷ ಲೋಕವ
ಕಾವ ಕರುಣಾವನಧಿ ಜನ್ಮ ಮುಹೂರ್ತ ಮೂಡಿದುದು ॥೧೭॥

ರಾಮಜನ್ಮ ಮುಹೂರ್ತವರಿಯುತ
ಭೂಮಿಯೊಳು ನಿರ್ಜೀವ ಜೀವಿಗ
ಳಾ ಮಹಾತ್ಮನ ದರ್ಶನಾತುರದಿಂದ ಹರ್ಷಿಸಲು ।
ಶ್ರೀಮದನುಪಮ ರೂಪ ಭಕ್ತ
ಪ್ರೇಮ ಜಗದಭಿರಾಮ ರಘುಕುಲ
ರಾಮನಂ ಜಗಹೊಗಳಿ ಹಾಡಿದುದಾ ಮುಹೂರ್ತದಲಿ ॥೧೮॥

ಸೊಗದ ಮಧುಮಾಸದಲಿ ಚೈತ್ರದ
ನಗುವ ಪಕ್ಷದ ನವಮಿ ದಿವಸದಿ
ಜಗವು ವಿಶ್ರಾಂತಿಯಲಿ ಸುಖದಿಂದಿರುವ ಸಮಯದಲಿ ।
ಮುಗುಳು ನಗುತಿರೆ ಕುಸುಮ ಶೀತೋ
ಷ್ಣಗಳು ಪೆರ್ಚದೆ ಸೊಂಪೆಸೆಯುತಿರ
ಲೊಗೆದ ರಘುಪತಿ ಹರುಷದಿಂದಭಿಜಿನ್ಮುಹೂರ್ತದಲಿ ॥೧೯॥

ಬೀಸಿದುದು ತಂಗಾಳಿ ಪರಿಮಳ
ಸೂಸಿದುದು ಸುರಸಾಧು ಋಷಿಮುನಿ
ತೋಷದಿಂದುತ್ಸಾಹವಡೆದರು ಹರಿಯ ಜನನದಲಿ ।
ಸೂಸಿ ಹರ್ಷವ ಕುಸುಮನಗುತಿರೆ
ಹಾಸಿದುವು ಗಿರಿಶಿಖರ ಮಣಿ ಸಂ
ತೋಷದಿಂ ನದಿನದವು ಹರಿದುವು ತುಂಬಿ ಸುಧೆಯಿಂದ ॥೨೦॥

ಮೊಳಗೆ ದುಂದುಭಿ ಭೇರಿ ಗಗನದಿ
ನಲಿದು ಸುರಪಡೆ ಸುಮವ ಸುರಿದುದು
ಸಲಿಸಿ ತಂತಮ ಸೇವೆ ಹರಿಪದಪದ್ಮದಲಿ ನಿಂದು ।
ನಳಿನನಾಭಗೆ ನಮಿಸಿ ತೆರಳಿದ
ರಿಳೆಯ ಭಾರವು ಮಾಸಿತೆನ್ನುತ
ತಳೆದು ಸಂತಸ ಸಕಲ ಸುಖಗಳ ಕರೆದರವರಿಳೆಗೆ ॥೨೧॥

ಜನಿಸಿದನು ಸುರಮೌನಿ ಸನ್ನುತ
ವನಜಮುಖಿ ಕೌಸಲ್ಯೆಯುದರದಿ
ತನಯನಾದನು ಮಂದಹಾಸವ ಬೀರಿ ವೈದೋರಿ ।
ಮುನಿಮನೋಹಾರಕನು ಸಿರಿವರ
ಜನಿಸಲದ್ಭುತ ರೂಪಗರೆಯುತ
ಲನಘನಂ ನೋಡುತ್ತ ಹಿಗ್ಗಿದಳಾಗ ಮನದಲಿ ॥೨೨॥

ರಾಮ ಜಗದಭಿರಾಮ ಮೇಘ
ಶ್ಯಾಮ ರಘುಕುಲಸೋಮ ಸುಂದರ
ಧಾಮ ನಯನಾರಾಮ ದೈತ್ಯವಿರಾಮ ನಿಸ್ಸೀಮ ।
ಭೂಮಿಜಾಪತಿರಾಮ ಭಕ್ತ
ಪ್ರೇಮ ದಶರಥರಾಮ ನತಜನ
ಕಾಮ ಜನಿಸಿದನಿಳೆಯ ಭಾರವಕಳೆಯೆ ನರನಾಗಿ ॥೨೩॥

ಜನಿಸಿದನು ನಿಜರೂಪದಲಿ ಮಾ
ನಿನಿಗೆ ತೋರಿದ ವಿಶ್ವರೂಪವ
ನನುಪಮ ಗುಣಾಂಬುನಿಧಿ ಕೊಟ್ಟನು ದಿವ್ಯದೃಷ್ಟಿಯನು ।
ಮುನಿಸುರರು ತಿಣುಕುವರು ನೋಡಲು
ವನಜನಾಭನ ಕೋಸಲೇಶ್ವರಿ
ಗನಘ ಸುಲಭದೊಳೊಲಿದು ಮೈದೋರಿದನು ತಾನಾಗಿ ॥೨೪॥

ನೋಡಿದಳು ಹರಿ ದಿವ್ಯರೂಪವ
ಮೂಡಿದುದು ಪುಳಕಾಶ್ರು ತನುವೀ
ಡಾಡಿದಳು ಪದಪದ್ಮದಲಿ ಮೈದೋರಿರಲು ತನಗೆ ।
ರೂಢಿಯೊಳು ಮಗುವಾದೆ ನಿನಗೀ
ಮೋಡಿಯೇತಕೆ ದೇವ ದನುಜವಿ
ಭಾಡ ನಿರ್ಗುಣ ಶ್ರುತಿಗಗೋಚರ ಮಹಿಮ ಶ್ರೀಧಾಮ ॥೨೫॥

ಲೋಕವೇ ನಿನ್ನುದರದೊಳಗಿರೆ
ಬೇಕೆನುತ ನಿಜಗರ್ಭದಲಿ ಬರ
ಲೇಕೆ ನಗರೇ ಸಾಧುಸಂತರು ತಿಳಿದು ನಿನ್ನಿರವ ।
ಸಾಕು ಭಕ್ತರಭೀಷ್ಟ ಸಲಿಸ
ಲ್ಕೀಕುಮಾರನ ರೂಪತಾಳುತ
ನೇಕ ರೂಪನೆ ಬಂದೆ ನೀ ಮೈದೋರಿದ್ದೆ ತಂದೆ ॥೨೬॥

ಹಿಂದೆ ಮನು ಶತರೂಪೆ ತಪದಲಿ
ಕಂದನಾಗೆಂದುದನು ತಿಳುಹುತ
ಲಂದು ಸರ್ವರ ಮನಕೆ ಮಾಯುವನೊಡ್ಡಿ ಕೋಸಲೆಗೆ ।
ಅಂದದಿಂ ನಿಜರೂಪ ತೋರುತೆ
ಮಂದಹಾಸದಿ ನಿಂದ ಸಿರಿಪತಿ
ಯಂದು ಜನಿಸಿದ ಬಗೆಯನರಿಯರು ಮಾಯದೊಳು ಸಿಲುಕಿ ||೨೭||

ಶ್ರೀಶನುಪಸಂಹರಿಸೆ ಶೋಭಾ
ರಾಶಿಯಂ ವರ ವಿಶ್ವರೂಪವ
ಭಾಸುರಾಂಗಿಯು ನಡೆದ ವಿಷಯುವ ಮರೆತು ಮೋಹದಲಿ ।
ಆ ಶಿಶುವ ಕೈಗೊಳಲು ಬಂದು ಸು
ವಾಸಿನೀ ಜನರಳುವ ಮಗುವ
ನ್ನಾಶಿಸುತ ನೋಡಿದರು ಹರುಷದೊಳೊಲಿದು ಹಾಡಿದರು ||೨೮||

ಕಂದನುದಿಸಿದನೆಂದು ತಿಳಿದಾ
ನಂದದಿಂ ದಶರಥನು ನಿಲದೈ
ತಂದು ತನಯನ ನೋಡಿ ರೋಮಾಂಚನದೊಳುರುಬುತಲಿ ।
ನಿಂದು ನೋಡಿದನೆವೆಯನಿಕ್ಕದೆ
ಸುಂದರಾಂಗವ ನಲಿದು ಮರೆಯುತ
ಲಂದು ದೇಹವ ಬಾಷ್ಪಪೂರಿತನಾಗಿ ಹಿಗ್ಗಿದನು ||೨೯||

ತಂದರುಪ್ಪಾರತಿಯ ಬೆಳಗಿದ
ರಿಂದು ಮುಖಿಯರು ಹಾಡಿಹೊಗಳಿದ
ರಂದುಮುತ್ತಿನ ಸೇಸೆ ತಳಿಯುತ ಹರಸಿದರು ಶಿಶುವ ।
ಮಂದಿಯಾಶೀರ್ವದಿಸೆ ಸಂತಸ
ದಿಂದ ಮಂಗಳ ವಾದ್ಯ ಮೊಳಗಿತು
ನಿಂದು ಮಂತ್ರಗಳೊರೆಯೆ ವಿಪ್ರರು ನೃಪತಿ ಹರ್ಷಿಸಿದ ||೩೦||

ಗುರು ವಸಿಷ್ಠನು ನೋಡಿ ಮುಗುವನು
ಹೆರಸಿ ನಾಂದಿಯನಿರಿಸಿ ಜಾತಕ
ಕರುಮುಮಂ ಮಾಡಿಸಿದ ಹೊಂಪುಳಿವಡೆಯುತಡಿಗಡಿಗೆ ।
ಧರಣಿಸುರರಿಂಗೆ ಕನಕರತ್ನಾ
ಭರಣವಿತ್ತನು ಗೋವು ಶತಸಾ
ವಿರವನಿತ್ತನು ವಸ್ತ್ರಮಣಿಗಣವಿತ್ತ. ಲೋಗರಿಗೆ ||೩೧||

ಸಾರಿಸುತ ವೀಥಿಗಳ ಮನೆಗಳ
ನೋರಣದಿ ಸಿಂಗರಿಸಿ ಬಳಿದರು
ಕಾರಣೆಯ ಪನ್ನೀರ ತಳಿದರು ಚಿತ್ರಗಳ ಬರೆದು ।
ತೋರಣವ ಕಟ್ಟಿದರು ಬಾವುಟ
ವೇರಿಸುತ ಗುಡಿಗಟ್ಟಿ ಪುರದಲಿ
ಸಾರಿದರು ರಘುವರನ ಜನ್ಮವನಾತುರದಿ ಜನರು ||೩೨||

ಅನಿತರಲಿ ಕೇಕಯಕುಮಾರಿಯು
ತನಯನಂ ಪ್ರಸವಿಸಿದಳೇನೆಂಬೆ
ಜನಪನಾನಂದಾಂಬುಧಿಯೊಳೀಸಾಡಿದನು ನಲಿದು ।
ವನಜನಯನೆ ಸುಮಿತ್ರೆಯಿರ್ವರು
ತನಯರಂ ಪಡೆಯಲ್ಕೆ ಪುರದೊಳು
ಜನರು ಹಿಗ್ಗಲು ಲೋಕ ನಸುನಗೆಯಿಂದ ಬೀಗಿದುದು ||೩೩||

ಜಗದಿ ಧರ್ಮವು ಸತ್ಯ ಸಿರಿಪತಿ
ಯೊಗೆಯೆ ಬದುಕಿತೆನುತ್ತ ಚಂದ್ರಮ
ನೊಗುವ ಹರ್ಷದಿ ತಂಗಿದನು ಶಾಂತಾತ್ಮ ತಾನಾಗಿ ।
ನಗುತ ಹರಿದೈತಂದ ಭಾಸ್ಕರ
ನೊಗೆದ ನಿಜಕುಲದಲ್ಲಿ ಹರಿಯೆಂ
ದೊಗುವ ಪ್ರೇಮದಿ ಜಗವ ಬೆಳಗಿಧ ಪರಮ ಹರುಷದಲಿ ||೩೪||

ಬಂದ ಸೂರ್ಯ ನಿಜಾನ್ವಯದಿ ಹರಿ
ಬಂದನೆಂಬಾತುರದ ಮನದಿಂ
ಬಂದ ಕರ್ತವ್ಯವನು ಮರೆತನು ತನ್ನ ಗತಿ ನಿಲಲು ।
ನಿಂದು ಪೊಂದಿ ಸಮಾಧಿ ಮೂವ
ತ್ತೊಂದು ದಿನಗಳ ಕಳೆದನರಿಯದೆ
ತಂದೆಯುದಯದಿ ಜಗದ ಭಾರವು ಹರಿಯೆ ಹರ್ಷಿಸಿದ ॥೩೫॥

ವನಜಮುಖಿ ಪಾರ್ವತಿಯೆ ಲಾಲಿಸು
ಮನುಜ ರೂಪದಿ ಪುರವ ಹೊಕ್ಕೆನು
ವಿನುತ ಕಾಕಭುಸಂಡಿ ಸಂಗದೊಳಾರು ತಿಳಿಯದೊಲು ।
ಮನದ ಪರಮಾನಂದ ಪ್ರೇಮದಿ
ಕುಣಿದು ಕುಸುಮದೊಲಾವು ಚರಿಸುತ
ಲಿನತನೂಜನ ಕಂಡೆವೆಂದನು ಚಂದ್ರಶೇಖರನು ॥೩೬॥

ಇಂತು ಮೂವತ್ತೊಂದು ದಿನಗಳು
ಪಿಂತೆ ತೆರಳಲ್ಕೊಂದು ದಿನದೊಲು
ಚಿಂತೆ ತೊರೆದರು ಹಗಲುರಾತ್ರಿಗಳರಿಯದೆಯೆ ಜನರು ।
ಅಂತರಾತುಮನೊಲಿದಿರಲು ವಿ
ಶ್ರಾಂತಿಯಲಿ ಸಾಕೇತನಗರವ
ನಂತ ಪುಣ್ಯೋತ್ಸವದಿ ಮೆರೆದುದು ಪರಮವೈಭವದಿ ॥೩೭॥

ಭೂಮಿಪತಿ ಗುರುವರನ ಕರೆಸುತ
ನಾಮಕರಣೋತ್ಸವವ ನಡೆಸಿದ
**ರಾಮ**ನೆಂಬಭಿಧಾನಮಾದುದು ಕೋಸಲಾತ್ಮಜಗೆ ।
ಕಾಮದಶ ಶತಕೋಟಿ ರೂಪ ನಿ
ರಾಮಯನು ಲೋಕಾಭಿರಾಮನು
ರಾಮನಾಮದಿ ಜಗವ ಬೆಳಗುವನೆಂದು ಹೊಗಳಿದನು ॥೩೮॥

ಭರತನೆಂಬಭಿಧಾನವಾದುದು
ತರುಣಿ ಕೈಕಾದೇವಿ ತನಯಗೆ
ವರಸುಮಿತ್ರಾತ್ಮಜರು ಲಕ್ಷ್ಮಣ ಮೇಣು ಶತ್ರುಘ್ನ ।
ಭರಿಸುವನು ಜಗವನ್ನು ಭರತನು
ಪರಮ ಲಕ್ಷಣಯುತನು ಲಕ್ಷ್ಮಣ
ನರಿ ಭಯಂಕರ ವೀರನೀ ಶತ್ರುಘ್ನ ಕೇಳೆಂದ ॥೩೯॥

ಎಳೆತನದ ನೇಹದಲಿ ಲಕ್ಷ್ಮಣ
ನೊಲಿಸಿಕೊಂಡನು ರಾಮಚಂದ್ರನ
ಗೆಳೆಯರಾದರು ಭರತ ಶತ್ರುಹರೊಲುಮೆಯಿಂ ಕೂಡಿ ।
ಕಲೆತು ಮೂವರು ಹಿರಿಯ ರಾಮನ
ನೊಲಿಸಿಕೊಂಡರು ಸೇವೆಮಾಡುತ
ಹಲವು ಪರಿಯಿಂದುಪಚರಿಸುವರು ಮನದ ಹರ್ಷದಲಿ ॥೪೦॥

ಪ್ರೇಮ ಮುಗ್ಧಳು ಕೋಸಲೇಶ್ವರಿ
ರಾಮನಿರ್ಗುಣನೆಂಬುದರಿಯದೆ
ಕಾಮಿಸುತ ನುಡಿಸುವಳು ಮುದದಲಿ ಪುತ್ರಮೋಹದಲಿ ।
ರಾಮನೇ ಸರ್ವಸ್ವ ಮೂವರು
ಭಾಮೆಯರು ಸಮ ಮಮತೆಯಿಂದಾ
ರಾಮಲಕ್ಷ್ಮಣ ಭರತ ಶತ್ರುಘ್ನರನು ನೋಡುವರು ॥೪೧॥

ಮೃದುನಗೆಯ ಹಾಸದಲಿ ಮಿನುಗುವ
ರದನ ಪಂಕ್ತಿಗಳೆಸವ ಕಂಗಳು
ಮದನ ಮುಖವಂ ಜರೆವಕಾಂತಿಯು ರಾಮಚಂದ್ರಮಗೆ ।
ಹೃದಯದೊಳು ಶ್ರೀವತ್ಸ ಭೃಗುಮುನಿ
ಪದದ ಲಾಂಛನ ಮಗುವಿನಂದದಿ
ಮುದದೊಳೀಸಾಡಿದನು ಸರ್ವರ ನಗಿಸಿ ನಗುತಿಹನು ॥೪೨॥

ಪುರಜನರ ಸುಕುಮಾರ ನಾಲ್ವರು
ಪರಮ ಸಂತಸಗೊಳಿಸಿ ಭಯ ಸಾ
ಗರವ ತೊಡೆದರು ಭಕ್ತಿ ಮುಕ್ತಿಗಳಿತ್ತು ಸಲಹಿದರು ।
ದರುಶನದಿ ದುರಿತಾದ್ರಿ ಕರಗಲು
ನಿರುತಮಾದುದು ಹರುಷ ಕೋಸಲೆ
ಯರಿಯದೆಯೆ ತೂಗುವಳು ಬಾಲಭ್ರಮೆಯ ಮನದಂದು ॥೪೩॥

ಕುವರಗಭ್ಯಂಜನವ ಮಾಡಿಸಿ
ವಿವಿಧ ರತ್ನಾಭರಣ ತೊಡಿಸುತ
ಲವನ ತೊಟ್ಟಿಲೊಳಿಟ್ಟು ತೂಗುತ ನಿದ್ರೆಗೊಳಿಸಿರಲು ।
ಅವಳು ಬೇಗದಿ ಹರಿಯ ಪೂಜಿಸೆ
ವಿವಿಧ ಭಕ್ಷ್ಯಾದಿಗಳ ಮಾಡಿರೆ
ಜವದಿ ತಿನ್ನುತಲಿರುವ ಮಗನಂ ಕಂಡಳಾ ಕುಶಲೆ ॥೪೪॥

ತೊಟ್ಟಿಲೊಳು ನಿದ್ರಿಸುವ ರಾಮನು
ತಟ್ಟೆಯನು ಕೊಂಡೊಯ್ದ ನೀ ಕಡೆ
ಮುಟ್ಟಿತೇನಿದು ಮಗನ ಭೂತ ಪಿಶಾಚ ಚೇಷ್ಟೆಗಳು ।
ತೊಟ್ಟು ತಾ ಹದಿನಾರು ವರ್ಷದ
ಜಟ್ಟಿಯೊಲು ಕಾಣಿಸಲು, ಭಯದೊಳು
ಕಟ್ಟಿ ಕೈಗಳಮುಗಿಯೆ, ನರಹರಿನಿಂದ ವ್ಯೆದೋರಿ ॥೪೫॥

ರೋಮ ರೋಮಕೆ ಕೋಟಿ ಜಗಗಳ
ನಾ ಮಹಾದೇವ ವಿಧಿ ರವಿಶಶಿ
ಭೂಮಿ ನದಿನದ ಸರಿಸ ಗಿರಿ ಗುಹೆ ಸಿಂಧು ಕಾನನವ ।
ಆ ಮಹಾತ್ಮನ ದೇಹದಲ್ಲಿ ಕಂ
ಡಾ ಮಹಿಳೆ ಭಯದಿಂದ ನಡುಗಲು
ರಾಮ ನಗುತಲಿ ಮಾಯವಾದನು ಮಾತೆಯಿದಿರಿಂದ ॥೪೬॥

ನಡುಗುತದ್ಭುತ ರೂಪಮಂ ಕಂ
ಡೊಡನೆ ಕರೆದರೆ ಕುಣಿದು ನಗುವನು
ಗುಡುಗಿನೊಲು ಹುಡುಕಿದರೆ ಸಿಗನಾ ರಾಮ ಮಾಯಾವಿ ।
ಸಡಗರದಿ ತೊಟ್ಟಿಲೊಳು ಮಲಗಿದ
ಕಡುಚೆಲುವ ನಿದ್ರಿಸುತ ಕೋಸಲೆ
ಸಿಡಿದುದೇನಿದು ಭೂತ ತನಯಂಗೆಂದು ಮರುಗಿದಳು ॥೪೭॥

ತೃಣವ ನೀವಾಳಿಸುತ ತಿಲಕವ
ಪಣೆಯೊಳಿರಿಸುತ ಹರಕೆಯರ್ಪಿಸಿ
ವನಜನಾಭಗೆ ಭರದಿ ರಕ್ಷೆಯ ಕಟ್ಟಿದಳು ಕರದಿ ।
ಕೊನೆಗೆ ಬಾಯ್ದೆರೆದಾಕಳಿಸಿ ನಿಜ
ಜನನಿಗದ್ಭುತ ತೋರ್ದ ಬಾಯೊಳು
ವನಜಮುಖಿಯಪ್ಪಿದಳು ತರಳನ ಮೋಹವಶದಿಂದ ॥೪೮॥

ಯೋಗ ತಪ ಸಾಧನಕೆ ಸಿಲುಕನು
ರಾಗರಂಜನೆ ಕರ್ಮಕೊಲಿಯನು
ಮಾಗಧರ ಹೊಗಳಿಕೆಗೆ ತೋರನು ತನ್ನ ಮಹಿಮೆಗಳ ।
ಬಾಗಿದನು ಕೋಸಲೆಗೆ ಹರಿ ಶಿಶು
ವಾಗಿ ನಲಿದನು ಜಗದುದರ ಹೆಂ
ಗೈಗಳಲಿ ದಿನದಿನಕೆ ಬೆಳೆದನು ಕಣ್ಗೆ ಬೆಳಕಾಗಿ ॥೪೯॥

ಶ್ರುತಿಗಗೋಚರ ನಿತ್ಯ ತೃಪ್ತನು
ಮತಿಗೆ ವಾಣಿಗೆ ಸಿಗನು ಲೋಕದ
ಪಿತನು–ದಶರಥನೃಪನ ಪಿತನೆಂದೊಲಿದ ಮಾಯೆಯಲಿ ।
ನುತಗುಣರು ಪುರಜನರ ಹೃದಯವ
ಮಥಿಸಿ ಭಕ್ತಿಯ ಸೂರೆಗೊಂಡರು
ಸತತ ಸಜ್ಜನಲೋಲರಾದರು ಸುಲಭರೊಲಿಯುತ್ತ ॥೫೦॥

ಗುರುವಸಿಷ್ಠನ ಕರೆಸಿ ಚೂಡಾ
ಕರಣ ಸಂಸ್ಕಾರಗಳ ಸುತರಿಗೆ
ವಿರಚಿಸಿದ ಸಂತಸದಿ ದಶರಥ ವಿಪ್ರರನು ತಣಿಸಿ |
ಅರಸನಂಗಳದಲ್ಲಿ ನಲಿಯುತ
ಪರಮ ಹರುಷವನೀವ ಸಹಜ
ವೆರಸಿ ವಿವಿಧಕ್ರೀಡೆಯಿಂ ಶ್ರೀರಾಮನಲಿಯುವನು ||೫೧||

ಆರನೆಯ ಬಯದಲ್ಲಿ ದಶರಥ
ಭೂರಿವಿಭವದೊಳುಪನಯನ ಸಂ
ಸ್ಕಾರಮಂ ಮಾಡಿಸಿದ ಪದುಳದಿ ತನ್ನ ಕುವರರಿಗೆ |
ಸಾರಿದರು ಮುನ್ಯಾಶ್ರಮಕೆ ಸುಕು
ಮಾರ ನಾಲ್ವರು ಪಡೆಯೆ ವಿದ್ಯಾ
ವಾರಿಧಿಯ ಗುರುಮುಖದಿ-ಕಲಿತರು ಸಕಲಶಾಸ್ತ್ರಗಳ ||೫೨||

ಆವನುಸುರಲಿ ವೇದ ಜನಿಸಿತೊ
ಆವ ದೇವನ ನುಡಿಯೆ ನಿಗಮವೊ
ಆವ ದೇವನ ಗುಣವ ನಿತ್ಯ ಶ್ರುತಿಯು ಹೊಗಳುವುದೊ |
ಆ ವಿಭುವು ಗುರುಮುಖದೊಳರಿಯುತ
ಲೀ ವಲಯದಲಿ ಲೀಲೆ ತೋರ್ಪನು
ದೇವದೇವೋತ್ತಮನ ಚಿತ್ತವನರಿವರಾರೆಂದ ||೫೩||

ಗುರುವು ನಡೆಯಲು ಮುಂದೆ ನಾಲ್ವರು
ವರ ಧನುರ್ಬಾಣಗಳ ಪಿಡಿಯುತ
ಹರುಷದಿಂ ಹಿಂಬಾಲಿಸುತ ನಡೆಯುತಿರೆ ವೀಧಿಯಲಿ |
ಪುರದ ಸಚರಾಚರವು ಕಂಡುದು
ಪರಮ ಭಕ್ತಿಯೊಳೆರಗಿ ನೆನೆದುದು
ಭರದಿ ಸಿರಿರಘುರಾಮಚಂದ್ರನ ಮನದಣಿಯೆ ನೋಡಿ ||೫೪||

# ವಿಶ್ರಾಮ ೬

ಸೂ॥ ನಡೆದು ವಿಶ್ವಾಮಿತ್ರನೆಡೆಯೊಳು
ಕೆಡಹಿ ರಕ್ಕಸರನ್ನು ಮುನಿಸತಿ
ಯೊಡಲ ಕಾಯ್ದು ವಿದೇಹ ನಗರಕೆ ಬಂದನಾ ರಾಮ ॥

ಸಕಲ ಶಸ್ತ್ರಾಸ್ತ್ರಗಳ ಕಲಿತನು
ಶಕುತಿ ನರ್ತಿಸೆ ಭುಜಗಳಲಿ ಸು
ವ್ಯಕುತನಾದನು ಸೋದರರ್ವೆರಸುತ್ತ ರಘುವರನು ।
ಅಖಿಳ ಲೋಕದೊಳೇಕ ವೀರ
ಪ್ರಖರನೆನಿಸಿದ ಮಗನ ನೋಡುತ
ಸುಖದೊಳಿರ್ದನು ಜನಪ ಶ್ರೀಹರಿ ದರ್ಶನವ ಕೊಂಡು ॥೧॥

ಒಂದು ದಿನ ಸಭೆಯೊಳಿರೆ ನರಪತಿ
ಬಂದ ವಿಶ್ವಾಮಿತ್ರ – ಹರಿದೈ
ತಂದು ದಶರಥನರ್ಘ್ಯಪಾದ್ಯಗಳಿತ್ತು ಸತ್ಕರಿಸಿ ।
ಅಂದದಿಂ ಕುಳ್ಳಿರಿಸಿ ಪೀಠದಿ
ಬಂದ ಪದನೇನೆಂದು ಕೇಳುತ
ಲಂದು ಕುಶಲ ಪ್ರಶ್ನೆಗೈದನು ಭೂರಮಣ ಮುನಿಯ ॥೨॥

ಎರಗಿ ಪದಪದ್ಮದಲಿ ತನಯರ
ಕರೆಸಿ ಕೆಡಹಿದ ಮುನಿಯ ಚರಣದಿ
ಪರಮ ಪಾವನನಾದೆ ಋಷಿವರ ನಿನ್ನದರ್ಶನದಿ ।
ಕರುಣಿಸಿದೆ ಪಾಮರನ–ಪದನವ
ನೊರೆಯಲಾಣತಿ ವಹಿಸಿ ಮಾಡುವೆ
ನೆರಡನಾಡೆನು ಕಾರ್ಯವೇನೆಂದವನಿಪತಿ ನುಡಿದ ॥೩॥

ತುಷ್ಟಿವಡೆದೆನು ನಿನ್ನ ಮಾತಿಂ
ಗೆಷ್ಟು ಹೊಗಳಲಿ ನಿನ್ನ ಗುಣಗಳ
ನೆಷ್ಟು ನೆನೆಯಲಿ ಸೂರ್ಯಕುಲಜರ ಸತ್ಯಧರ್ಮಗಳ |
ಎಷ್ಟು ಬಣ್ಣಿಸಲಾನು ನರಪತಿ
ನಿಷ್ಠೆಯಂ ಪಾಲಿಸುವೆ ನಿನಗಿ
ನ್ನೆಷ್ಟು ಕರುಣೆಯೊ ನಿನ್ನ ಜನಗಳಲೆಂದನಾ ಮುನಿಪ ||೪||

ಯಾಗ ಕೈಕೊಂಡಿಹೆನು ಮುನಿಗಳ
ನೀಗ ನೆರೆಸಿಹೆ ವನದೊಳಧ್ವರ
ಕಾಗಿ ಸಂಭಾರಗಳು ಸಿದ್ಧಮಿರಲ್ಕೆ ರಕ್ಕಸರು |
ಯೋಗಿಗಳ ಸವರುತ್ತ ರಕ್ತದಿ
ತೀಗಿ ವಿಘ್ನವ ಗೆಯ್ಯುತಿಹರಾ
ಯಾಗ ವೈರಿಗಳನ್ನು ಸವರಲು ಕಳುಹು ರಾಘವನ ||೫||

ಎನಲು ಕೇಳಿ ನೃಪಾಲ ಭಯದಿಂ
ದನುಜರಾರ್ಭಟೆ ತಡೆಯೆ ರಾಮನ
ಮುನಿಯು ಕೇಳುವ ಬಗೆಯನರಿಯದೆ ನೊಂದ ಮರುಗುತಲಿ |
ಅನಿತರಲಿ ಗುರುನೆರೆದು ರಾಮನ
ಘನತೆಯನು ವಿವರಿಸಲು ಭೂಪತಿ
ಮನದ ಸಂಶಯವೊರೆಸಿ ವಿಶ್ವಾಮಿತ್ರಗೊಪ್ಪಿಸಿದ ||೬||

ಒಪ್ಪಿಸಿದೆ ಬಾಲಕರ ನಿನ್ನಡಿ
ಗೊಪ್ಪಿಸಿದೆ ಸುತರಾಗುಹೋಗನು
ಮುಪ್ಪಿನಲಿ ನಾಂ ಪಡೆದ ಮಕ್ಕಳ ಯಾಗರಕ್ಷಣೆಗೆ |
ತಪ್ಪದಿರು ಕಣ್ಣಿಟ್ಟು ಕಾವುದು
ಬೊಪ್ಪ ನೀ ತರಳರಿಗೆ ಬಾಲ ಕ
ರೊಪ್ಪಿದರು ಮುನಿಸಂಗ ಪಾಲಿಸು ಸುಖದಿ ನೀನೆಂದ ||೭||

ಅದನರಿತು ಲಕ್ಷ್ಮಣನು ರಾಮನ
ಪದಕೆರಗಿ ಮುನಿಯಾಗ ರಕ್ಷಣ
ಕೊದಗೆ ನಡೆದನು ರಾಮಸೌಮಿತ್ರಿಯರ ನೆಳಲಿನಲಿ ।
ಪದೆದು ಮುನಿಪತಿ ನಡೆದ ನೋಡುತ
ವಿದಿತವೇದ್ಯನ ಮಹಿಮೆ ನೆನೆಯುತ
ಸದಯ ಹೃದಯನ ಲೀಲೆ ಕೊಂಡಾಡುತ್ತ ಹರಿತಂದ ॥೮॥

ಅರುಣಲೋಚನನುಟ್ಟು ಪೀತಾಂ
ಬರವ ಹೊನ್ನಾಯುಗವ ಪಿಡಿಯುತ
ಕರದಿ, ಬತ್ತಳಿಕೆಯನು ಬೆನ್ನಲಿ ಬಿಗಿದು ನಸುನಗುತ ।
ಪರಮ ಸುಂದರ ರೂಪ ಲಕ್ಷ್ಮಣ
ವೆರಸಿ ವರ್ಣಿಸಿ ವನದ ಬೆಡಗನು
ಕರದಿಕರವಿರಿಸುತ್ತ ವನದಲಿ ನಡೆದ ಲೀಲೆಯಲಿ ॥೯॥

ಒರ್ವ ಮೇಘಶ್ಯಾಮ ಸುಂದರ
ನೊರ್ವ ಸುಂದರ ಗೌರವರ್ಣನು
ಸರ್ವಲೋಕ ಶರಣ್ಯ ಮಹಿಮಾರ್ಣವನು ರಘುರಾಮ ।
ಉರ್ವರೆಯ ರಕ್ಕಸರ ಸವರುತ
ಗರ್ವ ಮುರಿಯಲು ಮನುಜರೂಪವ
ನುರ್ವಿಯೊಳು ತಾಳುತ್ತ ಬಂದಿಹನೆಂದು ಮುನಿ ನಲಿದ ॥೧೦॥

ತರಳರನು ನುಡಿಸುತ್ತ ವಿಪಿನದ
ಪರಿಯ ಪೇಳಿ ವಿನೋದ ಮಾತುಗ
ಳೊರೆಯುತಾ ಮುನಿ ನಡೆಯೆ ಬಂದಳು ದುರುಳೆ ತಾಟಕಿಯು ।
ನರರ ವಾಸನೆಯರಿತು ಘರ್ಜಿಸೆ
ಮೊರೆದು, ಕಂಟಕಿಯನ್ನು ಕೊಲ್ಲೆನೆ
ಗುರುವು, ಬಾಣದಿ ಕೊಂದು ಮೋಕ್ಷವನಿತ್ತನಾ ರಾಮ ॥೧೧॥

ಋಷಿಯು ಕಲಿಸೆ ಬಲಾತಿಬಲಗಳ
ಹಸಿವು ತೃಷೆಗಳ ನೊಗೆವ ಮಂತ್ರವ
ನೆಸೆದರಾ ಸೋದರರು ತೇಜೋರಾಶಿಯಿಂದಾಗ ।
ಅಸಮ ಶಸ್ತ್ರಾಸ್ತ್ರಗಳ ಕಲಿಸಿದ
ನಸದೃಶಾತ್ಮರಿಗವನು ಮಾರ್ಗಾ
ಯಸವ ಕಳೆಯುತ ಪೊಕ್ಕನಾಶ್ರಮ ವರವ ಮುನಿಪತಿಯು ॥೧೨॥

ಪರಮ ಪುಣ್ಯೋದಯವು ರಾಮನ
ಬರವು, ಕರುಣಾರ್ಣವನು ಕೃಪೆಯಲಿ
ಸುರಿಸಿದನು ಮಹಿಮಾತಿಶಯಗಳ ಬರುತಲಾಶ್ರಮಕೆ ।
ಕರಗುವನು ಭಕ್ತರಿಗೆ ಸಿರಿಪತಿ
ನೆರೆಯುವನು ಕರೆದಲ್ಲಿ ಕೊಟ್ಟುದ
ಕರದಿಕೊಳ್ಳುತಲಾಕ್ಷಣದಿ ಭುಂಜಿಸುವನೊಲಿಯುತ್ತ ॥೧೩॥

ಮಾಡಿ ಯಜ್ಞವ ಬಿಟ್ಟು ಭಯವನು
ನೋಡುವೆನು ನಾನಿಂದು ಬರಲ
ಕ್ಕಾಡಿಸುವೆ ರಾಕ್ಷಸರು, ವಿಘ್ನವನೊಡ್ಡಲಧ್ವರಕೆ ।
ಓಡಿಸುವೆ ಯಮನಾಲಯಕೆ ನೀ
ವ್ಮಾಡಿ ನಿರ್ಮಲ ಚಿತ್ತದಿಂದೆನೆ
ಕೂಡಿದುದು ಋಷಿನಿಕರವಧ್ವರ ದೀಕ್ಷೆದಾಳುತ್ತ ॥೧೪॥

ಬಂದನಾ ಮಾರೀಚ ಹರಿದೈ
ತಂದನಾಗ ಸುಬಾಹು ಗಗನದೊ
ಳಂದು ನೆರೆದರು ರಕ್ಕಸರ ಪಡೆವೆರಸಿ ಘರ್ಜಿಸುತ ।
ತಂದು ರಕುತವ ಸುರಿಯೆ ರಘುವರ
ನಂದಗೆಡಿಸಿದನವರನೆಚ್ಚನು
ಕೊಂದು ಬಿಸುಟ ಸುಬಾಹು ದುರುಳನ ಸೀಳಿ ಬಾಣದಲಿ ॥೧೫॥

ಕರುಣದಲಿ ಮಾರೀಚನನ ಕೊಲ್ಲದೆ
ಶರಧಿಯಲಿ ಮುಳುಗಿಸಿದ ದನುಜರ
ಮುರಿದು ಕೆಡಹಲು ಯಜ್ಞ ನಡೆದುದು ವಿಘ್ನವಿಲ್ಲದೆಯೆ ।
ಹರಸಿದರು ಹೊಗಳಿದರು ರಾಮನ-
ಹರಸಿದರು ಲಕ್ಷ್ಮಣನ ಮುನಿಗಳು
ಹರಿಯ ದರ್ಶನದಿಂದ ನಲಿಯುತ ಮನದಿ ಹಿಗ್ಗಿದರು ॥೧೬॥

ನಗುತ ವಿಶ್ವಾಮಿತ್ರ ಹರಸಿದ
ರಘುವರನ ಲಕ್ಷ್ಮಣನ ಮಿಥಿಲಾ
ನಗರ ಪಯಣವನೊರೆದು ಮುನ್ನಿನ್ನೊಂದು ದೃಶ್ಯವನು ।
ಸೊಗಯಿಸುವೆ ಸೀತಾ ವಿವಾಹಕೆ
ಜಗದೊಳತಿಶಯ ಧನುಶಯಾಗವ
ನಘಹರಗೆ ತೋರಿಸುವೆ ನಡೆನಡೆಯೆಂದನಾ ಘುನಿಪ ॥೧೭॥

ನಡೆದು ಪಯಣದ ಮೇಲೆ ಪಯಣದೊ
ಳಡವಿಯಲಿ ನಿರ್ಮಾನುಷಾಶ್ರಮ
ವಡಗಿರಲು ತಾ ಕಾಣುತಾಶ್ಚರ್ಯದಲಿ ಕೇಳಿದರೆ ।
ಕೆಡೆದ ನಾರಿಯ ಶಿಲೆಯ ರೂಪವ
ಕಡಲಶಯನಗೆ ತೋರಿ ಗೌತಮ
ರಡವಿಯಿದು ಶಾಪದಲಿ ನಿರ್ಜನವಾಯ್ತು ಕೇಳೆಂದ ॥೧೮॥

ಕೇಳಹಲ್ಯಾ ದೇವಿ ಶಕ್ರನ
ಜಾಲದಲಿ ಸಿಲ್ಕುತ್ತ ದುರಿತ
ವ್ಯಾಳ ಬಂಧಿಸೆ ಪತಿಯ ಶಾಪದೊಳಿಹಳು ಶಿಲೆಯಾಗಿ ।
ಏಳು ನಿನ್ನೀ ಪಾದ ಸರಸಿಜ
ಧೂಳಿ ಕರುಣಿಸಿ ಸತಿಯನೆಬ್ಬಿಸು
ಶೀಲವಂತನೆ ವನವ ಪಾವನಮಾಡು ನೀನೆಂದ ॥೧೯॥

ನೊಂದನದ ಕೇಳುತ್ತ ತಳುವದೆ
ಬಂದು ಸೋಕಲು ಪದದಿ ಕಲ್ಲನು
ನಿಂದಳಾ ಸತಿ ಮನುಜರೂಪದಿ ರಾಮನಂ ನೆನೆದು |
ಬಂದ ಶಾಪವ ಪರಿಹರಿಸಲೈ
ತಂದರಾಮನ ವನಜ ಚರಣ
ದ್ವಂದ್ವದಲಿ ಹೊರಳಿದಳು ಗೌತಮನರಸಿ ಭಕ್ತಿಯಲಿ ||೨೦||

ಸುರಿವ ದೃಗುಜಲದಿಂದ ರಾಮನ
ಚರಣದೊಳೆಯುತ ಮುಖ ಸರೋಜವ
ಭರದೊಳರ್ಪಿಸಿ ಪೂಜಿಸಿದಳಾದೇವಿ ಭಕ್ತಿಯಲಿ |
ಸೆರೆಬಿಗಿದು ಬರುತಿರಲು ನುಡಿಗಳ
ನರಿಯದೆಯೆ ನುತಿಸಲ್ಕೆ ರಘುಪತಿ
ಕರುಣೆಯಂ ನೆನೆನೆನೆದು ಮೈಚಾಚಿದಳು ಪುಳಕದಲಿ ||೨೧||

ಪತಿತ ಪಾವನ ಚರಣಕಮಲ,
ಕ್ಷಿತಿಯ ಮೂರಡಿಯಳೆದ ಪದವಿದು
ನುತೆ ಸುರಾಪಗೆಯೊಗೆದ ಪಾವನ ಚರಣ ಭಯಹರಣ |
ಸತತ ಭಕ್ತರ ಕಾವ ಕರುಣಾ
ಯತನ-ಪಾಪಿಯ ಕರೆಯ ಕೇಳುತ
ಲತಿಹಿತದೊಳೈತಂದೆ ಸಲಹಿದೆ ಚರಣಧೂಳಿಯಲಿ ||೨೨||

ಪಡೆದು ಪತಿಶಾಪವನು ನಿನ್ನೀ
ಕಡು ಚೆಲುವ ನೋಡಿದೆನು ಶಂಕರ
ನೆಡಬಿಡದೆ ಜಾನಿಸುವ ರಘುವರನಾಮದಿರವರಿತು |
ಒಡೆದು ಬರೆ ಸುರಗಂಗೆ ಚರಣದಿ
ಮೃಡನು ಹರುಷದಿ ಶಿರದೊಳಾಂತನು
ನಡೆದು ಬರುತಲಿ ಪದವ ಸೋಕಿಸಿ ಶಾಪ ನೀಗಿಸಿದೆ ||೨೩||

ಇಂತು ಪರಿಪರಿಯಿಂದ ನುತಿಸುತ
ನಂತ ಗುಣಗಳ ನೆನೆವುತಿರಲ
ತ್ಯಂತ ಹರುಷದಿ ಮುನಿಪ ಗೌತಮ ಬಂದನಾತುರದಿ |
ಕಂತುಪಿತನಂಘ್ರಿಗಳಿಗೆರಗುತ
ಚಿಂತೆಯಂ ತೊರೆಯುತ್ತ ರಾಮನ
ನಂತರಂಗದಿ ಜಾನಿಸುತ ಸರಿದನು ವನಕೆ ಸತಿವೆರಸಿ ||೨೪||

ಮುಂದೆ ಪಯಣದ ಮೇಲೆ ಪಯಣದಿ
ಬಂದು ಗಂಗಾತೀರ ಸೇರ
ಲ್ಕಂದು ಮುನಿವರ ಗಂಗೆ ಧರೆಗೈತಂದ ಚರಿತೆಗಳ |
ಅಂದದಿಂ ದೊರೆಯಲ್ಕೆ ಮೂವರು
ಮಿಂದು ನುತಿಸಿದರೊಲಿದು ನಡೆದರು
ಮುಂದೆ ಬಹುದೃಶ್ಯಗಳ ನೋಡುತ ನಾಡುಗಳ ದಾಟೆ ||೨೫||

ಅನುಜ ಸಹಿತ ವಿದೇಹನಗರವ
ನನಘ ಕಾಣುತವುದರ ಸೊಗದಿಂ
ಮನಕೆ ಹಿತಮಾಗಲ್ಕೆ ಪುರರಮ್ಯತೆಯ ಹೊಗಳಿದನು |
ವನ ಸರೋವರ ಕೂಪವಾಪೀ
ವನದಿ ರಂಜಿಸೆ ನಗರ ಮೆರೆದುದು
ಘನತರದ ಸೌಧಗಳು ಮಣಿಮಯ ಕಳಶಗಳು ಹೊಳೆಯೆ ||೨೬||

ಬಡ ಜನರ ಸುಳಿವಿಲ್ಲ ಭಿಕ್ಷದ
ಗೊಡವೆ ಮೊದಲಲ್ಲಿಲ್ಲ ಸರ್ವರು
ಬಡವರಾಧಾರಿಗಳು ಸತ್ವರು ಸರಳ ಸುಹೃದಯರು |
ಪೃಡಪತಿಯ ಪದಭಕ್ತಿ ನಿರತರು
ಬಿಡರು ಸತ್ಯವ ಧರ್ಮಕರ್ಮವ
ನೆಡಬಿಡದೆ ಪಾಲಿಪರು ಮಿಥಿಲಾಪುರದ ಮಾನವರು ||೨೭||

ಜನಕ ಭೂಪತಿ ರಾಜಋಷಿವರ
ನೆನಿಸಿ ಸುತರೊಲು ಪಾಲಿಸುವ ಧಾ
ರುಣಿಯ ಧರ್ಮದಿ ಸುಜ್ಞ ಸಚಿವ ಸಹಾಯಮಿರಲೊಲಿದು ।
ಜನಕನಾ ಪುರದೆಡೆಗೆ ಬರುತಲಿ
ಮನಕೆ ಸಂತಸಮೂಡೆ ಮೂವರು
ಮನೆಯ ಮಾಡಿದರಲ್ಲಿ ನಿರ್ಮಲ ನೆಲೆಯ ನೋಡುತಲಿ ||೨೮||

ಬರಲು ವಿಶ್ವಾಮಿತ್ರ ಮಿಥಿಲೆಗೆ
ಸರಿದು ದೂತರು ಪೇಳೆ ನೃಪನಾ
ತುರದಿ ಬಂದನು ತನುವ ಚಾಚಿವ ಮುನಿಯ ಪದಗಳಲಿ ।
ಚರಣಯುಗಳವ ತೊಳೆದು ಮುನಿಪತಿ
ಬರವು ಸಿರಿಪತಿ ಸುಳಿದವೊಲು ನೀ
ಕರುಣವಲಿ ಪಾಮರನ ಧನ್ಯನಗೈದೆ ನೋಡೆಂದ ||೨೯||

ಸ್ನಾನ ಮೌನ ಸಮಾಧಿ ಜಪತಪ
ಜ್ಞಾನ ಶಮ ದಮ ಯಜ್ಞ ಯಾಗಗ
ಳೂನವಿಲ್ಲದೆ ಸಾಗುವುವೆ ಮುನಿ ಕುಶಲವೇ ನಿನಗೆ ?।
ಮೌನಿಪತಿ ನೀ ಬಂದನುಗ್ರಹ
ಸಾನುರಾಗದಿ ಮಾಡಿದೈ. ನಿನ
ಗೇನು ಕರುಣೆಯೊ ನಿನ್ನ ಶಿಷ್ಯರೊಳೆಂದನಾ ಜನಕ ||೩೦||

ನಗುತ ವಿಶ್ವಾಮಿತ್ರ ಮುನಿಪತಿ
ತೆಗೆದು ಭೂಪನ ನೊಸಲನೆತ್ತುತ
ಲೊಗುವ ಹರುಷದಿ ಮನ್ನಿಸುತ ಹೊಗಳಿದನು ನೃಪನ ।
ನಿಗಮ ಧರ್ಮವನನುಸರಿಸಿ ಮೂ
ಜಗದ ಪುಣ್ಯವ ಸೂರೆಗೊಂಡಿಹೆ
ಸುಗುಣ ಸಾಗರ ಜನಕ ನಿನ್ನ ಸಮಾನರಿನ್ನಾರು ? ||೩೧||

ಅನಿತರಲಿ ರುಘುರಾಮ ಲಕ್ಷ್ಮಣ
ರನುವಿನಿಂದೊಳಹೊಕ್ಕು ನಮಿಸಲು
ಮುನಿಪದದಿ ಪಿಡಿದೆತ್ತಿ ಹರಸುತ ಕೂರಿಸಿದನವರ ।
ಜನಪನಾ ಬಾಲಕರ ನೋಡುತ
ಕಣ್ಣುಗಳೆವೆಯಾಡಿಸದೆ ಮರೆತನು
ತನುವ ತೇಜೋರಾಶಿ ಪಸರಿಸಲಲ್ಲಿ ಹೊಳೆ ಹೊಳೆದು ॥೩೨॥

ಅದನು ನೋಡಿ ವಿದೇಹ ಮೋಹದ
ಮುದದೊಳನಘ ವಿದೇಹನಾದನು
ವಿದಿತಗೊಳಿಸಿದ ತನ್ನ ನಾಮದ ಬಲುಮೆಯನ್ನಾಗ ।
ಚದುರಮತಿ ಪೇಳಾವ ಸತ್ಕುಲ
ವಿದಿತಮಾಗಿ ಪವಿತ್ರವೆನಿಸಿದು
ದುದಿಸಲೀ ವರಕುವರರಿರ್ವರು ಬೇಗ ನುಡಿಯೆಂದ ॥೩೩॥

ಆವ ಮುನಿಕುಲದವರು ಮೇಣಿ
ನ್ನಾವ ನೃಪಕುಲ ಜಾತಲಿವರಿ
ನ್ನಾವ ದೇವಾಂಶದಲಿ ಸಂಜನಿಸಿದರು ಧರೆಯಲ್ಲಿ ? ।
ಆವನಂ ವಿಧಿ–ಶಿವರು ನುತಿಪರೊ
ಆವನಂ ವೇದಗಳು ಕಾಣವೊ
ಆ ವನಧಿಶಯನನಿವ ನಿಜ ನೋಡೆಂದನಾ ಜನಪ ॥೩೪॥

ಮೆರೆವ ಕೋಸಲದೊಡೆಯ ದಶರಥ
ನರಪ ಸುಕುಮಾರಕರು ನಮ್ಮ
ಧ್ವರದ ರಕ್ಷಣೆಗೆಂದು ಬಂದರು ಕೊಂದರರಿಬಲವ ।
ಹಿರಿಯ ರಾಮನು ಕಿರಿಯ ಲಕ್ಷ್ಮಣ,
ಪೊರೆದು ಯಾಗವ ಸಾಂಗಗೊಳಿಸಿದ
ಪರಮ ಕರುಣಾವನಧಿಯಿತನು ರಾಮಚಂದ್ರಮನು ॥೩೫॥

ನೋಡಿ ದಣಿಯನು ಜನಪ ಕೀರ್ತಿಯ
ಹಾಡಿ ದಣಿಯನು ಹರಿಯ ಗುಣ ಕೊಂ
ಡಾಡಿ ದಣಿಯನು ಕೇಳಿ ದಣಿಯನು ನಾಮಮಹಿಮೆಗಳ ।
ಮೂಡಿದುತ್ಸಹದಿಂದ ತನುವೀ
ಡಾಡಿ ನಮಿಸಿದ ಮನದಿ ನುತಿಸಿದ
ಬೇಡಿದನು ಕರುಣೆಯನು ಬಂದಿರೆ ನಡೆದು ಕೃಪೆಯಿಂದ ॥೩೬॥

ಸರುವರನು ಮನ್ನಿಸುತ ಮುನಿವರ
ಚರಣಗಳಿಗೆರಗುತ್ತಲೊಯ್ದನು
ಸರುವರನು ನಿಜಗೃಹಕೆ ಮುದದಲಿ ಜನಕ ಭೂಪಾಲ ।
ಸಿರಿಯಿರುವ ತಾಣವನು ಸೇರಿದ
ನರಸಿ ಹೊಕ್ಕನು ರಾಮಚಂದ್ರನು
ನರಪತಿಯ ಹೊಗಳಿದನು ಮಾನಸಪೂಜೆಯಿಂ ತಣಿದು ॥೩೭॥

## ವಿಶ್ರಾಮ ೭

ಸೊ॥ ಜನಕ ನಗರವ ನೋಡಿ ಮರುದಿನ
ಜನಕನುಪವನದಲ್ಲಿ ಜಾನಕಿ
ಯನು ರಘೂತ್ತಮ ಕಂಡು ಮನದಲಿ ವರಿಸಿದನು ನಲಿದು ॥

ಅನುಜ ಸಹಿತಾ ರಾಮ ನಮಿಸಿದ
ಮುನಿಯ ಮಿಥಿಲಾಪುರವ ನೋಡಲು
ವಿನಯದಿಂದಾಣತಿಯ ಪಡೆದನು ಭಕ್ತಿ ಭಾವದಲಿ ।
ಅನಘರಿರ್ವರು — ನಿಮ್ಮ ದರ್ಶನ
ವನು ವಿದೇಹದ ಜನರು ಪಡೆಯಲಿ
ಕಣ್ಣುಗಳಿಗೆ ಸವಿಯೂಟವಾಗಲಿ ನಿಮ್ಮ ರೂಪದಲಿ ॥೧॥

ಉಟ್ಟು ಪೀತಾಂಬರವ ಮಕುಟವ
ನಿಟ್ಟು ತಲೆಯೊಳು ತಿಲಕ ಪಣೆಯೊಳ
ಗಿಟ್ಟು ಕಾರ್ಮುಕವಡಿದು ಬತ್ತಳಿಕೆಯನು ಬಿಗಿಯುತ್ತ ।
ಸುಟ್ಟು ದುರಿತವ ಮುಕ್ತಿ ಫಲವನು
ಕೊಟ್ಟು ಭಕ್ತರ ಪೊರೆವ ದನುಜಘ
ರಟ್ಟ ನಡೆದ ವಿದೇಹ ನಗರದ ರಾಜ ವೀಥಿಯಲಿ ॥೨॥

ನೀಲವರ್ಣನು ಗೌರರೂಪ ವಿ
ಶಾಲಮತಿಯೊಡಗೂಡಿ ನಡೆವನು
ನೀಲಕುಂತಳ ಸಿಂಹಕಂಧರ ಬಾಹು ವಿಸ್ತಾರ ।
ಪಾಲಿಸುತ ಮೋಕ್ಷವನು ದುರಿತ
ವ್ಯಾಳ ತೊಲಗಿಸಿ ತನ್ನ ಭಕ್ತರ
ಪಾಳಯಕೆ ನಡೆತಂದನಾತುರದಿಂದ ರಾಘವನು ॥೩॥

ಬರುವ ಸುಂದರ ವಿಗ್ರಹರನನು
ಸರಿಸಿ ಮಿಥಿಲಾಪುರದ ಬಾಲರು
ಹರುಷದಿಂದೊಡಗೂಡಿ ನಡೆದರು ವೀಥಿ ವೀಥಿಯಲಿ ।
ಸರಳ ಗುಣಮುನ್ನರಿತು ಸರ್ವರು
ಹರಿಯ ದೇಹ ಸ್ಪರ್ಶಕಾತುರ
ಭರದಿ ಮುಟ್ಟುತ ಪಡೆದು ರೋಮಾಂಚನವ ನಲಿಯುವರು ॥೪॥

ಆ ಮುಖದ ಸವಿ ಸೊಂಪು ನಗರದ
ಭಾಮೆಯರ ಮನಸೆಳೆಯೆ ಬಿಸುಟರು
ಕೋಮಲೆಯರತ್ಯಾಶೆಗಳ ಹರಿಪಾದ ಮೂಲದಲಿ ।
ರಾಮನೇ ಗತಿಯೆಂದು ಹರುಷದಿ
ಕೈ ಮುಗಿಯುತಲಿ ರಾಮ ಮಂಗಳ
ಧಾಮ ದರ್ಶನವಿತ್ತ ಪುಣ್ಯವಿದೆಂದು ಹೊಗಳಿದರು ॥೫॥

ಕರೆದು ಸಖಿಯರ ತೋರಿಸಲು ಹರಿ
ಚರಣ ದರ್ಶನದಿಂದ ಪಡೆಯುತ
ಹರುಷ ನೇತ್ರಾನಂದದಿಂ ನೋಡುವರು ಮನದಣಿಯೆ ।
ಹರಿ ಹರ ವಿರಿಂಚಾದಿ ದೇವರು
ಸರಿಯುಪರಿ ಕಾಂತಿಯಲಿ ಮೂವರ
ಪರಮ ಚೆಲುವಿಂದಾದ ವಿಗ್ರಹರೀ ಕುಮಾರಕರು ॥೬॥

ಚಂದ್ರನೋ ಕಮಲಾಪ್ತನೋ ದೇ
ವೇಂದ್ರನೋ ಮದನಾರಿಯೋ ನಾ
ಗೇಂದ್ರನೋ ಮನ್ಮಥನೊ ಲಕ್ಷ್ಮೀಕಾಂತನಿವನೇನೊ ।
ಇಂದ್ರಿಯಂಗಳಿಗರಿಯ ದೇವ ಜಿ
ತೇಂದ್ರಿಯರ ಮನಹಾರಿ ಸದ್ಗುಣ
ಸಾಂದ್ರ ತಾಪತ್ರಯವ ತೊಡೆವನು ನೋಡಲಿವನನ್ನು ॥೭॥

ಇಂತು ನಾನಾ ವಿಧದಿ ಸೌಧದಿ
ನಿಂತು ನಾರಿಯರವರ ನೋಡುತ
ನಂತನಂ ಹೊಗಳುವರು ಸಖಿಯರ ಕರೆದು ಹೇಳುತ್ತ ।
ಸಂತಸದೊಳೊರ್ವ ಸಖಿ ಪೇಳ್ದ
ಳನಂತರೂಪರ ಬಲ್ಲೆ ಮಿಥಿಲಾ
ಕಾಂತ ಕರೆತಂದಿಹನು ವಿಶ್ವಾಮಿತ್ರ ಮುನಿಸಹಿತ ॥೮॥

ಇವರು ದಶರಥರಾಯ ತನಯರು
ಇವನು ರಘುಪುಂಗವನು ರಾಮನು
ಇವನು ಲಕ್ಷ್ಮಣ ಮುನಿಯ ಯಾಗವ ಕಾಯ್ದು ಮಾರ್ಗದಲಿ ।
ಇವನಹಲ್ಯೆಯ ಶಾಪವೊರೆಸುತ
ಲವನಿಜೆಯ ಕೈಪಿಡಿಯೆ ಬಂದಿಹ
ನಿವನ ರೂಪೇ ರೂಪು ನೋಡೆಂದಳು ಸರೋಜಮುಖಿ ॥೯॥

ಅವಳ ರೂಪಿಂಗಿವನ ಚೆಲುವನ
ಳವಡಿಸಲ್ಕೊಪ್ಪುವುದು ಜನಪತಿ
ಯವಘಡವನೊಡ್ಡಿದನು ಶಂಕರ ಚಾಪರಪಣದಲಿ ।
ಅವನಿಯೊಳಗಿನ್ನಿಹರೆ ರೂಪು
ಳ್ಳವರು ರಾಮಗೆ ಜನಕ ಶಪಥವ
ಸವೆದು ಸೀತೆಯನೀವನಿವಗೆಂದಳು ಸರೋಜಮುಖಿ ॥೧೦॥

ಎನಲು ಮತ್ತೊರ್ವ ಸಖಿ ನುಡಿದಳು
ವನಜ ಮುಖ ಸಾಮಾನ್ಯನೇ ಸಖಿ
ಧನುವ ಲೀಲೆಯೊಳೆತ್ತಿ ಮುರಿವನು ಸೀತೆಕರವಿಡಿವ ।
ದನುಜರಂ ಸದೆಬಡಿದು ಮಾರೀ
ಚನ ಸುಬಾಹುವ ಭಂಗಗೊಳಿಸಿದ
ನನಘ ಪದಧೂಳಿಯಲಿ ಮುನಿಸತಿ ಶಾಪವೊರೆಸಿದನು ॥೧೧॥

ಜನಕಜೆಯ ಸೃಷ್ಟಿಸುವ ಬಯಕೆಯೊ
ಳನಘೆಯಂ ವರಿಸಲ್ಕೆ ರಾಮನ
ವನಜಪೀಠನು ಸೃಷ್ಟಿಸಿದ ಸೌಂದರ್ಯವಂ ತುಂಬಿ ।
ಧನುಗಿನುವ ಲೆಕ್ಕಿಪನೆ ಮುರಿದೊಗೆ
ವನು, ಸರೋಜಾನನೆಯ ವರಿಸುವ
ಜನಕ ಸುತೆಯಿನ್ನೇಸು ಧನ್ಯಳೊಯೆಂದು ಹೊಗಳಿದರು ॥೧೨॥

ಈ ನುಡಿಯ ಕೇಳುತ್ತ ಸಕಲರು
ಮೌನದಿಂದಂತಾಗಲೆಂದರು
ಮಾನನಿಧಿಯಂ ಹರಸಿ ಬೇಡಿದರೊಲವ ವಿನಯದಲಿ ।
ಮಾನಿನಿಯರೊಲಿದವನ ಹರಸಿ ಸು
ವಾಣಿಯಿಂ ಗುಣಗಾನ ಮಾಡುತ
ನೂನ ಸುಂದರ ರೂಪರಂ ನೋಡಿದರು ಮನದಣಿಯ ॥೧೩॥

ಎಲ್ಲಿ ಚರಿಸಲ್ಕಲ್ಲಿ ನೋಡವ
ಚೆಲ್ಲಿ ಸಂತೋಷಗಳ ಬೀರುತ
ಫುಲ್ಲಲೋಚನರಿರ್ವರುಂ ನಡೆದಿಹರು ವೀಧಿಯಲಿ ।
ಮೆಲ್ಲ ಮೆಲ್ಲಡಿಯಿಡುತ ಗೆಳೆಯ
ರ್ಗೊಳ್ಳೆ ನುಡಿಯಂ ಪೇಳುತೆಳನಗೆ
ಮಲ್ಲಿಗೆಯ ಸೂಸುತ್ತ ತೋರಿದ ದಿವ್ಯರೂಪವನು ॥೧೪॥

ನಡೆದು ಗೆಳೆಯರ ನೆರವಿಯಲಿ ಸವಿ
ನುಡಿಗಳಾಡುತ ಸುತೆ ವಿವಾಹಕೆ
ಪೊಡವಿಪತಿ ಕಟ್ಟಿಸಿದ ಕಾರ್ಮುಕ ಯಜ್ಞ ಮಂಟಪವ ।
ನಡೆದು ನೋಡಿದನದರ ಸೊಬಗನು
ನುಡಿದನನುಜಗೆ–ಜನಕನಗರಿಯ
ಬೆಡಗ ವಿವರಿಸಿ ಬಾಲಕರ ಪಡೆ ಸೋಕುತಿಹುದವನ ॥೧೫॥

ರಾಮನೊಡನಾಡುವರು ನೋಡುತ
ಲಾ ಮನೋಹರ ರೂಪರಾತ್ಮಾ
ರಾಮರಾದರು ತರಳರೆಲ್ಲರು ಚಿತ್ತವನು ತೆತ್ತು ।
ಪ್ರೇಮಮಯನಾರಾಮ ಮಿತ್ರರ
ಕಾಮನೆಗಳರಿಯುತ್ತ ನುಡಿಸಲು
ರಾಮನಂ ನಿಜನಿಲಯಕೊಯ್ವರು ಕರೆದು ಸಲುಗೆಯಲಿ ॥೧೬॥

ಅವರವರ ಗೃಹಕ್ಕೈದಿ ಭಕ್ತಿಯ
ನವನು ಕೈ ಕೊಳ್ಳುತಲಿ ಮಿಥಿಲೆಗೆ
ನಿಮಿಸದಲಿ ತಾನಾಪ್ತನಾದನಪಾರ ಗುಣದಿಂದ ।
ಅವರವರ ಕೆಲಸಗಳ ಮರೆಯುತ
ಲಿವನ ತಮ್ಮವನೆಂದೆ ಬಗೆಯುತ
ಲವಚಿ ಕಸ್ತುರಿ ತಿಲಕವಿಡುತಲಿ ಹರಸಿಕಳುಹಿದರು ॥೧೭॥

ಅನುಜ ಲಕ್ಷ್ಮಣಗಾಗ ಮುದದಿಂ
ಜನಕನಗರಿಯ ಸೊಬಗ ತೋರಿದ
ವನಜಲೋಚನ ಮೃದು ಮಧುರವಾಣಿಯಲಿ ವಿವರಿಸುತ ।
ಕ್ಷಣದಿ ನಿರ್ಮಿತವಾಯ್ತು ಸಕಲ ಭು
ವನವು ಮಯನಾಣತಿಯ ದೆಸೆಯಿಂ
ಮಣಿಖಚಿತ ಚಿತ್ರತೆರದಿಂ ಬ್ರಹ್ಮಾಂಡ ನೋಡೆಂದ ॥೧೮॥

ಹೊತ್ತು ಮೀರಲು ನೇಹಿಗರ ಕಳು
ಹುತ್ತ ವಿಶ್ವಾಮಿತ್ರ ಸನ್ನಿಧಿ
ಯತ್ತ ಸಾರಿದರಿರ್ವರುಂ ಭಕ್ತಿಯಲಿ ನಡೆತಂದು ।
ಬಿತ್ತರಿಸುತಿರೆ ಕಂಡ ನೋಟವ
ನತ್ತ ಸೀತೆಯ ನಾಳೆ ತೋರ್ಪೆನೆ
ನುತ್ತ ಪಡುವಣ ಸೀಮೆ ಸಾರ್ದನು ಭಾಸ್ಕರನು ತೆರಳಿ ॥೧೯॥

ಓಡಿದುದು ದಿನ ಜನಕ ಸುತೆಯನು
ನೋಡುವಾತುರದಿಂದಲಿತ್ತಲು
ಮೂಡಿದನು ಪೂರ್ವದಲಿ ಚಂದ್ರನು ರಾಮನನ್ನರಸಿ ।
ಮಾಡಿಸಂಧ್ಯಾದಿಗಳ ಗುಣಗಳ
ಹಾಡಿ ಮುನಿಪದವೊತ್ತಿ ಸೇವೆಯ
ಮಾಡುತೊಲಿಸಿದರಂದು ಮುನಿಪತಿ ನಿದ್ರೆವೋಗಲ್ಕೆ ॥೨೦॥

ಅಣ್ಣನಡಿಯೊಳು ಕುಳಿತು ಲಕ್ಷ್ಮಣ
ನುನ್ನತಾಮಲ ಪದಗಳೊತ್ತುತ
ನನ್ನಿಯಿಂ ಪವಡಿಸಿದ ರಾಮನ ಗುಣವ ನೆನೆಯುತ್ತ ।
ತನ್ನ ವಂಶದಿ ಬಂದ ರಾಮನಿ
ಗಿನ್ನು ಸೀತೆಯ ತೋರುವಾತುರ
ವನ್ನು ನೆನೆಯುತ ಮೂಡಣಾದ್ರಿಯನೇರ್ದ ನೇಸರನು ॥೨೧॥

ಗುರುವಿನಾಣತಿಯಿಂದ್ಧ ಪುಷ್ಪವ
ತರಲು ನಡೆದರು ನೃಪನ ಹೊಬನ
ವರಸಿ ನೋಡೆ ವಸಂತರಾಗವ ಬೀರುತಿರಲಲ್ಲಿ ।
ತೆರತೆರದ ಫಲವೃಕ್ಷರಾಜಿಯು
ನೆರಳನೀಯುವ ತರುಸಮುಚ್ಚಯ
ಪರಮ ಸುಂದರ ಪುಷ್ಪವಾಟಿಕೆಗಳನು ನೋಡಿದರು ॥೧೨॥

ಬನವು ನಂದನವನವ ಮೀರಿಸಿ
ಮನಸೆಳೆಯೆ ಸುರಭೂಜದೊಲು ಫಲ
ವನು ಸುರಿಸಿ ತರುನಿಚಯವಿಹವಾ ವನದಿ ಸೊಗವಾಗಿ ।
ಕುಣಿಯೆ ನವಿಲುಗಳಲ್ಲಿ ಕೋಗಿಲೆ
ಗಿಣಿ ಚಕೋರ ವಿಹಂಗಮಂಗಳು
ಬನದಿ ಸುಖಗಾನವನು ಮಾಡುತ್ತಿಹವು ಬೆಡಗಿಂದ ॥೧೩॥

ಕೇಳಿ ವನಪಾಲಕನ ರಾಮನು
ನಾಲ್ಕು ದೆಸೆಗಳ ನೋಡಿ ಮುದದಲಿ
ಮೇಲಿನಿಂ ಪುಷ್ಪಗಳ ಕರಪಲ್ಲವದೊಳೆತ್ತುತಿರೆ ।
ಫಾಲನೇತ್ರನ ಸತಿಯ ಪೂಜೆಗೆ
ಬಾಲೆ ಸೀತಾರಮಣಿ ಬಂದಳು
ಶೀಲ ಸಖಿಯರ್ವೆರಸಿ ರಾಜೋದ್ಯಾನ ಮಾರ್ಗದಲಿ ॥೧೪॥

ವನದ ಬೆಡಗನು ಸೀತೆ ನೋಡುತ
ವನಜ ಮುಖಿಯರ್ಗೊಲಿದು ತೋರುತ
ವನಜನಿಲಯದೊಳಿಳಿದು ಮಜ್ಜನಗೈದು ಮಡಿಯುಟ್ಟು ।
ಘನಮಹಿಮೆ ಪಾರ್ವತಿಯನರ್ಚಿಸೆ
ವಿನಯದಿಂ ದೇಗುಲವ ಹೊಕ್ಕಳು
ತನುವನೀಡಾಡಿದಳು ಶಂಕರಿ ಪಾದಪದ್ಮದಲಿ ॥೧೫॥

ಮುಗಿಸಿ ಪೂಜೆಯನುಪವನದಿ
ಪುಷ್ಪಗಳನೆತ್ತಲು ವನದೊಳಲೆಯುತ
ನಗೆಯ ಸೂಸುತ ಬರುತ ಕಂಡಳು ರಾಮಲಕ್ಷ್ಮಣರ ।
ಮುಗ್ಧೆ ಮರೆಯಲಿ ನಿಂದು ರಾಮನ
ಮೊಗವನೀಕ್ಷಿಸಿ ತನ್ನ ಮರೆಯುತ
ಲೊಗುವ ಸಂಪ್ರೀತಿಯಲಿ ನೋಳ್ಪಳು ಗಿಡದ ಮರೆಗಳಲಿ ॥೨೬॥

ಅತ್ತ ಜಾನಕಿ ಹೋದ ಮಾರ್ಗದಿ
ತೆತ್ತಿಗರು ನಡೆತಂದು ಕಂಡರು
ಮತ್ತಗಜಗಾಮಿನಿಯು ಲೋಕನ ಮರೆತು ನಿಂದಿರಲು ।
ಎತ್ತ ನೋಡುವೆ ಸೀತೆ ಜನಕನ
ಪುತ್ಥಳಿಯೆ ನೀನೇನ ಮಾಡುವೆ
ಹೊತ್ತು ಹೋದುದು ಪೂಜೆಯಾಯ್ತಿನ್ನೇಳು ಹೋಗುವೆವು ॥೨೭॥

ಎನಲು ಮಾರುತ್ತರವ ಕೊಡದಿಹ
ಜನಕಜೆಯ ನೋಡುತ್ತ ಸಖಿಯರು
ವನಜನಯನೆಯ ನೋಟದೊಳು ನಿಜನೋಟಮಂ ಹರಿಸಿ ।
ಅನಘರಿರ್ವರ ಕಂಡು ಮೌನದಿ
ಮನಮುಳುಗಿದಂತಾಗೆ ಮಾರನ
ಕಣೆಗೆ ಹೃದಯವನೊಡ್ಡಿ ನಿಂದರು ವರ ಸಖೀಜನರು ॥೨೮॥

ಅವರವರು ತಮತಮಗೆ ತೋರಿದ
ಸವಿಗುಣವ ರೂಪುಗಳ ಹೊಗಳುತ
ಕುವಲಯ ಶ್ಯಾಮನನು ಬಣ್ಣಿಸುತಿವರು ನರರಲ್ಲ ।
ದಿವಿಜರೊಡೆಯನ ಸುತರೊ, ಮನ್ಮಥ
ಕುವರರೋ ಸಿರಿಯಾತ್ಮಜರೊ ಮೇ
ಣಿವರು ವಿದ್ಯಾಧರ ಕುಮಾರರೊ ಖೇಚರಾನ್ವಯರೋ ॥೨೯॥

ನಾಲಿಗೆಗೆ ಕಣ್ಣಿಲ್ಲ – ಕಣ್ಗಳು
ಪೇಳಲಾರವು ಹಲವು ಮಾತೇಂ
ವ್ಯಾಳ ಶಯನಂಗರಿದು ಚೆಲುವು ಸ್ಮರನ ಬೆಡಗೇನು ?।
ಕೇಳಿ ಸಖಿಯರ ನುಡಿಯ ಜಾನಕಿ
ನೀಲವರ್ಣನ ನೋಡಿ ಸಿಲ್ಕಿದ
ವಾಲಿಗಳು ಸೆರೆ ಹರುಷವೇರಲು ಮಾತು ಮರೆಯಾಯ್ತು ॥೩೦॥

ತ್ವರದಿ ಮತ್ತೊರ್ವ ಸಖಿ ಪೇಳ್ದಳು
ನರಪ ದಶರಥ ಸುತರು ಮುನ್ಯ
ಧ್ವರವ ಕಾಯುತಹಲ್ಯೆ ಶಾಪವ ಕಳೆದು ಬಂದಿಹರು ।
ಹರಿಯು ಮೇಘಶ್ಯಾಮ ರಾಮನು
ಕಿರಿಯ ಲಕ್ಷ್ಮಣರಿರ್ವರಂ ನ-
ಮ್ಮರಸ ಕರೆತಂದಿಹನು ವಿಶ್ವಾಮಿತ್ರಮುನಿಯೊಡನೆ ॥೩೧॥

ಆವನಾ ರೂಪಿಂಗೆ ಮೋಹಿಸಿ
ದೇವಿ ಸೋಲುತ ಸುಖವ ಬಗೆವಳೊ
ಆವನಂ ಪುರಜನರು ನರನಾರಿಯರು ತುತಿಸಿದರೋ ।
ಆ ವನಜಲೋಚನನ ನೋಡ
ಲ್ಕಾ ವನಿತೆಯರು ರೋಮಪುಳಕದೊ
ಳಾವನತ ಮುಖರಾಗಿ ನಿಂದರು ಹರುಷಭಾರದಲಿ ॥೩೨॥

ನೆನೆದು ನಿಜವೃತ್ತಾಂತ ಜಾನಕಿ
ವನಜನಾಭನೆ ರಾಮನೆಂದರಿ
ದನುವಿನಿಂ ಮನದಲ್ಲಿ ವಂದಿಸಿ ಹಿಂದೆ ನಾರದನು ।
ತನಗೊಲಿದು ಪೇಳ್ದುದನು ಹೃದಯದಿ
ನೆನೆದು ಹೊಂಪುಳಿಯೋಗಿ ಲಜ್ಜಾ
ವನತೆಯಾದಳು ಸಿಕ್ಕಿದಳು ಸೆರೆ ರಾಮ ಹೃದಯದಲಿ ॥೩೩॥

ಧ್ವನಿಸೆ ಕಂಕಣ ಕಿಂಕಿಣೀರವ
ದನಿಗೊಡಲು ನೂಪುರವು ಕೇಳ್ದ ದ
ನನುಜನೊಡನಿಂತೆಂದ ರಾಮನು ವತ್ಸ ಸೌಮಿತ್ರಿ ।
ಮನುಮಥನು ದಿಗ್ವಿಜಯ ಕಾರಣ
ವನದಿ ದುಂದುಭಿ ವಾದ್ಯಘೋಷದಿ
ವನಿತೆಯುರ್ವೆರಸುತ್ತ ನಡೆದಿರುವಂತೆ ತೋರುವುದು ॥೩೪॥

ಎನುತೆ ದನಿಗುಡುವೆಡೆಗೆ ಬರುತಿರೆ
ವನಿತೆ ಸೀತಾವದನ ಚಂದ್ರನ
ನನಘ ನಯನ ಚಕೋರಕಂಗಳು ಭರದಿ ನೋಡಿದುವು ।
ಜನಕ ತನುಜೆಯನೆವೆಯನಿಕ್ಕದೆ
ಮುನಿಮನೋಹಾರಕನು ನೋಡಲು
ಮನದ ಭಯದಿಂ ನಿಮಿಯು ತೊಲಗಿದ ರಾಮನಕ್ಷಿಗಳಿಂ ॥೩೫॥

ಉಡುಗಿದುದು ನಡೆ ನುಡಿಯು ಮಾತುಗ
ಳಡಗಿದುವು ಹೃದಯದಲಿ ಸೀತೆಯು
ಕಡುಚೆಲುವು ಚಿತ್ರತರಮಾಗಿರೆ ಮಿಕ್ಕನೋಟಗಳು ।
ಜಡವೆನಿಸೆ ವಿಧಿ ರೂಪನಿವಳಿಗೆ
ತೊಡಿಸಿ ನೈಪುಣ್ಯವನು ತೋರ್ದನು
ಪೊಡವಿಯೊಳು ಸೌಂದರ್ಯರಾಶಿಯನಿವಳೊಳಳವಡಿಸಿ ॥೩೬॥

ಸುಂದರಿಯು ಸೌಂದರ್ಯ ಕಾಂತಿಗೆ
ಕುಂದಣವನಿಟ್ಟಂತೆ ಗುಣಗಳಿ
ಗಂದಮಾದಾಭರಣವಿವಳೀ ನಿರ್ಮಲದ ಚೆಲುವು ।
ಅಂದವನು ಹೋಲಿಸುತ ಬಣ್ಣಿಸು
ತಂದಗೆಡಿಸುವರಿವಳ ರೂಪಿಗೆ
ಸಂದ ರೂಪಿನ್ನುಂಟೆ ನೀ ಸೌಮಿತ್ರಿ ಹೇಳೆಂದ ॥೩೭॥

ಇವಳಿಗುಪಮಾನವಿಹುದೇಂ ಮೋ
ಣಿವಳನಿಂತಾ ವಿಧಿಯು ಸೃಷ್ಟಿಸಿ
ಭುವನ ಮೋಹನ ತನ್ನ ಗೆಲ್ದನೆನುತ್ತ ಹರುಷದಲಿ ।
ಅವಳ ರೂಪಕೆ ಮಾರುವೋದನು
ರವಿಕುಲಜ ತನ್ನಿರವನರಿಯುತ
ಜವದಿ ಲಕ್ಷ್ಮಣನೊಡನೆ ಪೇಳಿದನುಚಿತ ಸಮಯದಲಿ ॥೩೮॥

ಅನುಜ ನೋಡೀ ಪರಮ ಸುಂದರಿ
ಜನಕರಾಯನ ತನುಜೆ ಸೀತೆಯು
ಧನುಷಯಾಗವನಿವಳಿಗೋಸುಗ ಮಾಳ್ಪ ಭೂವರನು ।
ವನರುಹಾಕರದಲ್ಲಿ ಮಿಾಯುತ
ಲನಘೆ ಗೌರೀ ಪೂಜೆ ಮಾಡುತ
ವನದಿ ತನ್ನೀ ಕಾಂತಿ ಪಸರಿಸೆ ನಡೆತರುವಳೆಂದ ॥೩೯॥

ಇವಳಲೌಕಿಕ ರೂಪಮಧುವನು
ಸವಿಯುತೆನ್ನ ಪವಿತ್ರಮನ ಮೋ
ಹವನು ಪಡೆದುದು ವಿಧಿಯು ಕಾರಣ ಬಲ್ಲನಿದಕೀಗ ।
ತವೆ ಶುಭಾಂಗಗಳದುರುತಿವೆ ಎನ
ಗಿವಳ ಮೇಲ್ಮನಮಾಗೆ ಶುಭವನು
ಭವವ ತೋರ್ವವು ಶಕುನತತಿಗಳು ವತ್ಸ ಕೇಳೆಂದ ॥೪೦॥

ಅರಿಯೆನಾಂ ಪರನಾರಿಯರ ಕಂ
ಡರಿಯೆನಾಂ ಸ್ವಪ್ನದೊಳು ರಘುಕುಲ
ದರಸುಗಳು ಪರನಾರಿಯರ ನೋಡರು ಪರಮಧರ್ಮಿಗಳು ।
ಮರವೆಯಿಂ ದುಷ್ಕರ್ಮವೆಸಗರು
ನಿರುತವಿರಲೆನಗಿಂತು ಮೋಹ
ಸ್ಫುರಿಸಿದುದು ಜಾನಕಿಯ ನೋಡಲ್ಕೆಎನಗಿದಚ್ಚರಿಯು ॥೪೧॥

ಬೆನ್ನು ಹಾಕಿದರಿಲ್ಲ ಮೊನೆಯೊಳು
ಬೆನ್ನು ಬಿದ್ದವರನ್ನು ಸಲಹುವ
ಸನ್ನುತರು ನಾರಿಯರ ಮೋಹಕೆ ಸಿಲುಕಿದವರಿಲ್ಲ ।
ಉನ್ನತರು ಬಹುದಾನಿ ಯಾಚಕ
ರನ್ನು ಮನದಣಿವಂತೆ ನೀಡುತ
ಮನ್ನಿಸುವ ಗುಣಯುತರು ರವಿಕುಲ ಮಕುಟವರ್ಧನರು ॥೪೨॥

ಎನುತ ವಿಶ್ವಾಸದಲಿ ಮೋಹದಿ
ಜನಕಸುತೆಯಂ ನೋಡಿ ದಣಿಯದೆ
ವನಜಮುಖ ಮಕರಂದಪಾನವ ಗೆಯ್ಯುತಿರಲತ್ತ ।
ಇನಕುಲೋತ್ತಮನನ್ನು ನೋಡುತ
ಮನದೊಳಾ ಚಿತ್ರವನೆ ಚಿತ್ರಿಸಿ
ನೆನೆದು ಜಾನಕಿ ಚಕಿತಳಾದಳು ರಾಮಜಾನದಲಿ ॥೪೩॥

ಸುಳಿಯೆ ಶೀತಳ ಮಂದ ಮಾರುತ
ನಲುಗಿಸುತ ಗಿಡಬಳ್ಳಿ ಕನ್ನೈ
ದಿಲೆಯು ಮರೆಮಾಡಲ್ಕೆ ರಾಮನ ಮೊಗವನಾಗಾಗ ।
ಸುಳಿವ ಪುಷ್ಪದ ಮರೆಗೆ ಕನಲುತ
ಬಳಲಿದಳು ಚಣವಗಲಲಾರದೆ
ತಳೆದಳಾ ಜಾನಕಿಯು ಹೃದಯದಿ ರಾಮರೂಪವನು ॥೪೪॥

ನೀಲ ಗೌರಾಂಗರನು ಸಖಿಯರು
ಮೇಲಿನಿಂ ಹೊಗಳುತಿರಲೀ ಮಾ
ಲೋಲ ನಿಜಕರವಿಡಿವ ಧನುಮುರಿದೆಂದು ಭಾವಿಸುತ ।
ನೀಲಕುಂತಳೆ ಸೀತೆ ರಾಮನ
ಮೂಲವಂ ಚಿಂತಿಸುತ ತನ್ನಾ
ಮೂಲಜನ್ಮದ ಗೂಢವರಿತಳು ಸಂತಸದ ಮನದಿ ॥೪೫॥

ಅನಘ ರಾಮನ ನೇತ್ರಮಾರ್ಗದಿ
ಮನದೊಳೊಯ್ಯುತ ಹೃತ್ಕವಾಟವ
ನನುವಿನಿಂ ಮುಚ್ಚಿದಳು ನಿಶ್ಚಲಮನದಿ ನೋಡುತ್ತ ।
ಜನಕಜೆಯು ಮೋಹದಲಿ ಸಿಲ್ಕಿರೆ
ವನಜಮುಖನಂ ಜಾನಿಸುತ್ತಲಿ
ಮನದಿ ತಲ್ಲಣಗೊಂಡುದಾ ಸಖಿನಿಚಯ ಬೆರಗಾಗಿ ॥೪೬॥

ಮುನಿಗೆ ಪೂಜಾಸಮಯಮಾಗ
ಲ್ಕನುಜ ಸಹಿತಾರಾಮ ನಡೆದುಪ
ವನಲತಾ ಮಂಟಪವ ಹೊರವಡುತಿರಲು ನೋಡಿದರು ।
ಘನತರದ ಮುಗಿಲೊಡ್ಡು ಜಾರಲು
ಮಿನುಗುತಿಹ ಚಂದ್ರನೊಲು ಹೊಳೆದನು
ವನಜಮುಖಿಯರ ಮುಂದೆಸೆದು ಸರ್ವಾಂಗ ಸುಂದರನು ॥೪೭॥

ವೀರರಿರ್ವರು ನೀಲ ಪೀತ ಸ
ರೋರುಹದೊಲೆಸೆಯುತಿರೆ ಕಾಂತಿಯು
ಬೀರಿ ಬೆಳಗಿದರವರು ಬನದೊಳಗೆಲ್ಲ ದೆಸೆಗಳಲಿ ।
ಚಾರುಗುಣ ಗಂಭೀರ ವರಸುಮ
ಹಾರ ಪದಕ ಕಿರೀಟ ಕಮಲಾ
ಗಾರ ಕರುಣಾಸಾರನೆಸೆದನು ವನಿತೆಯರ ಮುಂದೆ ॥೪೮॥

ತಿಲಕ ಪಣೆಯೊಳು ಮಕರ ಕುಂಡಲ
ತೊಳಗೆ ಕಿವಿಯೊಳು ವನಜಲೋಚನ -
ಗಳಿಯ ಜರೆಯುವ ಪುರ್ಬು ಗಲ್ಲದೊಳೆಸೆವ ಶ್ರಮಬಿಂದು ।
ಹೊಳೆವ ನಾಸಿಕ ನುಣ್ಗದಪುಗಳು
ಸುಳಿಯುತಿರೆ ಮುಂಗುರುಳ ಗುಂಗುರು
ಸೆಳೆವ ಸರ್ವರ ಮನವ ಜಗದಭಿರಾಮ ರಘುರಾಮ ॥೪೯॥

ಎಳನಗೆಯ ಮೊಗಕಾಂತಿ ಮನ್ಮಥ
ಕಲಭಕರದಂತಿರುವ ಭುಜಗಳು
ಹೊಳೆವ ಪುಷ್ಪಕರಂಡ ಸುಮಗಳನಿಡಲು ಪಿಡಿದಿಹನು ।
ನಳಿನಮುಖಿ ನೋಡಿವನ ಸುಮಶರ
ನಳವಿ ಹೊಕ್ಕನು ವಿಶ್ವಮೋಹನ
ನಿಳಿಯೆ ಮೆರೆದಳು ಕಾಂತಿ ಗರುವಾಯಿಯಲಿ ಲೋಕದಲಿ ॥೫೦॥

ಧರಿಸಿಹನು ಪೀತಾಂಬರವ ಸಿರಿ
ವರನ ತೇಜದಿ ಸುಗುಣಸಾಗರ
ಹರಿಯು ರಾಮನ ಭಾನುಕುಲ ಭೂಷಣನ ನೋಡೆನುತ ।
ಸರಸಿಜಾಕ್ಷಿಯರಾಗ ರಘುಪತಿ
ಪರಮ ಕಾಂತಿಯ ಬಲೆಗೆ ಸಿಲ್ಕುತ
ಮರೆತು ಕಾರ್ಯವ ನಿಂದರಲ್ಲಿಯೆ ಮೋಹಪರವಶದಿ ॥೫೧॥

ಒರ್ವಸಖಿಯೆಚ್ಚತ್ತು ನುಡಿದಳು
ಪಾರ್ವತಿಯ ಪೂಜೆಯನು ಭಜನೆಯ
ಸರ್ವ ಕಜ್ಜವ ಮತ್ತೆ ಗೆಯ್ವೆವು ಹರಿಯ ನೀ ನೋಡು ।
ಉರ್ವಿಯೊಳಗುರುತರದ ರೂಪರ
ನಿರ್ವರಂ ಮನದಣಿಯಲೀಕ್ಷಿಸು
ಗರ್ವದಿಂ ಪೆರ್ಮೆಯಲಿ ಜಾನಕಿ ನಿಶ್ಚಲದ ಮನದಿ ॥೫೨॥

ನೋಡದಿರ್ದೊಡೆ ಬೇಡ ನಡೆ ನೀ
ಬೇಡಿಕೊಳ್ವುದು ಶಿವೆಯ ತನುವೀ
ಡಾಡಿ ಮೆಚ್ಚಿಸುತಿವನ ನೀ ಪಡೆಯೆಂದಳಬುಜಾಕ್ಷಿ ।
ನೋಡಿದಳು ಕಣ್ದೆರೆದು ದನುಜ ವಿ
ಭಾಡ ಶಿವಧನು ಮುರಿದು ಜನಕನ
ಗಾಢ ಪಣವುಂ ಗೆಲುವನೇ ಹಾಯೆಂದು ಹಲುಬಿದಳು

ಚಿಂತೆ ಮೂಡಲು ಮನದಿ ಸೀತೆಯು
ಕಂತು ಬಾಧೆಗೆ ಸಿಲ್ಕಿರಲು ನಿ
ಶ್ಚಿಂತೆವಡೆಯೌ ತಾಯೆ ರಾಮನ ಕರವಿಡಿವೆ ಮುಂದೆ ।
ಪಿಂತೆರಳು ಕೋಪಿಸಳೆ ಸುನಯನೆ
ಯಿಂತು ತಳುವಿದೊಡಿಲ್ಲಿಯೆನ್ನ
ಲ್ಕಂತರಂಗದಿ ಮೂಡಿದುದು ಭಯ ತನ್ನಿರವನರಿಯೆ ॥೫೪॥

ಮನದಿ ನೆನೆಯುತಲೊಮ್ಮೆ ರಾಮನ
ವನಜಮುಖಮನ್ನೊಮ್ಮೆ ನೋಡುತ
ಜನಕಸುತೆ ಪೊರಮಟ್ಟಳಲ್ಲಿಂ ಸಖಿಯರೊಡನಾಗ ।
ಮನದಿ ಧೈರ್ಯವ ತಾಳಿ ರಘುಪತಿ
ವನಜಪದಗಳನಂಬಿ ನಡೆದಳು
ಜನನಿಯೆಡೆಗುಯ್ಯಲೆಯ ಮನದಿಂದೈದಿದಳು ಮೆಲನೆ ॥೫೫॥

ರಾಮಮಯವಾಯ್ತವರ ಹೃದಯವು
ಕಾಮಿನಿಯರೆಲ್ಲರ್ಗೆ ಸಕಲಾ
ರಾಮಮಯವಾಯ್ತೆಂದು ಸೀತೆಗೆ ರಾಮಜಪವೊಂದು ।
ಪ್ರೇಮನರ್ತಿಸಲಲ್ಲಿ ತರುಮೃಗ
ಕಾಮಿಸಿದುವಾ ರಾಮನನು ಖಗ
ಕೋಮಲಾಂಗನ ಕಂಡು ಹರುಷದೊಳುಲಿದು ಹಾಡಿದುವು ॥೫೬॥

ಒಮ್ಮೆ ನೆನೆವಳು ರುದ್ರಚಾಪವ
ನೊಮ್ಮೆ ನೆನೆವಳು ರಾಮಚಂದ್ರನ
ರಮ್ಯವನದಲಿ ದೇಹ ಮರೆಯುತ ನಡೆಯುತಿರೆ ಸೀತೆ ।
ಒಮ್ಮನದಿ ಜಾನಿಸುತ ರಾಮನ
ನೆಮ್ಮಿ ಪದರಾಜೀವಯುಗಳವ
ಸುಮ್ಮನಾದಳು ಹೃದಯ ತೂಗುಯ್ಯಲೆಯವೋಲಾಗೆ ॥೫೭॥

ಅಂದು ರಾಮುಪ್ರೇಮ ಮಯ ಮುಸಿ
ಯಿಂದ ಸೀತೆಯು ಹೃದಯ ಪತ್ರದೊ
ಳಂದವಾಗಿಹ ಚಿತ್ರವೊಂದನು ಬರೆದಳತಿ ಭರದಿ |
ಬಂದು ಗಿರಿಜಾಲಯಕೆ ಭಕ್ತಿಯೊ
ಳಿಂದುಮುಖಿಗಭಿನಮಿಸಿ ಜಾನಕಿ
ಯೆಂದು ಗೌರೀ ಸ್ತೋತ್ರಮಾಡಿದಳೊಲಿದು ವಿನಯದಲಿ ||೫೮||

ಜಯಜಯತು ಗಿರಿರಾಜಪುತ್ರಿಯೆ
ಜಯಮಹೇಶ್ವರ ಮುಖ ಚಕೋರಕ
ಜಯತು ಷಣ್ಮುಖ ಗಜವದನ ಜನನೀ ವಿರಾಗಿಣಿಯೆ |
ಜಯ ಜಗತ್ಪಾಲಕಿಯೆ ಜಯಜಯ
ಜಯ ಜಗತ್ಪಾವನೆಯೆ ಪಾರ್ವತಿ
ಜಯತು ವಿದ್ಯುತ್ಕಿರಣಗಾತ್ರಿಯ ಸರ್ವಮಂಗಳೆಯೆ ||೫೯||

ಆದಿ ಮಧ್ಯಾಂತಗುಣ ವಿರಹಿತೆ
ವೇದವರಿಯದ ಶೀಲ ಚರಿತಳೆ
ಶೋಧಿಸಲ್ಕಳವಲ್ಲ ನಿನ್ನಾ ಪ್ರತಿಭೆಗಳ ಸತ್ವ |
ಆದಿಶಕ್ತಿ ಪುರಾಣಿ ಜನನಿಯ
ನಾದಿರೂಪಿಣಿ ವಿಶ್ವಮೋಹಿನಿ
ಸಾಧ್ವಿಗುಣಮಣಿ ಸೃಷ್ಟಿಪಾಲನ ವಿಲಯಕಾರಿಣಿಯೆ ||೬೦||

ಹದಿಬದೆಯರೆಲ್ಲರೊಳು ನೀನೇ
ಮೊದಲಿಗಳು ನಿನಗಗ್ರಪೂಜೆಯು
ವಿದಿತಗುಣ ಪರಿಪೂರ್ಣೆ ನಿರ್ಜಿತಮೋಹ ಕಾಮಾಕ್ಷಿ |
ವಿಧಿಸತಿಗೆ ಶೇಷಂಗುಮುಸದಳ
ವಿದನು ತಿಳಿಯಲು ದೇವಿ ಶಂಕರಿ
ಸದಯಹೃದಯಾನಂದೆ ಜಯಜಯಮಾತೆ ಶರ್ವಾಣಿ ||೬೧||

ದೇವಿ ನಿನ್ನೀ ಪದಸರೋಜವ
ಸೇವಿಸಲು ಪುರುಷಾರ್ಥ ಸುಲಭದೊ
ಖಾವಗಂ ವಶಮಹವು ಭಕ್ತಿಯೊಳರ್ಚಿಸಲು ನಿನ್ನ ।
ದೇವ ಮುನಿನರರೆಲ್ಲರರಿಯದೆ
ಸೇವಿಸುವರನವರತ ನೀ ನಿಜ
ಭಾವನೆಯನರಿಯುತ್ತ ಪಾಲಿಸು ಮನ್ಮನೋರಥವ ॥೬೧॥

ಒರೆಯುವೆನೆ ಸರ್ವಜ್ಞೆ ಲೋಕದೊ
ಳಿರದ ಠಾವೆಲ್ಲಿಯದು ಜಡ ಜೀ
ವರಲಿ ನೆಲಸಿರೆ ಮನ್ಮನೋರಥವರಿಯದೇ ನಿನಗೆ ! ।
ಕರುಣಿಸೆನ್ನುಳಿವಳಿವು ನಿನ್ನದು
ಹರಿದುದೀ ಮನ ನಿನ್ನ ಮಾಯದೊ
ಳುರುಳಿ ರಾಮನ ಹೃದಯಕೆಂದಳು ಹೊರಳಿ ಚರಣದಲಿ ॥೬೨॥

ಜನನಿ ಪಾರ್ವತಿ ಕೊರಳ ಮಾಲಿಕೆ
ಜನಕಜೆಯ ಕೊರಳನ್ನು ಸಾರ್ದುದು
ವಿನಯ ಭಕ್ತಿಗೆ ಮೆಚ್ಚಿ ನಿಂದಳು ಶಿವೆಯು ನಸುನಗುತ ।
ಮಣಿದು ಭಯದಿ ಹಸಾದವೆನ್ನುತ
ಕಣುಗಳಲಿ ನೀರ್ಗರೆದು ನಿಂದಿರ
ಲನುನಯದಿ ಗಿರಿಜಾತೆ ಕಂಬನಿವೊರೆಸಿದಳು ಕರದಿ ॥೬೩॥

ನಿನ್ನ ಮನದಂತಹುದು ಜಾನಕಿ
ನಿನ್ನಭೀಷ್ಟವನರಿವ ರಘುವರ
ನಿನ್ನ ವರಿಸುವ ರುದ್ರಚಾಪವ ಮುರಿದು ಭುಜಬಲದಿ ।
ಅನ್ಯರಿಂಗಳವಲ್ಲ ಕಾರ್ಮುಕ
ವನ್ನು ಭೇದಿಸೆ ದೇವದೇವನ
ನಿನ್ನು ಪಡೆಯುವೆ ತೆರಳು ನೀ ತೆರಳೆಂದಳಾ ಶಿವೆಯು ॥೬೪॥

ಎನುತ ಶಿವೆ ಮರೆಯಾಗೆ ಜಾನಕಿ
ಯನುವಿನಿಂ ನಡೆತಂದು ಹೊಕ್ಕಳು
ಜನನಿಯಂತಃಪುರವ ಹೊಂಪುಳಿವಡೆದು ಸಂತಸದಿ ।
ಮುನಿಸುರರು ಹಂಬಲಿಪ ರಾಮನ
ಕಣುಗಳಿಗೆ ಕಣ್ಣಾಗಿ ಸೆಳೆದಳು
ಘನಮಹಿಮ ನಿಸ್ಸೀಮ ದೇವನ ಹೃದಯದೊಳ ಹೊಕ್ಕು ॥೬೬॥

ಅನುಜಸಹಿತಾ ರಾಮನೈದುತ
ಮುನಿಪದವ ಸೇರಿದನು ವಂದಿಸಿ
ಜನಕಜೆಯ ದರುಶನದ ಬಗೆಗಳ ವಿವರಿಸಿದನಾಗ ।
ಮನದೊಳಾದ ವಿಕಾರವೊರೆದೊಡೆ
ಮನದಿ ಸಂತೋಷವನು ತಾಳುತ
ಜನಕಜೆಯ ಕರವಿಡಿವೆ ನೀನೆಂದಾಶಿಸಿದ ಮುನಿಯು ॥೬೭॥

ನಾಳೆ ಚಾಪವ ಮುರಿದು ರಾಘವ
ನಾಳುವನು ಜಾನಕಿಯನೆನ್ನುತ
ಕಾಲತೆಗೆದನು ಪಶ್ಚಿಮಾಂಬುಧಿಗಾಗ ನೇಸರನು ।
ಮೇಲೆ ಬಂದನು ಪೂರ್ಣಚಂದ್ರ ವಿ
ಶಾಲಮತಿ ವಿರಹದಲಿ ನೋಯಲು
ಕಾಳಗವನೊಡ್ಡುತ್ತ ಗೆಲಿದನು ಸೂರ್ಯ ತಿಮಿರವನು ॥೬೮॥

ಇನನುದಯದಲಿ ಮಜ್ಜನಾದಿಯ
ನನುಗೊಳಿಸಿ ಸಂಭಾಷಿಸುತ್ತಿರೆ
ಜನಕನಾಣತಿಯಿಂದ ಬಂದನು ಗುರುಶತಾನಂದ ।
ವಿನಯದಿಂ ರಾಜಾಲಯಕೆ ಬಾ
ರೆನಲು ಸೋದರರಿರ್ವರೊಡನಾ
ಮುನಿಪ ವಿಶ್ವಾಮಿತ್ರ ರಾಯನ ಕಂಡು ಹರಸಿದನು ॥೬೯॥

# ವಿಶ್ರಾಮ ೮

ಸೂ|| ತಿಣಿಕಿದುದು ನೃಪನಿಕರ ಶಂಕರ
ಧನುವನೆತ್ತಲು - ನಗುತ ಸುಲಭದೊ
ಳಿನಕುಲೋತ್ತಮ ಮುರಿದು ವರಿಸಿದ ದೇವಿ ಜಾನಕಿಯ ||

ಮುನಿಪ ವಿಶ್ವಾಮಿತ್ರ ಮುಂದಿರ
ಲನುಜ ಲಕ್ಷ್ಮಣ ಹಿಂದೆ ಬರುತಿರೆ
ದಿನಪ ಕುಲಮಣಿ ರಾಮಚಂದ್ರನು ನಗೆಮೊಗದಿ ನಡೆದು |
ಧನುಷ ಮಖಮಂಟಪಕೆ ಬಂದನು
ಜನಪರಿಗೆ ಮುನಿಗಳಿಗೆ ನಾರೀ
ಜನಕೆ ದರುಶನವಿತ್ತ ನಿಗಮಕೆ ಸಿಲುಕದಾ ಹರಿಯು ||೧||

ಹರಿಯ ನೋಳ್ಪಾತುರದಿ ಕಜ್ಜವ
ಮರೆತು ನರನಾರಿಯರು ಹೊಕ್ಕರು
ಹರನ ಕಾರ್ಮುಕ ಯಾಗಭವನವ ಮನದ ತವಕದಲಿ |
ದರುಶನವ ತಾನೀವ ಕರುಣಾ
ಶರಧಿ ನಿಗಮಸ್ತವಕೆ ನಿಲುಕದ
ಹರಿಯು ವೈದೋರಿದನು ನಲಿಯುತ ಯಾಗಮಂಟಪದಿ ||೨||

ಹೊಳೆವ ತಾರಾಗಣದ ಮಧ್ಯದಿ
ಬೆಳಗುತಿಹ ಶಶಿಯುಗಳದಂತಾ
ನಳಿನ ಸಖಕುಲ ಗಗನಮಣಿಗಳು ತತ್ಸಭಾಂಗಣದಿ |
ಸುಳಿವುದೋರಲು ನೃಪರ ಭುಜಬಲ
ವಳಿದು ರುದ್ರನ ಧನುವ ಭಂಗಿಸು
ತಿಳೆಯ ಮಗಳನು ವರಿಸುವಾಸೆಯು ತೊಲಗಿ ಮಸುಳಿಸಿತು ||೩||

ದುರುಳರಿಗೆ ಯಮನಂತೆ ನರರಿಗೆ
ಪರಮ ಸುಕುಮಾರನೊಲು, ಭಕ್ತರ
ನಾರಿವ ಪರಮಾತ್ಮನೊಲು, ಕನ್ಯಾಜನಕೆ ಮೋಹನನು |
ಅರಿವವರ ರುಚಿಯರಿತು ತೋರಿದ
ಹರಿಯು ಮಾಯಾಲೀಲೆ ಹೊಳೆದಿರ
ಅರಿತು ಹೊಗಳಿದರಂದು ಮುನಿಗಳು ತಮ್ಮ ಮನದೊಳಗೆ ||೪||

ಬರುವ ಮುನಿಯಂ ಕಂಡು ಜನಪತಿ
ಯೆರಗಿ ಹರುಷದೊಳರ್ಘ್ಯ ಮೊದಲಾ
ದುರುತರದ ಪೂಜೆಗಳ ರಚಿಸುತ ಕರೆದು ಕೂರಿಸಿದ |
ನರಪ ಸತಿಸಹಿತಾ ಕುಮಾರರ
ಪರಮ ಸುಂದರ ವಿಗ್ರಹಂಗಳ
ನಿರುತ ನೋಡುತ ತೋಷ ಪುಳಕಾಶ್ರುಗಳ ಸೂಸಿದನು ||೫||

ವೀರ ಸಿರಿಮುಡಿ ಮುರಿದ ಪಾರ್ಥಿವ
ರಾ ರಘೂತ್ತಮನನ್ನು ನೋಡುತ
ಪೌರುಷದ ಬಗೆಯರಿಯದಿರ್ದರು ಲಜ್ಜೆಯಿಂ ಬಾಗಿ |
ಧಾರುಣಿಯ ಮಗಳಿಮಗೆ ದುರ್ಲಭ
ವಾರುಗಾಣಿಸಿ ರುದ್ರಚಾಪವ
ಸೇರುವನು ರಘುರಾಮ ಸೀತಾರಮಣಿಯಂ ವರಿಸಿ ||೬||

ಕೆಲರಸೂಯೆಯೊಳವನ ಬೈದರು
ಕೆಲರು ಹೊಗಳಿದರವನ ಪ್ರೈಮೆಯು
ಕೆಲರು ನಮಗೇಕೆಂದು ಮೌನವ ಧರಿಸಿದರು ಭಯದಿ |
ಕೆಲರು ಮುಳಿವರು ಕೆಲರು ನಲಿವರು
ಕೆಲರು ಸೀತೆಗೆ ರಾಮನೇ ಪರಿ
ಫಲವಿದೇಕೆಂದೆನುತ ಮನದಾಸೆಗಳ ನೀಗಿದರು ||೭||

ಜನಕ ಸುಮುಹೂರ್ತದಲಿ ಮಗಳನು
ಧನುಷಯಾಗಾಲಯಕೆ ಕರೆಯಿಸೆ
ವನಜಮುಖಿಯರು ಜಾನಕೀದೇವಿಯನು ಸಿಂಗರಿಸಿ ।
ಅನುನಯದಿ ಕರೆತರಲು ಹಾಡುತ
ವನಜಲೋಚನೆ ನಡೆದು ಬಂದಳು
ಇನಕುಲೋತ್ತಮನನ್ನು ನೆನೆಯುತ ಭಕ್ತಿಭಾವದಲಿ ||೮||

ಶಾರದೆಯು ವಾಚಾಳಿ ಶಿವನಿಗೆ
ಪಾರುವತಿಯರ್ಧಾಂಗಿ ಮತ್ತಾ
ಮಾರಸತಿಯತಿ ದುಃಖಿತಳು ತನುರಹಿತ ಪತಿಗೂಡಿ ।
ಕ್ಷೀರಸಾಗರ ಕುವರಿ ಲಕ್ಷ್ಮಿಗೆ
ಘೋರ ವಿಷಸುರೆ ಸಹಭವರು ಮೇ
ಣಾರ ಕಾಣೆನು ಸೀತೆಯಂ ಪೋಲ್ವರನು ಲೋಕದಲಿ ||೯||

ಪರಮಕಾಂತಿ ಪಯೋದಧಿಯ ಸೌಂ
ದರ್ಯ ಕೂರ್ಮನ ಮೇಲೆ ಶೋಭಾ
ಹರುಷ ವಾಸುಕಿ ಕಟ್ಟಿ ವರಶೃಂಗಾರ ಮಂದರನ ।
ಇರಿಸಿ ಮುದದಿಂ ಮನ್ಮಥನೆ ನಿಜ
ಕರಕಮಲದಿಂ ಕಡೆಯಲಾ ಪಯ
ಶರಧಿಯಲಿ ಸುಖಮೂಲ ಸುಂದರಿ ಲಕ್ಷ್ಮಿಯುದಿಸುವಳು ||೧೦||

ಅಂತೊಗೆದ ಸಿರಿದೇವಿ ರೂಪಕ
ನಂತಮಡಿ ಮಿಗಿಲೀ ಧರಾತ್ಮಜೆ
ಗಿಂತ ನಿರ್ಮಲ ಸಾಧುರೂಪಾರ್ಗುಂಟು ಲೋಕದಲಿ ।
ಸಂತಸದ ಖನಿ ಸಂತ ಭಕ್ತರ
ಚಿಂತನೆಯ ಚಿನ್ಮೂರ್ತಿ ರಾಘವ
ನಂತರಂಗದದೇವಿ ನಾರೀರೂಪಕುಲ ಸೂರ್ಯ ||೧೧||

ಚತುರೆಯರು ಕರೆತರುವ ಸೀತೆಯು
ನತಿಮುದದಿ ಹಾಡುತ್ತ ಚಾಪ
ಕ್ರತುವ ಮಾಡುವ ನಿಲಯ ಸೇರ್ದರು ಮಂದಗಮನದಲಿ ।
ನುತಗುಣರು ಸ್ತುತಿಸಿದರು ವರಿಸುವ
ಮತಿಯ ಮರೆತರು ಮನಕೆ ಭಕ್ತಿಯ
ಗತಿಯ ಕಾಣಿಸಿ ಕರವ ಜೋಡಿಸಿ ನಮಿಸಿದರು ಮನದಿ ॥೧೨॥

ಧರಿಸಿ ರತುನಾಹಾರ ಪದಕವ
ನುರುತರಾಭರಣಗಳಲೊಪ್ಪುತ
ಲಿರಿಸಿ ಕತ್ತುರಿ ತಿಲಕ ಲಕ್ಷ್ಮಿಯ ಜರೆವ ಕಾಂತಿಯಲಿ ।
ಬರುತಿರಲು ಗಜಗಮನೆ ನಿಜ ಮೈ
ಮರೆತು ಸಕಲರು ಲೋಕಮಾತೆಗೆ
ಶಿರವ ಬಾಗುತ ನಮಿಸಿದರು ಭಯಭರಿತ ಭಕ್ತಿಯಲಿ ॥೧೩॥

ಮೊಳಗೆ ದುಂದುಭಿವಾದ್ಯ ಬರ್ದಿಲ
ರೊಲಿದು ಸುರಿದರು ಕುಸುಮವರ್ಷವ
ನಳಿನಮುಖಿಯರು ಹಾಡೆ ರಂಭಾದಿಗಳು ನರ್ತಿಸಲು ।
ಹೊಳೆವ ಮುಖಚಂದ್ರಮನ ಕಾಂತಿಯ
ವೆಳಗ ಬೀರುತ ತೊಳಪ ರತುನಾ
ವಳಿಯ ಕಿಂಕಿಣಿರವದಿ ಬಂದಳು ಪಿಡಿದು ಮಾಲೆಯನು ॥೧೪॥

ಬಂದು ಲಜ್ಜಾಭರದ ಭಾರದಿ
ಮುಂದಿರುವ ನೃಪಸುತರ ನೋಡದೆ
ಸಿಂಧುಶಯನನನರಸಿದಳು ಸೀತಾರಮಣಿ ನಲಿದು ।
ಇಂದುಮುಖ ಮಣಿವಿಸ್ತರದೊಳಿರೆ
ಮಂದಹಾಸದಿ ನಿರ್ಧನಗೆ ನಿಧಿ
ಬಂದೊದಗಿದೊಲು ಹಿಗ್ಗಿದಳು ರಘುವರನ ನೋಡುತಲಿ ॥೧೫॥

ನಿಲಿಸಿದಳು ರಘುವರನ ಮೂರ್ತಿಯ
ನಲಿದು ಹೃದಯದಿ ಹಿಗ್ಗಿ ರಾಮನ
ಸುಳಿವುದೋರಲು ಕೋಟಿ ಮನ್ಮಥರೂಪ ಧಿಕ್ಕರಿಸಿ ।
ಒಲಿದು ಕೊಂಡಾಡಿದರು ಸೀತೆಯ
ಚೆಲುವ ನರನಾರಿಯರು ರಾಯನ
ಛಲವ ಬಿಡಿಸೆಂದೊರಲಿದರು ಕಾಮಾರಿಯನು ಬೇಡಿ ॥೧೬॥

ದಿನಪ ವಂಶೋದ್ಭವನು ದಶರಥ
ತನಯ ಮೇಘ ಶ್ಯಾಮಸುಂದರ
ನನಘ ಮಹಿಮಾರ್ಣವನು ವೀರನು ಸಾಧುಗುಣಯುತನು ।
ಜನಕಸುತೆಗೊಪ್ಪಿಹನು ವಿನಯದಿ
ಜನಪ ವೈವಾಹವನು ಮಾಡಲಿ
ಧನುವನೆತ್ತುವ ಕಾರ್ಯವಿನ್ನೇಕೆಂದುದಾ ಸಭೆಯು ॥೧೭॥

ವಂದಿಮಾಗಧವೃಂದ ಹೊಗಳಿದು
ಬಂದು ಬಿರುದಾವಳಿಯ ಭೂಪತಿ
ವೃಂದ ಕೇಳ್ವುದು ಜನಕರಾಯನ ರಪಣಮಂ ಸಾರಿ ।
ಬಂದಿಹಿರಿ ವೀರಾಧಿವೀರರು
ಸುಂದರಿಯ ಬಯಕೆಯಲಿ ಮೊದಲೊಳ
ಗಿಂದುಮೌಳಿಯ ಧನುವ ಮರಿಸಿರಿ ವಿಜಯಸಿರಿಯೊಡನೆ ॥೧೮॥

ಭೂಪ ಭುಜಬಲ ಶಶಿಗೆ ರುದ್ರನ
ಚಾಪರಾಹು ವಿದೇಹನರಪತಿ
ಚಾಪಮುರಿದರಿಗೀವ ಪುತ್ರಿಯಕರವ ತಳುವದೆಯೆ ।
ಭೂಪವಂಶವಿಭಾಡ ರಾವಣ
ನೀ ಪುರಾರಿಯ ಧನುವನೆತ್ತಲು
ತೂಪಿರಿದು ಮೈಯೊಡೆದು ಕೆಡೆದನು ಭೂಮಿಯಲಿ ಹೊರಳಿ ॥೧೯॥

ಏಳಿ ವೀರೋತ್ತಮರೆ ಕೀರ್ತಿವಿ
ಶಾಲಮತಿಗಳೆ ರುದ್ರಚಾಪವ
ಲೀಲೆಯಿಂದೆತ್ತುತಲಿ ಮುರಿದೊಡೆ ನಿಮಗಹುದು ಕೀರ್ತಿ ।
ಏಳುತೀ ಧನುವೆತ್ತಿ ಭಂಗಿಸಿ
ನೀಲಲೋಚನೆ ಕರೆದ ಜಯಮಣಿ
ಮಾಲೆ ಧರಿಸಿದ ರಾಜಪುತ್ರನೆ ಧನ್ಯನೀ ಜಗದಿ ॥೨೦॥

ಕೇಳಿದರು ಜನಕ ಪ್ರತಿಜ್ಞೆಯ
ತಾಳಿ ರೋಷಾಗ್ನಿಯನು ಚಾಪವ
ಚಾಳಿಸಲು ಪಲ್ಗಡಿದು ಭುಜಗಳ ಹೊಯ್ದು ಶಿರನೆಗಹಿ ।
ನೀಲಲೋಚನೆ ರೂಪವೊಂದೆಡೆ
ಕಾಲರುದ್ರನ ಚಾಪವೊಂದೆಡೆ
ಮೇಲೆ ರಾಮನ ಬರವು ಮುರಿದುದು ರಾಯಭುಜಬಲವ ॥೨೧॥

ವೀರವಂಶಘರಟ್ಟ ರಾಜಕು
ಮಾರ ಕಂಠೀರರವರು ಕಾರ್ಮುಕ
ಕೇರಿಸಲು ಹೆದೆ – ಮುಗ್ಗುರಿಸಿದರು ಶೋಣಿತವಕಾರಿ ।
ಧಾರುಣಿಯ ನೃಪವರ್ಗವನು ಕಾ
ಮಾರಿ ಕಾರ್ಮುಕ ಜಯಿಸೆ ಲಜ್ಜಾ
ಭಾರದಲಿ ನಿಜಪೀಠ ಸಾರ್ದರು ಮೌನಮುದ್ರೆಯಲಿ ॥೨೨॥

ಅರಸುಗಳ ಭುಜಲಕ್ಷ್ಮಿ ತೊಲಗಿರೆ
ಧರೆಯ ಕಚ್ಚಿತು ಚಾಪವಲುಗಿಸ
ಲರಿಯದಾ ಪಾರ್ಥಿವರು ಜಾರಿದರಿಳಿದು ತಲೆವಾಗಿ ।
ಹರನ ಚಾಪದ ತೊಡಕು ಮೇಣಾ
ಧರಣಿಜಾತೆಯ ಮೋಹ, ಬಲಹೀ
ನರಿಗೆ, ನಮಗೇಕೆನುತಲಿರ್ದರು ಮತ್ತುಳಿದ ನೃಪರು ॥೨೩॥

ಮತ್ತೆ ಸಾಗಿದರೊಟ್ಟು ಗೂಡುತ
ಹತ್ತುಸಾವಿರ ಮಕುಟವರ್ಧನ
ರೆತ್ತಿ ಕೈಕಾಲಿರುಕಿ ಚಾಪದ ಮೇಲೆ ಕೆಡಹುತ್ತ ।
ಉತ್ತಮದ ಹದಿಬದೆಯು ಕೆಣಕುವ
ಮತ್ತ ಕಾಮುಕನಂತೆ ಬಿದ್ದರು
ಕತ್ತಲಿಕ್ಕಿತು ಸೆರೆಯು ಸಿಕ್ಕಿತು ಜೀವತಳಮಳಿಸಿ ॥೨೪॥

ಉಡುಗಿದುದು ಭುಜಶಕ್ತಿ ಕಾರ್ಮುಕ
ಮಿಡುಕದಾದುದು ಮೇಲುಸಿರಿನಿಂ
ನಡುಗಿ ಚಾಪದ ತೊಡಕಬಿಟ್ಟರು ಘಾಸಿಯಾಗುತಲಿ ।
ಅಡಗಿಸುತ ಕರತಲದಿ ಮೊಗವನು
ನಡೆದು ಪೀಠವ ನೆಮ್ಮಿ ಕುಳಿತರು
ಪಡೆದು ವೈರಾಗ್ಯವನು ಮೋಹವ ತೊಡೆದು ಮನದಿಂದ ॥೨೫॥

ನೋಡಿ ಮಿಥಿಲಾಧಿಪತಿ ವೀರರು
ಪಾಡಳಿದು ಕುಳ್ಳಿರಲು ಖತಿಯಲಿ
ಬಾಡಿದುದು ವಿಕ್ರಮವು ಶಿವಧನುವಿದಿರಿನಲಿ ನಿಮಗೆ ।
ಬೇಡ ನಿಮಗೀ ಚಿಂತೆ ಚಾಪದ
ಜಾಡನರಿಯಿರಿ ಹೆಣ್ಣ ಹರಿಬದ
ಮೋಡಿಯೇತಕೆ ಬಾಹುಬಲ ಬರಡಾಯ್ತು ಹೋ ಯೆಂದ ॥೨೬॥

ಧನುವ ಭಂಗಿಸಿ ಸತಿಯ ವರಿಸುವ
ಮನದಿ ಸುರಮಾನವರು ಕಿನ್ನರ
ದನುಜ ವಿದ್ಯಾಧರರು ವೀರಕ್ಷತ್ರ ಭೂಮಿಪರು ।
ವಿನುತ ವಿಕ್ರಮ ಭುಜರು ಬಂದೀ
ಧನುವ ಕಂಡಿರಿ ಮೌನ ತಾಳ್ದಿರಿ
ನೆನಹು ಮರೆತಿರಿ ಶಕ್ತಿ ಪೊಳ್ಳಾಯ್ತೆಂದನಾ ಜನಕ ॥೨೭॥

ಅವನಿಯೊಳು ವಿಧಿ ಸೃಜಿಸಲಿಲ್ಲವೆ
ಋಷಿಯಮುಗಳಿಗೆ ಪತಿಯ ಮತ್ತೀ
ಶಿವನ ಕಾರ್ಮುಕ ಪಿಡಿವ ವೀರನು ಜಗದೊಳಿನ್ನಾರು ?।
ಅವನಿ ಶೂರಾಭಾವ ಮಾಗಿರ
ಲವನಿಜೆಯ ವೈವಾಹನಿಂದುದೆ
ಸವರಿದೆನೆ ಪುಣ್ಯಗಳನೆಂದಾ ಜನಕ ಖತಿಗೊಂಡ ॥೨೮॥

ಕೆರಳಿದನು ಸೌಮಿತ್ರಿ ರಾಮನ
ಬೆರಳ ಸನ್ನೆಗೆ ಸೋತು ನುಡಿದನು
ತರಣಿ ಕುಲದರಸನಿರೆ ಶೂರಾಭಾವವೇ ಲೋಕ ।
ಮುರಿವೆ ನಾನೀ ಧನುವ ಸುಲಭದಿ
ಕರುಣದಿಂದಾಣತಿಯನಿತ್ತೊಡೆ
ಹರನ ಕಾರ್ಮುಕವೆತ್ತ ಮತ್ತೀ ಬಾಹುಬಲವೆತ್ತ ॥೨೯॥

ಮುರಿಯದಿದ್ದೊಡೆ ಧನುವ–ಕಾರ್ಮುಕ
ಶರವ ಮುಟ್ಟೆನು ಮುಂದೆ ರಘುಕುಲ
ಸರಸಿರುಹ ನೀನಿರಲು ಜನಕನ ಭಂಡ ನುಡಿಯೇಕೆ ?।
ಬೆರಳೊಳೆತ್ತುತ ನೂರುಯೋಜನ
ತಿರೆಯೊಳೈದುವೆ ಕೊಡು ಕೊಡಾಣತಿ
ಬರಡುಬಿಲ್ಲನು ಮುರಿವೆನೆಂದನು ಝಡಿದು ಲಕ್ಷ್ಮಣನು ॥೩೦॥

ನಡುಗಿದುದು ಕುಲಶಿಖರ ದಿಗ್ಗಜ
ಕಡುಗಿ ವ್ಯೆಮರೆತಿರಲು ಪೌರುಷ
ವಡಗಿ ಕುಳಿತರು ಮಿಕ್ಕರಾಯರು ಮೌನಮನದಿಂದ ।
ಪೊಡವಿಸುತೆ ಮೊಗವರಳಿ ರಘುವರ
ಮೃಡನ ಚಾಪವನೆತ್ತಿ ಕರವನು
ಪಿಡಿವನೆಂಬಾತುರವ ಪಡೆದಳು ಜಯುವ ಕೋರಿದಳು ॥೩೧॥

ಹರುಷವಮಾದುದು ಮುನಿಗೆ ತರಳನ
ಬೆರಳ ಸನ್ನೆಯೊಳೊಲಿದು ಕೂರಿಸಿ
ತರಣಿಕುಲ ಪಂಕೇಜ ಸೂರ್ಯನ ಸಿರಿವೊಗವ ನೋಡಿ ।
ಧರಣಿಜೆಯ ಪರಿತಾಪ ನೀಗಿಸು
ಹರನ ಕಾರ್ಮುಕವೆತ್ತಿ ಭಂಗಿಸಿ
ಸಿರಿಯ ಕರವಿಡಿಯೆಂದ ವಿಶ್ವಾಮಿತ್ರ ಮುನಿರಾಯ ||೩೨||

ಗುರುಚರಣಕಭಿನಮಿಸಿ ಮೆಲ್ಲನೆ
ಹರಿಯಪೀಠವ ಬಿಟ್ಟು ನಿಂದನು
ಶಿರವ ಬಾಗಿಸಿ ಮುಗುಳು ನಗೆಯಿಂ ನೋಡಿದನು ಸಭೆಯ ।
ಗಿರಿಯನೇರುವ ಸೂರ್ಯನೊಲು ರಘು
ವರನು ಕೇಸರಿಪೀಠ ಶಿಖರದೊ
ಳುರುತರದೊಳುದಿಸಿದನು ಜಯಜಯಯೆನಲು ಸುರನಿಕರ ||೩೩||

ಪಡೆಯುತಾಶೀರ್ವಾದ ಕಾರ್ಮುಕ
ದೆಡೆಗೆ ಬಂದನು ರಾಮ ನೆನೆದನು
ಮೃಡನಪದಗಳ ದೇವ–ಮುನಿ ಚರಣಗಳ ಸ್ಮರಿಸುತ್ತ ।
ಕಡೆಗೆ ಗುರುವಂ ನೋಡಿ ದಶರಥ
ನಡಿಗಳಿಗೆ ನಮಿಸುತ್ತ ತುತಿಸಿದ
ಮೃಡಸುತನ ನಾಮಗಳ–ನೋಡಿದ ಪರಶಿವನ ಧನುವ ||೩೪||

ತಂದೆತಾಯ್ಗಳ ಸೇವೆಗೈದಿರೆ
ವಂದಿಸಿದೆನಾದೊಡೆಯು ಗುರುಪದ
ವಿಂದು ತನ್ನೊಳು ಸುಕೃತಮಿರ್ದೊಡೆ ರುದ್ರಧನುವೊಲಿಮ ।
ಕುಂದಪುಷ್ಪದ ನಾಳದೊಲು ಮುರಿ
ವಂದವನು ನೃಪಜನಕ ನೋಡಲಿ
ಯೆಂದು ಬಲವಂದೆರಗಿ ಕೈ ನೀಡಿದನು ಕಾರ್ಮುಕಕೆ ||೩೫||

ತರಳೆಯರು ತೋರಿದರು ರಾಣಿಗೆ
ಹರನ–ಬಿಲ್ಲನು ತೊಡುವ ರಾಮನ
ಪರಿಯನರಿಯದೆ ಮನದೊಳಾತುರಗೊಂಡಳಾದೇವಿ |
ಪರಮ ಭುಜಬಲ ವಿಕ್ರಮರನೀ
ಹರನ ಕಾರ್ಮುಕ ಸೋಲಿಸಿತು ಕಿರು
ವರೆಯನೀ ಸುಕುಮಾರಗೊಲಿವುದೆಯೆಂದಳಿಂದುಮುಖಿ ||೩೬||

ರಾವಣನ ಬಾಣಾಸುರನ ಭೂ
ಪಾವಳಿಯ ಧನು ದಿಂಡುಗೆಡೆದುದು
ಭಾವಿಸಲು ರಾಮಂಗುಮಸದಳವೀ ಮಹಾಚಾಪ |
ಈ ವನಜಮುಖನೆತ್ತುವನೊ ಸೀ
ತಾವಧುವ ವರಿಸುವನೊ ಶಿವಶಿವ
ದೇವಿ ಸುಕೃತವನರಿವರಾರೆಂದಳು ಸುಲೋಚನೆಯು ||೩೭||

ವನಧಿಯಾಪೋಶನವ ಮಾಡಿದ
ಮುನಿಯು ಕಲಶಜನೆತ್ತ ಮೇಣಾ
ವನಧಿಯೆತ್ತಲು, ರವಿಯ ಬಿಂಬವ ನೋಡೆ ಕಿರಿದಹುದು |
ಮಿನುಗಲುದಯಾಚಲದಿ ಮೂಜಗ
ವನು ಮನೋಹರವಾಗಿ ಬೆಳಗುವ
ದಿನಪಕುಲಮಣಿ ಬಾಲನಾದೊಡೆ ಶಕ್ತಿ ಕಿರಿದಹುದೆ ! ||೩೮||

ಸುಲಭರೇಂ ಹರಿಹರವಿರಿಂಚಿಗ
ಳೊಲಿವರಲ್ಲವೆ ಸುಲಭಮಂತ್ರಕೆ
ಸುಲಭರೇಂ ಸುರವರರು ಮಂತ್ರಕೆ ಸಿಲುಕರೇನೊಲಿದು |
ಕಲಭ ಮದಿಸಿರಲೇನು ಮಾವುತ
ಸುಲಭದಿಂದಂಕುಶದಿ ನಡೆಸನೆ
ಬಲವ ತೋರುವ ತರಳನೆಂದರು ಸಕಲವನಿತೆಯರು ||೩೯||

ಹರುಷವಾಡಿತು ಮನದ ಸಂದೆಗ
ಮುರಿಯೆ ರಾಮಪ್ರೀತಿಯುದಯಿಸೆ
ಧರಣಿ ಜಾತೆಗೆ ದುಃಖವೋಡಿತು ರಾಮಬಲವರಿತು ।
ಹರಸತಿಯು ಪದಪಂಕರುಹಯುಗ
ವರವ ನೆನೆದಳು ರಾಮಚಂದ್ರನ
ಚರಣಕಮಲವ ಭಜಿಸಿದಳು ಸೀತಾರಮಣಿ ಮನದಿ ॥೪೦॥

ಮಾಡಿ ಮಾನಸಪೂಜೆ ಜಾನಕಿ
ಬೇಡಿದಳು ಪಾರ್ವತಿಯ ವಿನಯದಿ
ಕಾಡಿದಳು ಗಣಪತಿಯ ರುದ್ರನ ಕರುಣ ಭಿಕ್ಷೆಯನು ।
ನೀಡೆನುತಲೆರಗಿದಳು ಭಕ್ತಿಯ
ಜೋಡು ತೊಟ್ಟಳು ರಘುವರಗೆ ಜಯ
ಬೇಡಿ ನಿಂದಳು ಪಿತನ ಶಪಥಕೆ ಮರುಗಿ ಕಂದಿದಳು ॥೪೧॥

ಸಚಿವರಿಗೆ ಮತಿಯಿಲ್ಲ ಮೌನಿಗ
ಳುಚಿತವರಿತವರಲ್ಲ ಮಾಡಿದ
ವಚನವೆಂತೆಂದರಿಯ ಜನಪತಿ ಮುಂದೆ ಗತಿಯೆಂತೊ ?।
ಶಚಿಯರಸನಾಯುಧವ ಪೋಲ್ಗಳೆ
ವಚಲಶಕ್ತಿಯ ಖನಿಯು ನರಪತಿ
ನಿಚಯ ಭೀಕರಚಾಪ ರಾಮನ ಬಲಕೆ ಮಣಿಯುವುದೆ ! ॥೪೨॥

ಪರಮಪಾವನ ರುದ್ರಚಾಪವೆ
ನರಪರಲಿ ನೀ ತೋರು ಶಕ್ತಿಯ
ಸರಳೆ - ಕುಸುಮಶರೀರ ರಾಮಗೆ ಹಗುರುವಾಗೆಂದು ।
ತರಳೆ ಬಹುಪರಿಯಿಂದ ಜಾನಿಸಿ
ಮರುಗಿ ನಿಮಿಸವ ನೂರುಯುಗಗಳ
ತೆರದಿ ಕಳೆಯುತಲಿಹಳು ರಾಮಗೆ ಜಯನ ಬಗೆಯುತ್ತ ॥೪೩॥

ಸೀತೆಯಾತುರವರಿತು ರಪಣಕೆ
ಸೋತು "ರಘುಪತಿ ವರಿಸದಿದ್ದೊಡೆ -
ಮಾತುಮುರಿದೊಡೆ ಜೀವತೊರೆಯುವೆ "ನೆಂಬ ಪಣವರಿತು |
ಮಾತನಾಡದೆ ಗುರುವ ವಂದಿಸು
ತಾತುರದೊಳೀಕ್ಷಿಸಿದ ಚಾಪವ
ಭೂತಲವು ನಡುಗಿದುದು ಕಮಠನ ಧೈರ್ಯ ಜಾರಿದುದು ||೪೪||

ಮನದಿ ನಮಿಸಿದ ಗುರುವ ಮತ್ತಾ
ಧನುವ ಸುಲಭದೊಳೆತ್ತಿ ಹೊಳೆವುತ
ಮಿನುಗೆ ಚಾಪವ ಬಾಗಿಸಲು ರಂಜಿಸಿತು ಕರಪುಟದಿ |
ಧನುವನೆತ್ತಿದ ಬಗೆಯನರಿಯರು
ಧನುವ ಬಾಗಿಸಿ ಹೆದೆಯನೇರಿಸೆ
ಚಣದೊಳೆರಡಾಗುತ್ತ ಮುರಿದುದು ಘೋರನಿಸ್ವನದಿ ||೪೫||

ಸರುವ ದೆಸೆಯೊಳು ಭೀತಿ ತುಂಬಿತು
ಮುರಿದ ನಿನದಕೆ ರವಿಯ ತೇಜಿಗ
ಳಿರದೆ ನಿಜಮಾರ್ಗವನು ಬಿಟ್ಟೋಡಿದುವು ದೆಸೆದೆಸೆಗೆ |
ಕಿರಿಚಿದವು ದಿಗ್ದಂತಿ ಕಮಠನು
ಮರೆತ ವೈಯನು ನಾಗನುರುಳಿದ
ಧರೆ ರಸಾತಲಕಿಳಿಯಿತೆಂಬೊಲು ತೋರ್ದುದಾಗಲ್ಲಿ ||೪೬||

ಸುರನರೋರಗ ದನುಜ ಮುನಿಗಳು
ಕರವ ಕರ್ಣದೊಳಿಕ್ಕಿ ನಡುಗುತ
ಧರೆಗೊರಗಿದರು ಮೂರ್ಛೆವೋದರು ಧನುನಿನಾದದಲಿ |
ಹರಿಯೆ ಶೀತಲವಾಯು ತಿಳಿಯುತ
ಹರನ ಕಾರ್ಮುಕ ಮುರಿದರವಮಂ
ದರಿತು ಸರ್ವರು ಭರದಿ ಜಯಘೋಷವನು ಮಾಡಿದರು ||೪೭||

ತೊಲಗಿದುದು ಭಯ ಹರುಷವುಕ್ಕಿತು
ಲಲನೆಯರು ಹಿಗ್ಗಿದರು ಜನಪತಿ
ಪುಳಕ ಜಲದೊಳಗದ್ದೆ, ರಾಣೀವಾಸವನಿತೆಯರು |
ಇಳೆಯ ಮಗಳನು ಹರಸಿ ಹೊಗಳಿದ
ರೊಲಿದು ಕೊಂಡಾಡಿದರು ಸುಕೃತವ
ಸುಳಿದುದಾ ರಘುರಾಮನಾಮವು ದೆಸೆದೆಸೆಯೊಳಂದು ||೪೮||

ಎರಡು ಭಾಗವ ಮಾಡಿ ಚಾಪವ
ಧರೆಯ ಮೇಲಿಳುಹಿದನು ರಾಘವ
ಸರುವ ದೇವಾದಿಗಳು ಸುಖವನು ಪೊಂದಿದರು ನೋಡಿ |
ಗುರುವು ವಿಶ್ವಾಮಿತ್ರರೂಪದ
ವರಪಯೋನಿಧಿಯಲ್ಲಿ ರಘುವರ
ನುರುತರ ಪ್ರೇಮಪಯ ತುಂಬುತ ತುಳುಕಿತಾಗಲ್ಲಿ ||೪೯||

ರಾಮಮೂರ್ತಿಯು ನೋಡಿ ಮುನಿಪಗೆ
ಪ್ರೇಮವಾರಿಧಿವುಕ್ಕಿ ಹರಿದುದು
ರೋಮಪುಳಕಿತನಾದ ಪರಿತೋಷಮನನಾಗಿ |
ರಾಮ ಮಂಗಳನಾಮ ಮಯಮಾ
ಯ್ತಾ ಮಹೀತಲ - ಸುರರು ಗಗನದಿ
ರಾಮಚಂದ್ರನ ಮೇಲೆ ಸುಮವರ್ಷವನು ಸುರಿಸಿದರು ||೫೦||

ವಿಧಿಯು ಮೊದಲಾದಖಿಳ ಸುರಗಣ
ಬುಧರು ವಿದ್ಯಾಧರರು ಖಚರರು
ಸಿದ್ಧಕಿನ್ನರ ನಾಗ ಮುನಿಗಳು ಬಂದು ನೋಡಿದರು |
ಪದುಳದಿಂ ದರ್ಶನವ ಮಾಡುತ
ಪದತಲದಿ ನೊಸಲಿಕ್ಕಿ ವಂದಿಸಿ
ಮುದದಿ ಸುರವನಿತೆಯರು ನರ್ತಿಸಿ ಗಾನಮಾಡಿದರು ||೫೧||

ಪಸರಿಸಿತು ಕಾಳ್ಗಿಚ್ಚಿನಂದದಿ
ವಸುಮತಿಯೊಳೀ ವಾರ್ತೆ ಕೈಗೂ
ಡಿಸಿದ ಸೀತಾ ವಾಂಛಿತವ ವಿಧಿಯೆಂಬ ನಿರ್ಘೋಷ |
ದೆಸೆದೆಸೆಗಳಲಿ ತುಂಬಿ ಜಯರವ
ವೆಸೆದು ಕಾರ್ಮುಕ ಭೇದರವಮುಡ
ಗಿಸಿತು, ಭಯವೋಡಿದುದು ಸಂತಸವೆಳಗು ಹೊಳೆದಿರಲು ||೫೨||

ವಂದಿಮಾಗಧರೊಲಿದು ಹೊಗಳಿದ
ರಂದು ರಾಮನ ಕೀರ್ತಿ ಜಗಕಾ
ನಂದವಾಗಲು ಜನಕ ಧನಕನಕಾದಿಗಳನಿತ್ತ |
ದುಂದುಭಿಯು ಕಹಳೆಗಳು ಭೇರೀ
ವೃಂದ ಮೊಳಗಲು - ಸೀತೆಯಿದಿರಲಿ
ನಿಂದು ವರನಾರಿಯರು ಗಾನವಮಾಡಿದರು ನಲಿದು ||೫೩||

ಮುನಿಶತಾನಂದಾಜ್ಞೆಯಲಿ ಸಖಿ
ಜನರು ಸೀತೆಯ ಮಂದಗತಿಯಿಂ
ದಿನಕುಲೋದ್ಭವನೆಡೆಗೆ ಕರೆತಂದರು ಸರಾಗದಲಿ |
ವನಜಹಸ್ತದಿ ಪಿಡಿದು ಮಾಲೆಯ
ಜನಕಸುತೆ ಹರಿಯನ್ನು ಕಾಣಲು
ತನುವ ಮರೆದಳು ಸೂರೆಗೊಟ್ಟಳು ಚಿತ್ತಪದತಳದಿ ||೫೪||

ಕರದ ಮಾಲೆಯ ಮರೆತು ರಾಮನ
ಚರಣಗಳ ನೋಡುತ್ತ ನಿಂದಿರ
ಲರಿತು ಸಖಿಯರು ಸೀತೆ–ರಾಮಗೆ ಮಾಲೆ ಸೂಡುತಲಿ |
ಭರದಿ ವರಿಸಿದಳೆಂದು ಪಾಡಲು
ಧರಣಿಸುತೆ ನಡುಗುತ್ತ ಮಾಲೆಯ
ಸಿರಿವರಗೆ ಹಾಕಿದಳು ಜಯಜಯನಾದ ಮೊಳಗುತಿರೆ ||೫೫||

ಜನಕಜೆಯು ಕರಮಾಲೆ ರಘುಪತಿ
ತನುವಲಂಕರಿಸಿರಲು ದುರ್ಜನ
ದನುಜ ಮೊದಲಾದವರ ಸೊರ್ಕಡಗಿದುದು ಲೋಕದಲಿ ।
ಇನಕುಲದ ಕೀರ್ತಿಗಳ ವಿಪ್ರರು
ವಿನಯದಿಂ ಕೀರ್ತಿಸಲು ಸಂತಸ
ಮನವತಾಳ್ದನು ಜನಕ ಹೊಂಪುಳಿಯೋದ ವೈಮರೆತು ॥೫೬॥

ಚರಣಸೋಂಕಲು ಶಿಲೆಯಹಲ್ಯಾ
ತರುಣಿಯಾದುದನರಿತು ಜಾನಕಿ
ಕೊರಳ ನವರತ್ನಗಳು ಸಿರಿಪದ ಸೋಂಕಲೇನಹುದೊ ?।
ಅರಿಯನೆಂದಾ ಸೀತೆ ಪದಯುಗ
ಕೆರಗದಿರೆ ಮನದೊಳಗೆ ನಕ್ಕನು
ಧರಣಿಜಾತೆಯ ಮಮತೆಯರಿಯುತ ರಾಮಚಂದ್ರಮನು ॥೫೭॥

## ವಿಶ್ರಾಮ ೯

ಸೂ॥ ಹರಧನುವ ಮುರಿದ ಧ್ವನಿಯನಾ
ಪರಶುರಾಮನು ಕೇಳಿ ಮಿಥಿಲಾ
ಪುರವ ಸಾರಲು ಗರ್ವಖಂಡನಗೈದ ರಘುರಾಮ ॥

ಫಾಲನೇತ್ರನ ಧನುವ ಮುರಿಯಲು
ಮಾಲೆಸೂಡಿದಳಾ ಧರಾತ್ಮಜೆ
ನೀಲಮೇಘಶ್ಯಾಮಸುಂದರನನ್ನು ವರಿಸಿದಳು ।
ಕೋಳುವೋದುದು ಮಿಕ್ಕ ಭೂಪರ
ಬಾಳು, ಕೆರಳಿತು ರೋಷವಹ್ನಿ
ಜ್ವಾಲೆ, ಜರೆದರು ಜನಪತಿಯ ಖತಿಯಿಂದ ಬಹುವಿಧದಿ ॥೧॥

ಹಿಡಿದು ಕಟ್ಟುವೆವೀ ಕುಮಾರರ
ಕಡಿದು ಬಲಿಯಿಕ್ಕುವೆವು ತಡೆದರ
ಪಿಡಿದು ಕೊಲ್ವೆವು ಜನಕ ನಿನ್ನೀಕುಲವ ಕಲಕುವೆವು ।
ಸುಡುಸುಡೀ ಛಲ ಬರಡು ಚಾಪವ
ಪುಡಿಯ ಮಾಡಿದೊಡೀ ಕುಮಾರಗೆ
ಕೊಡುವರೇ ಕನ್ನಿಕೆಯ ನಾವಿರಲೆಂದರಾ ನೃಪರು. ॥೨॥

ಹಿರಿಯರದನಾಲಿಸುತ ಬೈದರು
ಹರನ ಕಾರ್ಮುಕವೆತ್ತಲಾರದೆ
ತರಣಿಕುಲಸಂಭವನ ಜರೆದೊಡೆ ಪುಣ್ಯಹೀನವಲಾ ।
ತೊರೆದಹಂಕಾರಗಳ ರಾಮನ
ನಿರುಕಿಸಿರಿ ಮನದಣಿಯೆ ಹೊಗಳಿರಿ
ಪರಮ ಪುರುಷೋತ್ತಮನನೆಂದರು ಜರೆದು ಜನಪರನು ॥೩॥

ಮೂಡಿದುದು ಭಯ ನೃಪರ ಖಾಡಾ
ಖಾಡಿಯಲಿ ವನಿತೆಯರು ನಡುಗಿದ
ರೋಡಿದರು ಮರುಗಿದರು ರಾಯರ ಖಾತಿಯಲಿ ನೊಂದು ।
ನೋಡಿದಳು ಜನಕಸುತೆ ಭಯದಲಿ
ಬೇಡಿದಳು ಪಾರ್ವತಿಯ-ಸುನಯನೆ
ಬಾಡಿದಳು ದುಃಖದೊಳವಳ ಕರೆದೊಯ್ದಳರಮನೆಗೆ ॥೪॥

ಕೆರಳಿದನು ಸೌಮಿತ್ರಿ ಕಣ್ಗಳ
ಲುರಿಯ ಕಾರಿದ ನೃಪರ ಗರ್ವವ
ಮುರಿವ ಹದನನು ನೆನೆದ ಚಾಪವ-ಶರವ ಕೈಗೊಂಡು ।
ಹರಿಮೊಗವ ನೋಡಿದರೆ ಕೋಪವ
ಪರಿಹರಿಸಿ ನಗೆಮೊಗದಿ ಮೌನದಿ
ಗುರುಚರಣಕಭಿನಮಿಸಿ ರೋಷವನುಳಿದ ಲಕ್ಷ್ಮಣನು ॥೫॥

ಬೀಸಿದುದು ಬಿರುಗಾಳಿ ದಿಗ್ಗಜ
ಘಾಸಿಗೊಂಡುವು ಕೂರ್ಮನೊರಗಿದ
ರೋಷವಹ್ನಿಜ್ವಾಲೆ ಹೊಳೆದುದು ಭೂಮಿ ನಡುಗಿದುದು ।
ಸೂಸಿದುವು ಕಿಡಿ ವಿಲಯ ಮೇಘಗ
ಳಾ ಸಮಯದಿ ಕ್ಷತ್ರಕುಲಜರ
ವಿನಾಸಲಿನೆ ಯಮನಂತೆ ಭಾರ್ಗವರಾಮ ನಡೆತಂದ ॥೬॥

ಗಿಡುಗನುಪಟಳದಿಂದ ಕೋಳಿಗ
ಳಡಗುವಂತಡಗಿದರು ಸರ್ವರು
ಕೊಡಲಿರಾಮನ ಕಿಡಿಯ ಕೆಮ್ಮಾಸೆಗಳ ನೋಡಲ್ಕೆ ।
ನಡುಗಿದುದು ಕುಲಶಿಖರ ತರುಗಳು
ಕೆಡೆದುವಾ ಪುರದಲ್ಲಿ ಪಾರ್ಥಿವ
ರುಡುಗಿ ರಾಮನ ತೊಡಕು ತಮಗೇಕೆಂದು ಸಾರಿದರು ॥೭॥

ಪರಮವೈಷ್ಣವ ರುದ್ರಮಂತ್ರವ
ನೊರೆವುತಾ ಭೂಸುರನು ರೋಷೋ
ತ್ಕರುಷದಿಂ ನಿರುಕಿಸಿದ ಸಕಲಕ್ಷತ್ರವೀರರನು ।
ಉರಿಹೊಗೆಯ ಕೆಮ್ಮಾಸೆ ರುದ್ರನ
ಪರಿಯ ಕಾಣುತ ಭಯದೊಳಡಗಿತು
ನೆರೆದ ಭೂಪರ ಶೌರ್ಯ ಜನಪತಿ ಹೃದಯ ಕಲಕಿದುದು ॥೮॥

ಪಣೆಗೆ ಮಟ್ಟೆಯ ಬಳಿದು ರೌದ್ರಾ
ನನನು ರುದ್ರಾಕ್ಷಿಗಳ ಮಾಲೆಯ
ಮುನಿ ಮನೋವೇಗದಲಿ ಬಂದನು ಕೊಡಲಿಯನು ಪಿಡಿದು ।
ಕಣುಗಳಲಿ ಕಿಡಿಗಾರಿ ನಿಂದಿರೆ
ಜನಕ ಭಯದಿಂ ಕರೆದು ಸೀತೆಯ
ಮುನಿಯ ಚರಣದಿ ಕೆಡಹಲಾಶೀರ್ವದಿಸಿದನು ಮುದದಿ ॥೯॥

ಮುನಿಪ ವಿಶ್ವಾಮಿತ್ರನಾಜ್ಞೆಯೊ
ಳಿನಕುಲೋತ್ತಮರೆರಗಿದರೆ ಭೃಗು
ತನಯ ಹರಸಿದನವರ ಹೊಗಳಿದ - ಮತ್ತೆ ಮನ್ನಿಸಿದ ।
ಜನಪದಶರಥ ಕುವರರಿರ್ವರು
ಜನಕಜೆಯ ಕರವಿಡಿಯೆ ರುದ್ರನ
ಧನುವ ಭಂಗಿಸಿದಾತನೀ ರಘುರಾಮ ನೋಡೆಂದ ॥೧೦॥

ಕಿಡಿಯಕಾರುತ ರೋಷಭೀಷಣ
ಪಿಡಿದು ಕೊಡಲಿಯ ಜನಕರಾಯಗೆ
ನುಡಿದನೆತ್ತಣ ನೃಪರು ವೈಭವವೇನು ಪೇಳೆನಲು ।
ಪೊಡವಿ ಮಗಳನು ವರಿಸೆ ಬಂದಿಹ
ಪೊಡವಿಪರು, ರಘುವೀರ ಭಂಗಿಸಿ
ಮೃಡನ ಚಾಪವ ಗೆಲಿದ ಸೀತಾಕರವ ತಿಳಿಯೆಂದ ॥೧೧॥

ಮುರಿದ ಶಿವಕಾರ್ಮುಕವ ಕಾಣ
ಲ್ಕುರಿಯ ಕಾರುತ ಕಾಲಯಮನೊಲು
ದುರುಳ ನರಪತಿ ಜನಕನೆಲವೋ ಕುಲವನೊರೆಸುವೆನು ।
ಗರುವ ಮೂಡಿತೆ ನಿನಗೆ ಲೋಕದ
ಗುರುವಿಗಪಮಾನವನು ನೆನೆದೆಯ
ಮುರಿವೆನೈ ತೋರೆನಗೆ ಶೀಘ್ರದೊಳೆಂದ ಭೃಗುತನಯ ॥೧೨॥

ಪರಶುರಾಮನ ರೋಷವಹ್ನಿಯೊ
ಳುರಿದು ಭುಜಬಲ ಭೀತಿ ಮೊಳೆತುದು
ತರಣಿಕುಲಜರ ಕೊಲದೆ ಬಿಡನೆಂದುಳಿದ ನೃಪನಿಕರ ।
ಹರುಷಗೊಂಡುದು ಜನಕ ಮಾರು
ತ್ತರವ ನುಡಿಯದೆ ಮೌನದಿಂದಿರೆ
ಕಿರುನಗೆಯೊಳಾ ರಾಮನೆಂದನು ಭಾರ್ಗವನ ನೋಡಿ ॥೧೩॥

ಧನುವ ಮುರಿದವನಾನು ನಿನ್ನೀ
ವನಜಪದ ಸೇವಕನು - ಮುಟ್ಟಲು
ಧನುವೆರಡು ಹೋಳಾಯ್ತು ಕೋಪವಿದೇಕೆ ನಿನಗೆನಲು ।
ವಿನಯದಿಂ ಸೇವಿಸಲು ಸೇವಕ
ನೆನಿಸುವನು ನೀ ವಿನಯಹೀನನು
ಪಣೆಯಗಣ್ಣನ ಬಿಲ್ಲ ಮುರಿಯುತಲೆನಗೆ ಹಗೆಯಾದೆ ॥೧೪॥

ಗುರುವೆನಗೆ ಗಿರಿಜೇಶನಹಿತವ
ನರಿತರಿತು ನೀಗೈದು ಹಗಯೆನಿ
ಸಿರುವೆ ಮುರಿದವನಾವನಾಗಲಿ ಶತ್ರುವಿನ್ನೆನಗೆ ।
ತುರಿಸಿದನೆ ಫಣಿಶಿರವನಪ್ಪಿದ
ಮರಣ ಸಿಂಹವ ಕೆಣಕಿ ಜೀವವ
ತೊರೆದನವನಿನ್ನೇನೆನುತ ಕಿಡಿಯಾದ ಭಾರ್ಗವನು ॥೧೫॥

ಕೇಳಿದನು ಸೌಮಿತ್ರಿ ರೋಷ
ಜ್ವಾಲೆಯಿಂ ಪಲ್ಗಡಿದು ರಘುಕುಲ
ಮೌಳಿಮಣಿಯೊಳು ಸರಸವೇ ನಿನಗಿಂದು ವಿಪ್ರನಲಾ ।
ಬಾಲತನದಲಿ ಹಲವು ಬಿಲ್ಗಳ
ಬಾಳುಗೆಡಿಸಿರಲಾ ಸಮಯದಲಿ
ಕೇಳದಿಹ ಮುನಿ ಬಂದುದೇತಕೆ ಮುನಿಯುತೀಗೆಂದ ॥೧೬॥

ಹರನ ಶಿಷ್ಯನು ನೀನು ಪುರಹರ
ಚರಣ ಭಕ್ತಿಯದೇಸೋ ಮೇಣಾ
ಹರನ ಧನುವಿನೊಳೆಷ್ಟು ಮಮತೆಯೊ ಪರಶುಧರ ನಿನಗೆ ।
ಗುರುಧನುವ ಮುರಿದೊಗೆದನಗ್ರಜ
ನುರವಣೆಯು ನೀ ತಡೆಯಲಾಪೆಯ
ಪರಿಣತಿಯ ತೋರೆನಗೆ ಭಾರ್ಗವನೆಂದ ಸೌಮಿತ್ರಿ ॥೧೭॥

ತರಳನಾಡಿತದಿಂದ ಖತಿಗೊಂ
ಡರರೆ ನೃಪಬಾಲಕನೆ ತಿಳಿಯದೆ
ಸೊರಹದಿರು ಶಿವಚಾಪಕೆಣೆಯಹ ಚಾಪವಿನ್ನಿಹುದೆ ? ।
ಅರಿಯರೇ ಜಗವಿದಿತವಿದು ಸರು
ವರಿಗೆ - ಗಳಹದೆ ತೊಲಗು ಬಯಸದೆ
ಮರಣ ಮರೆಯಾಗೆಂದ ಕೋಪದೊಳೌಡುಗಚ್ಚುತಲಿ ॥೧೮॥

ಶಿವನ ಕಾರ್ಮುಕವೇನು ಮೇಣಿ
ನ್ನವನಿಯೊಳಗಿಹ ಮಿಕ್ಕ ಧನುವೇಂ !
ಶಿವನ ಕಾರ್ಮುಕವತಿ ಪುರಾತನವೆಂದು ನೀನರಿಯಾ ?
ಸವೆದ ಚಾಪವ ಸೋಂಕೆ ಮುರಿದುದು
ರವಿಕುಲೋತ್ತಮನೇನ ಮಾಡುವು
ದವನಿದೇವರು ಬೆಸಸಿರೆಂದನು ಲಕ್ಷ್ಮಣನು ನಗುತ ॥೧೯॥

ಎನ್ನ ನೀತಿಯನರಿಯೆ ಲಕ್ಷ್ಮಣ
ನಿನ್ನ ತರಳನು ಕೊಲೆನು ಕರುಣದೊ
ಳೆನ್ನ ಪಾರ್ಥಿವಕುಲದವಾನಲನೆಂದು ಮಃನಗಾಣು ।
ಎನ್ನ ಭುಜಬಲದಿಂದ ಪಾರ್ಥಿವ
ರುನ್ನತಿಯ ಮುರಿದಿಹೆನು ಕೊಡಲಿಯ
ಬಣ್ಣವರಿಯದ ಬರಡುಬಾಲಕ ತೊಲಗು ನೀನೆಂದ ॥೨೦॥

ಹೆತ್ತ ತಾಯ್ತಂದೆಯರ ದುಃಖದೊ
ಳೊತ್ತರಿಸದಿರು ಹಾಳುಹೊರುವುದು
ಮತ್ತೆ ಗಳಹಲು ಕಾರ್ತವೀರ್ಯನ ಪಾಡ ನೀನರಿಯಾ !।
ಸುತ್ತುತಿಪ್ಪತ್ತೊಂದು ಸಲ ಭೂ
ಪೋತ್ತಮರ ಶಿರವರಿದೆನಿದ ನೆನೆ
ಯುತ್ತ ಕೆಣಕದಿರೆನ್ನ ತೊಲತೊಲಗೆಂದ ಭೃಗುಸೂನು ॥೨೧॥

ಪರಮಪಾವನ ಹರನಕಾರ್ಮುಕ
ದಿರವ ಕೊಂಡಾಡುತ್ತ ಮರೆತೀ
ಪರಶುವನು ಹೊಗಳುತಿಹೆ, ರುದ್ರನ ಚಾಪಕಪಮಾನ ।
ಬರಿದೆ ಬಾಯ್ಬಡಿಯುತ್ತ ಹೊಗಳುವೆ
ಗುರುವಿಗಪಮಾನವನು ಮಾಡುವೆ
ಬರಡು ಚಾಪವೊ–ಪರಶುವೋ ನಾನರಿಯೆ ಹೋಗೆಂದ ॥೨೨॥

ಕೆಣಕಿಹರೆ ಸುರವಿಪ್ರಗೋವ್ಗಳ
ನಿನಕುಲೋತ್ತಮರಿನ್ನೆಬರ ನೀ
ಮುನಿಪ ಭೃಗುವರಕುಲಜ ನಿನ್ನಡಿಗೆರಗಿ ಬೇಡುವೆನು ।
ಧನು ಪರಶುಗಳನೊಗೆದು ಕೋಪವ
ಹನನ ಮಾಡುತ ಸತ್ವಗುಣವ
ನ್ನನಘ ಭಜಿಸೈ ರುದ್ರಗುರುವೊಲಿಯುವನು ನಿನಗೆಂದ ॥೨೩॥

ಗೆಲಿದ ಶಿವಧನು ಸತ್ವಗುಣದಲಿ
ಗೆಲುವನೀ ಗುಣದಿಂದ ನಿನ್ನನು,
ತಿಳಿಯದನ ನುಡಿಯೆಂದು ಪೊಳ್ಗಳೆಯದಿರು ನೀತಿಗಳ ।
ವಿಲಯರುದ್ರನ ಶಿಷ್ಯ ನಿನ್ನಡಿ
ಗಳಲಿ ಹೊರಳುವೆ ಮನ್ನಿಸೆನ್ನನು
ಛಲವ ಬಿಡು ನೀನೆಂದ ಲಕ್ಷ್ಮಣ ನಗುತ ಭೃಗುಸುತಗೆ ॥೨೪॥

ವಿಲಯ ಮೂರುತಿಯಂತೆ ಕೆರಳುತ
ಲೆಲೆಲೆ ವಿಶ್ವಾಮಿತ್ರ ಮುನಿವರ
ನುಳುಹಿರುವೆ ಬಾಲಕನ ಕೊಲ್ಲದೆ ನಿನ್ನ ಗುಣವರಿತು ।
ಛಲವ ನಿಲ್ಲಿಸು ಮತ್ತೆ ಗಳಹ
ಲ್ಕುಲವನೊರೆಸುವೆ ಮಂದಮತಿ ಗಾ
ವಿಲನ ಕೊಲದಿರೆನೆಂದ ಭಾರ್ಗವರಾಮ ಖಾತಿಯಲಿ ॥೨೫॥

ಮತ್ತೆ ದೂರದಿರೆನ್ನ ಕುಲಗಿಲ
ವೊತ್ತಮುಳಿಯದ ತೆರದೊಳೊರೆಸುವೆ
ನೆತ್ತ ವೋದರು ಬಿಡೆನು ಹರಿಹರವಿಧಿಯ ಮರೆವೊಗಲಿ |
ಕುತ್ತಿಗೆಯ ಕಳಚುವೆನು ದೇಹದ
ಪಿತ್ಥವಿಳಿಸುವೆ ನಿಲಿಸದೊಡೆ
ಕೆತ್ತಿ ನುಡಿವುದನೆಂದ ಪಾರ್ಥಿವ ಕುಲದವಾನಲನು ||೨೬||

ಹೊಗಳಿಕೊಂಬರೆ ಶಕ್ತಿಯುಳ್ಳರು
ಹೊಗಳುಭಟರಾರಿಲ್ಲ ಪೆರ್ವೆಯು
ಹೊಗಳಿಕೊಂಡರೆ ಬಾಹುವಿಕ್ರಮ ಮೊಳೆವುದೇಂ ಮತ್ತೆ ||
ಹೊಗಳಿಕೊಂಬುವ ಮಮತೆ ನಿನಗಿರ
ಲುಗುಳುಗುಳು ಕೀರ್ತಿಗಳನೆನ್ನನು
ಬೆಗಡುಗೊಳಿಸದು ಪರಶುಧರ ನುಡಿಯೆಂದ ಸೌಮಿತ್ರಿ |೨೭||

ಶೂರ ಸಮರಾಂಗಣದಿ ಶೌರ್ಯವ
ತೋರಿ ಬೆಳಗುವ–ಹೊಗಳು ಭಟ್ಟರ
ವೀರ ನುಡಿನುಡಿ ವಂದಿಮಾಗಧರೇಕೆ ಹೊಗಳುವೊಡೆ ||
ಗಾರುಗೆಡಿಸಿದುದಾಯ್ತು ಪಾರ್ಥಿವ
ವೀರರಂ ಪೂರ್ವದಲಿ ರಘುಕುಲ
ವೀರಗಿದಿರಾರಿಹರು ಗಳಹದಿರೆಂದ ಸೌಮಿತ್ರಿ ||೨೮||

ಎಲೆಲೆ ವಿಶ್ವಾಮಿತ್ರ ನಿನ್ನಿಂ
ದುಳಿದಿರುವನಿನ್ನೆವರ ಕುವರನ
ಛಲವ ಬಿಡಿಸಿಲ್ಲದಿರೆ ಯಮನಾಲಯವ ಕಾಣುವನು |
ಉಳಿದಿರುವ ಗುರುಋಣವ ಬಾಲನ
ತಲೆಯನುರುಳಿಸಿ ತೀರಿಸುವೆನಿ
ನ್ನಳಿದನಿವನೆಂದರಿದುಕೊಳ್ಳೆಂದೊರೆದ ಭಾರ್ಗವನು ||೨೯||

ಎಲೆ ಮುನಿಪ ತಾರದಿರು ಕೋಪವ
ನೊಲಿದು ತರಳನ ದೋಷವೆಣಿಸದೆ
ಸಲಹು ಸಾಧುಗಳಿದನು ಗಣಿಸರು ಹರಸು ಬಾಲಕರ |
ವಿಲಯರುದ್ರನ ಶಿಷ್ಯನೆಂಬುದ
ತಿಳಿಯನೀ ಸೌಮಿತ್ರಿ ನುಡಿದೊಡೆ
ಸೆಳೆಯುವರೆ ದಿವ್ಯಾಸ್ತ್ರ ಬಿಡು ತಡೆಯೆಂದ ಕೌಶಿಕನು ||೩೦||

ನಿನ್ನ ಶೀಲವನರಿಯುತುಳುಹಿದೆ
ನಿನ್ನು ಸೈರಿಪೆನೆಂತು ಗುರುಋಣ
ವನ್ನು ಸಲಿಸುವೆನಿವನ ಕೊರಳನು ಕಳಚಿ ಶೀಘ್ರದಲಿ |
ಎನ್ನ ರೋಷಜ್ವಾಲೆ ಬಲಿತುದು
ಬೆನ್ನನಟ್ಟಿತು ತರಳಗಾದುದು
ಮುನ್ನ ಮೃತ್ಯುಪ್ರೇಮ ವಿಶ್ವಾಮಿತ್ರ ನೋಡೆಂದ ||೩೧||

ಹರಿಯನೇ ಹಗೆಯೆಂದು ನೋಡುವ
ಪರಶುರಾಮನ ಕಂಡು ನಗುತಾ
ದರಿಸೆ ಕೌಶಿಕ ನಯದಿ ನುಡಿಸಿದ ರೋಷತಾಮಸನ |
ಮುರಿದು ಲಕ್ಷ್ಮಣನಾಗ ಕರೆತಾ
ಗುರುವ ಋಣಬೆಳೆದಿರಲು ಬಡ್ಡಿಯ
ಬರೆಸಿ ಋಣಮೂಲವನು ತೀರಿಸು ಕರೆ ಗುರುವನೆಂದ ||೩೨||

ಮುನಿಯ ಕೋಪವನರಿತು ರಘುವರ
ವಿನಯದಿಂ ನುಡಿಯುತಿರೆ ಭಾರ್ಗವ
ಕನಲಿ ಕೊಡಲಿಯನೆತ್ತಿ ಬರುತಿರಲೊರೆದ ಸೌಮಿತ್ರಿ |
ಧನುವಮುರಿದ ಮೇಲಿನ್ನು ಕೋಪವ
ನನಘಮಾಡಿದೊಡೇನು ಫಲ–ಛಲ
ವಿನಿತು ಮಾಳ್ಪರೆ–ಎನಗೆ ಮುನಿದೊಡೆ ಚಾಪ ಸರಿಯುಹುದೆ? ||೩೩||

ಕೆರಳಿ ಮುನಿ ರಘುಪತಿಯ ನೋಡುತ
ಕರೆದ ಯುದ್ಧಕೆ ಕೊಡಲಿ ತಿರುಗಿಸಿ
ಗಿರಗಿರನೆ ಕೋಪದಲಿ ಭಾರ್ಗವ ಸಮರಕನುವಾದ ।
ಅರೆನಗೆಯ ನೋಟದಲಿ–ಮುನಿವರ
ಶಿರವನೊಡ್ಡುವೆ ನಿನ್ನ ಪರಶುಗೆ
ಪರಮಶಿಷ್ಯರ ಕೊಲುವರೇ ಸಾಕೆಂದ ದಾಶರಥಿ ॥೩೪॥

ಕೊಡಲಿ ಬಿಲುಬಾಣಗಳ ಕಾಣಲು
ಝುಡಿದ ಪಾರ್ಥಿವ ವೀರನೆನ್ನುತ
ಹುಡುಗತನದಲಿ, ತಮ್ಮ ರೋಷವ ತಡೆದು ಕರುಣದಲಿ ।
ಪೊಡವಿಯಮರನೆ ನಿಜವನರಿತಿರ
ಲಡಿಗೆರಗಿ ಪೂಜಿಸುವನನುಜನು
ಕಡುತವಸಿ ನಿನಗೆಮಗೆ ಸಾಟಿಯೆ ಭುಜಪರಾಕ್ರಮದಿ ॥೩೫॥

ಕೆರಳಿ ರಾಮನ ನುಡಿಗೆ ರೋಷೋ
ತ್ಕರುಷದಲಿ ಖಳನಿನ್ನ ನಾಲಗೆ
ಯುರಿವುದನು ನೋಡುತಿರು ಪಾರ್ಥಿವಕುಲಕುಠಾರನಲಾ ।
ಧರೆಯನಿಪ್ಪತ್ತೊಂದು ಬಾರಿಗೆ
ಚರಿಸಿ ಭೂಭುಜಕುಲವ ಸವರಿದ
ಪರಶುವಿದು ನಿನಗಾಗಿ ಕಾದಿಹುದೆಂದ ಭೃಗಸೂನು ॥೩೬॥

ಸೆಣಸುವರೆ ಪಾರ್ಥಿವರು ಭೂಸುರ
ಜನಗಳಲಿ ನೀ ವಿಪ್ರನಾಗಿರ
ಲೆನಗೆ ಸಲ್ಲದು ಯುದ್ಧಮದರಿಂ ಮಣಿವೆ ಪದಯುಗದಿ ।
ರಣಭಯಂಕರನೆನಗೆ ಸಮಬಲ
ನೆನುವವೀರನದಾರು ಲೋಕದೊ
ಳಿನಕುಲೋನ್ನತರೆಮ್ಮನಂಜಿಸರಾರು ಹೇಳೆಂದ ॥೩೭॥

ನೋಡಿದನು ಭೃಗುರಾಮ ರಘುವರ
ನಾಡಿತಕೆ ತಲೆದೂಗಿ ದನುಜವಿ
ಭಾಡಗೆರಗುತ ಮನದಿ, ವೈಷ್ಣವಚಾಪ ನೀಡುತಲಿ ।
ನೋಡು ಶಿವಚಾಪದೊಲು ಮಣಿಯದು
ಹೂಡು ಬಾಣವ ಬಾಹುಬಲವನು
ನೋಡುವೆನು ತೊಡದಿರ್ದೊಡೀಗಳೆ ಕೊಲುವೆ ಕೇಳೆಂದ ॥೩೮॥

ಸೆಳೆದು ವೈಷ್ಣವ ಚಾಪ ವರೌರ್ವಿಯು
ಬಲಿದು ಲೀಲೆಯ ತೋರಲಾಕ್ಷಣ
ನಳಿನಪದಗಳ ಪಿಡಿದು ಹೊರಳಿದ ಪರಶುಧರನಾಗ ।
ಮುಳಿಸು ತೊಲಗಿತು ಭಕ್ತಿ ಮೂಡಿತು
ನಳಿನನಾಭನ ದಿವ್ಯ ಮೂರ್ತಿಗೆ
ಸೆಳೆದು ವೈಷ್ಣವ ಶಕ್ತಿಯಿತ್ತನು ಹರಿಯ ಹೊಗಳಿದನು ॥೩೯॥

ದೇವದೇವರಿಗೊಡೆಯನೆಂಬುದ
ಭಾವಿಸದೆ ತೆಪ್ಪೆಣಿಸಿದೆನ್ನನು
ತೀವಿದತಿಶಯದಿಂದ ನೋಡಿದೆ ಕರುಣವಾರಿಧಿಯೆ ।
ಶ್ರೀವರಾಂಘ್ರಿ ಸರೋಜಯುಗಳದಿ
ದೇವ ಜಯಜಯಯೆಂದು ಹೊಗಳುತ
ಪಾವನನು ಹೊರವಂಟ ಹರುಷದಿ ಬಡಗದಿಕ್ಕಿನಲಿ ॥೪೦॥

ಹರುಷ ಮೂಡಿತು ದುಃಖವೋಡಿತು
ನರಪತಿಗಳಾರ್ಭಟೆಯು ತಗ್ಗಿತು
ಸುರರು ದುಂದುಭಿವಾದ್ಯ ವೊಳಗಿದರಾಗ ಗಗನದಲಿ ।
ಸುರಿದು ಸುಮವರ್ಷವನು ಹಾಡುತ
ತರಳೆಯರು ಹರಸಿದರು ಹೊಗಳಲು
ಸರಸಿಜಾನನೆ ರಾಮಚಂದ್ರನ ಮೆಚ್ಚಿದಳು ಸೀತೆ ॥೪೧॥

# ವಿಶ್ರಾಮ ೧೦

ಸೂ|| ರಾಯದಶರಥ ನಡೆಯುತಂ ಭೋ
ಜಾಯುತಾಕ್ಷ ವಿವಾಹಕೋಸುಗ
ರಾಯಜನಕನ ಪುರವ ಹೊಕ್ಕನು ಸತಿಸುತರ್ವೆರಸಿ ||

ಪುರದಿ ಮಂಗಳವಾದ್ಯ ಮೊಳಗು
ತ್ತಿರಲು ಶೃಂಗರಿಸಿದರು ಮಿಥಿಲಾ
ಪುರದಿ ಗೃಹಗಳ ಕೇಳಿ ರಾಮವಿವಾಹವಾರ್ತೆಯನು |
ಸರಸಿರುಹ ವದನೆಯರು ಪಾಡುತ
ಹರುಷದಲಿ ಕೋಗಿಲೆಯ ದನಿಯಿಂ
ಹರಸಿ ಸೀತಾರಾಮಚಂದ್ರರ ನಲಿದರಂದಲ್ಲಿ ||೧||

ಮೃಡನಕಾರ್ಮುಕ ಭಂಗಮಾದುದು
ಕೊಡಲಿಕಾರನ ಗರ್ವಮುರಿದುದು
ಪೊಡವಿಪಾಲರ ದರ್ಪವಡಗಿತು ರಾಮನಿದಿರಿನಲಿ |
ಮಡುಹಿದನು ನೃಪಶೋಕವಹ್ನಿಯ
ಪೊಡವಿಸುತೆ ನೂಕಿದಳು ದುಃಖವ
ಪಡೆದುದೀ ಧರೆ ಸತತ ಸಂತೋಷವನು ವಿಜಯದಲಿ ||೨||

ಜನಕ ಕೌಶಿಕನಾಜ್ಞೆಯಿಂದಜ
ತನಯ ದಶರಥ ಸಾರ್ವಭೌಮಗೆ
ಜನಕಜಾ-ಶ್ರೀರಾಮ ಲಗ್ನೋತ್ಸವದ ಸಂಗತಿಯ |
ಅನುವಿನಿಂ ಬರೆದಿತ್ತು ದೂತರ
ನನಘನಟ್ಟಿದ ಪುರವನಿತ್ತಲು
ಘನವೆನಲು ಸಿಂಗರಿಸಿದರು ವಿಧವಿಧದಿ ಚಿತ್ರಗರು ||೩||

ಪರಮಸುಗುಣಾರ್ಣವನು ರಾಘವ
ಪರಮ ಸುಂದರಿ ಸೀತೆಯಿರ್ವರು
ಮೆರವ ಕೇಸರಿಪೀಠ ನಿರ್ಮಿತವಾಯ್ತು ಸಂಭ್ರಮದಿ ।
ಸಿರಿಯು ಮಿಥಿಲಾಪುರದಿ ನೆಲಸಲು
ಸುರಿದು ಸಂಪದಗಳನು ಕರೆದರು
ಸುರರು ಸುಮವರ್ಷವನು ದುಂದುಭಿವಾದ್ಯಗಳು ಮೊಳಗೆ ॥೪॥

ಜನಕನಟ್ಟಿದ ಚರರು ಪಯಣದೊ
ಳಿನಕುಲೋದ್ಭವ ನಗರಿ ಸೇರುತ
ಜನಪತಿಯ ದರ್ಶನವ ಪಡೆಯುತ ಕಾಣಿಕೆಗಳಿತ್ತು ।
ವಿನಯದಿಂ ಶುಭಲಗ್ನಪತ್ರವ
ಕನಕತಟ್ಟೆಯೊಳಿಟ್ಟು ನಿಂದಿರ
ಲನಘ ನೋಡುತ ರೋಮಪುಳಕಿತನಾದನಡಿಗಡಿಗೆ ॥೫॥

ದನುಜರಂ ಸದೆಬಡಿವ ವ್ಯಾಜದಿ
ಮುನಿಯು ಕಲ್ಯಾಣವನು ಬಗೆಯುತೆ
ಲಿನಕುಲವ ಬೆಳಗಿಸಿದ ತರಳರನೊಯ್ದು ಸಂಗಡದಿ ।
ತನಯ ಭಂಗಿಸಿ ರುದ್ರಕಾರ್ಮುಕ
ಜನಕನೊಡ್ಡಿದ ಪಣವಗೆಲ್ದನು
ಮುನಿಯ ಕಾರುಣ್ಯದಲಿ ನಡೆವುದು ರಾಮಕಲ್ಯಾಣ ॥೬॥

ಕರೆದು ದೂತರ ಕೆಲಕೆ ನೃಪನುಪ
ಚರಿಸಿ ಕಾಣಿಕೆಯಿತ್ತು ಮೃದುನುಡಿ
ಯೊರೆದು ಮಜ್ಜನ ಭೋಜನಾದಿಗಳಿಂದ ಸತ್ಕರಿಸಿ ।
ತರಳರಿರವಂ ವರ್ಣಿಸುತ್ತಿರೆ
ಪರಮ ಹರುಷದಿ ಕೇಳ್ವ ರಾಘವ
ಹರನ ಕಾರ್ಮುಕ ಮುರಿದ ಪರಿಯಂ ಕೇಳಿ ಹಿಗ್ಗಿದನು ॥೭॥

ದನುಜೆಯಂ ಸಂಹರಿಸಿ ಕೌಶಿಕ
ಮುನಿಯ ಯಾಗವ ಕಾಯ್ದು ಗೌತಮ
ಮುನಿಸತಿಯನುದ್ಧರಿಸಿ ಮಿಥಿಲಾನಗರಕೈತಂದು ।
ಧನುವಭಂಗಿಸಿ ಜನಕರಾಯನ
ಪಣವ ಗೆಲ್ದನು–ಪರಶುರಾಮನ
ವಿನಯದಲಿ ಖಂಡಿಸಿದ ಬಗೆಗಳ ಪೇಳ್ದರಾಚರರು ॥೮॥

ಪಸರಿಸಿದುದೀ ವಾರ್ತೆ ಪುರದಲಿ
ಕುಶಲೆ ಕೈಕೆ ಸುಮಿತ್ರೆಯರು ಬಂ
ದೊಸಗೆ ನುಡಿಯಿಂ ನಲಿದು ಕೊಂಡಾಡಿದರು ಸೇವಕರ ।
ಉಸಿರಲಮ್ಮದೆ ಹೊಗಳಿ ರಘುವರ
ನೆಸಕವನು ಮಿಗೆ ಕಾಣ್ಕೆಯಿತ್ತಯುತ
ಲೊಸೆದು ದಶರಥ ಭೋಜನಾದಿಗಳಿಂದ ಮನ್ನಿಸಿದ ॥೯॥

ಗುರುವಸಿಷ್ಠರ ಕರೆಸಿ ಪದಗಳಿ
ಗೆರಗಿ ಮಂಗಳಲಗ್ನದೊಸಗೆಯು
ನೊರೆಯೆ ಹೊಂಪುಳಿಯೋದನಾಮುನಿ ಹರುಷಲಹರಿಯಲಿ ।
ಪರಮ ಪುಣ್ಯಶ್ಲೋಕ ರಾಮನು
ಹರನ ಕಾರ್ಮುಕ ಮುರಿದು ಸೀತೆಯ
ವರಿಸಿ ಮೆರೆವನು ಲೋಕಕಲ್ಯಾಣವನು ಬಯಸುತಲಿ ॥೧೦॥

ಧನ್ಯ ನೀನೇ ಜಗದಿ ಸುತಸಂ
ಪನ್ನ ನೈದೋರಿದನು ಸಿರಿಪತಿ
ಯೆನ್ನುತಾಮುನಿ ಹೊಗಳಿದನು ದಶರಥ ನೃಪಾಲಕನ ।
ಪನ್ನಗಾಸನ ಹರಿಯ ಪೂಜಿಸು
ತುನ್ನತದಿ ದಾನಾದಿ ಸತ್ಕೃತಿ
ಯನ್ನು ಮಾಡಿದ ನೃಪತಿ ಗುರ್ವಾಜ್ಞೆಯಲಿ ನಲಿದೊಲಿದು ॥೧೧॥

ಪುರದ ನರನಾರಿಯರು ಹರುಷೋ
ತ್ಕರುಷದಲಿ ಸಿಂಗರಿಸಿ ಮನೆಗಳ
ಪರಿಮಳೋದಕ ತಳಿದು ಕನ್ನಡಿಕಳಶಗಳನಿಡಿಸಿ ।
ಪುರಮನೋಹರಮಾಗೆ ಕೇತನ
ಮೆರೆಯೆ ತೋರಣ ಕಟ್ಟಿ ಮಿರುಗುವ
ತೆರದಿ ಬರೆದರು ರಂಗವಲ್ಲಿಯ ಚಿತ್ರ ವೀಧಿಯಲಿ ॥೧೨॥

ಭರತ-ಶತ್ರುಘ್ನರನು ಕರೆಸುತ
ಕರಿತುರಗ ವಾಹನವ ತರಿಸಿ
ತ್ವರದಿ ರಾಮವಿವಾಹಕೋಸುಗ ತೆರಳಿರೆಂದೆನಲು ।
ಹರುಷ ಪುಳಕಿತರಾಗಿ ಸೋದರ
ವರರು ದಶರಥನೊಡನೆ ಮಿಥಿಲಾ
ಪುರದ ಪಯಣೋತ್ಸಾಹ ಮಾನಸರಾದರಾತುರದಿ ॥೧೩॥

ಕರಿತುರಗ ಪಾಯದಳ ಶತಸಾ
ವಿರದ ಸಂಖ್ಯೆಯ ಮೀರಿ ಹೊರಟಿರೆ
ವರವರೂಥವನೇರಿ ನರಪತಿ ಪಯಣಕನುವಾದ ।
ಗುರುವಸಿಷ್ಠನು ರಥವನೇರ
ಲ್ಕರಮನೆಯ ನಾರಿಯರು ಶಿಬಿಕೆಯ
ಹರುಷದಿಂದೇರಿದರು ಜಯಘೋಷದಲಿ ಹಿಗ್ಗುತಲಿ ॥೧೪॥

ವಂದಿಮಾಗಧ ಸೂತ ಭೂಸುರ
ವೃಂದ ಗುಣಗಾಯಕ ಪಸಾಯ್ತರು
ಸಂದಣಿಸಿ ಪಯಣದಲಿ ನಡೆದರು ಜನಕ ಪುರವರಕೆ ।
ವಂದಿಸುತ ಮನದಿಷ್ಟಮೂರ್ತಿಯ
ನಂದು ಗುರುಸಹಿತಾ ನೃಪಾಲನು
ಬಂದು ರಥವೇರಿದನು ಸಂಭ್ರಮದಿಂದ ನಡೆಸಿದನು ॥೧೫॥

ನಡೆದು ಪಯಣದ ಮೇಲೆ ಪಯಣದೊ
ಳಡಿಗಡಿಗೆ ರಾಮಾಮೃತವ ಸವಿ
ದೊಡಲ ಪಾವನಗೈದು ಬರುತಿರೆ ನೋಡಿ ಶುಭಶಕುನ |
ಪೊಡವಿಪತಿ ಹಿಗ್ಗುತಲಿ ರಥವನು
ನಡೆಸುವನು ಜವದಿಂದ ರಾಮನ
ನೆಡಬಿಡದೆ ನೆನೆಯುತ್ತ ನೋಳ್ಪಾತುರದ ಮನದಿಂದ ||೧೬||

ಬರುವ ದಶರಥನೆಂದು ಮಾರ್ಗದೊ
ಳುರುತರದಿ ಭವನಗಳ ನಿರ್ಮಿಸಿ
ಸರುವತರ ವಸ್ತುಗಳನಿರಿಸಿದ ಜನಕ ಸಂತಸದಿ |
ಪರಿಮಳೋದಕ ಪಕ್ವಫಲಗಳ
ನಿರಿಸಿ ಪಕ್ವಾನ್ನಗಳ ಮಾಡಿಸಿ
ತರತರದ ಭಕ್ಷ್ಯಗಳನಿರಿಸಿದನಾ ಗೃಹಂಗಳಲಿ ||೧೭||

ಕರಿತುರಗ ಮಣಿರಥವ ಭೂಷಣ
ವರರತುನ ಹೇಮಾದಿ ಭಂಡಿಯ
ಭರದಿ ಕಳುಹಿದ ವಸ್ತ್ರಜಾಲವ ದಾಸದಾಸಿಯರ |
ಕರೆತರಲು ಮರ್ಯಾದೆಯಲಿ ನೃಪ
ವರನ ರತುನಾಭರಣ ರಾಶಿಯ
ಹೊರಿಸುತೊಂಟೆಯ ಮೇಲೆ ಕಳುಹಿದ ಕೋಸಲಾಧಿಪಗೆ ||೧೮||

ಜನಕನನುಚರರೊಲಿದು ತಂದಾ
ಕನಕರತುನಾವಳಿಯನಿತ್ತರು
ವಿನಯದಲಿ ಜನಪತಿಯ ಕಾಣಿಕೆಯೆಂದು ನುಡಿವುತಲಿ |
ಅನುವಿನಿಂದಾ ವಸ್ತು ಜಾಲವ
ಜನಪ ಸ್ವೀಕರಿಸುತ್ತ ಯಾಚಕ
ಜನವ ತಣಿಸಿದ–ಜನಕದೂತರ ನುಡಿಸುತುಚಿತದಲಿ ||೧೯||

ನರಪ ದಶರಥ ಪಯಣಮಾರ್ಗದೊ
ಳುರುತರದೊಳರಮನೆಯ ಕಟ್ಟಿಸಿ
ಪರಿಮಳೋದಕ ಸೂಸಿ—ಹಾಸಿರೆ ರತ್ನಗಂಬಳಿಯ |
ಸುರಪತಿಯ ಸಂಪದವ ಜರೆಯುತ
ವರಕುಬೇರನ ತಲೆಯ ತಗ್ಗಿಸಿ
ಮೆರೆಯೆ ಮಿಥಿಲಾನಗರ ಸೀತಾದೇವಿ ಮಂಗಳಕೆ ||೨೦||

ಆ ರಮಾಧವನೊಲಿದು ಲೋಕ
ಪ್ರೇರಕನು ಮಗನಾದನಾ ವರ
ಧಾರುಣೀಪತಿ ರಾಮಚಂದ್ರನ ಮಂಗಳಕೆ ಬರಲು |
ಶ್ರೀರಮಾಮಣಿ ಸೀತೆ ಹರುಷದಿ
ಬೀರಿದಳು ನಿಜಮಹಿಮೆ ಸಿದ್ಧಿಗ
ಳಾ ರಘೂತ್ತಮನನ್ನು ಸೇವಿಸೆ ಸಿದ್ಧಮಾಗಿರಲು ||೨೧||

ಸುರಸುಖವ ಹಿಂದಿಕ್ಕಿ ಸಿದ್ಧರು
ತಿರೆಯ ಮಗಳಾಜ್ಞೆಯಲಿ ದಶರಥ
ನರಪತಿಯ ಪರಿವಾರ ಮೊದಲಾದವರನುಪಚರಿಸಿ |
ಹಿರಿದೆನಿಸಿ ರಾಣಿಯರ ಸೇವಾ
ನಿರತರಾದರು ಹಲವು ರೂಪವ
ಧರಿಸುತಣಿಮಾ ಸಿದ್ಧಿಗಳು ಮಾಯಾವಿಲಾಸದಲಿ ||೨೨||

ಆ ಮಹಿಮೆಗಳನಾರು ಬಲ್ಲರು
ರಾಮನೊರ್ವನು ತಿಳಿದು ಮನದಲಿ
ಭೂಮಿಜೆಯು ಬಹು ಸಂಭ್ರಮದಿ ಮಾಡುತಿಹ ಕಜ್ಜಗಳ |
ಪ್ರೇಮದಿಂ ಸತ್ಕರಿಸಲೀಪರಿ
ಭೂಮಿಪತಿ ದಶರಥನ ಜಾನಕಿ
ರಾಮ ಮಹದಾನಂದಗೊಂಡನು ಮನದಿ ನಲಿದೊಲಿದು ||೨೩||

ಬಂದು ಮಿಥಿಲಾಪುರದೊಳಿಳಿದರೆ
ತಂದೆ ಬರವನ್ನರಿದು ರಘುವರ
ನಂದು ಮನದಾತುರದೊಳಿರಲದನರಿತು ಮುನಿನಾಥ |
ಸುಂದರಾಂಗರರಿರ್ವ ರೊಡನೈ
ತಂದು ನೃಪತಿಯ ಕಾಣಿಸಿದನರ
ವಿಂದನಯನರು ಪಿತನ ವಂದಿಸಿದರು ಸರಾಗದಲಿ ||೨೪||

ಬರುವ ವಿಶ್ವಾಮಿತ್ರ ಮುನಿವರ
ಗೆರಗಿ ತರಳರನಪ್ಪಿ ಸುಖಸಾ
ಗರದಿ ತೇಲ್ದನು ನೃಪತಿ ಹರ್ಷೋತ್ಸವ ದೊಳಿರುತಿರಲು |
ಹರಸಿ ಕುವರರನೊಪ್ಪಿಸುತ ರಘು
ವರನ ಘನಮಹಿಮಾತಿಶಯಗಳ
ನೊರೆಯಲಾಲಿಂಗಿಸಿದನಿರ್ವರ ಪರಮಸಂತಸದಿ ||೨೫||

ರಾಮಲಕ್ಷ್ಮಣ ಭರತ ಶತ್ರುಹ
ರಾ ಮಹೀಪತಿಯೊಡನೆ ಕುಳ್ಳಿರ
ಲಾ ಮಹೋನ್ನತರನ್ನು ನೋಡುವ ಬಯಕೆಯಲಿ ಜನರು |
ಪ್ರೇಮದಿಂ ಬರುತಿರಲು ಭಕ್ತಿ
ಪ್ರೇಮಧಾಮನು ಮುಗುಳುನಗೆಯಿಂ
ಕಾಮನೆಯನೊಲಿದಿತ್ತ ದರ್ಶನದಿಂದ ಸರ್ವರಿಗೆ ||೨೬||

ಭರತ ಶತ್ರುಹರನ್ನು ನೋಡುತ
ಲುರುತರಾನಂದಾಶ್ರುಗರೆಯುತ
ಪುರದನರನಾರಿಯರು ಕೊಂಡಾಡಿದರು ದಶರಥನ |
ಧರಣಿಜಾತೆಯ ಭಾಗ್ಯಮಾರಿಗು
ದೊರೆಯದೆನ್ನುತ ರಾಮಚಂದ್ರನ
ಪರಮಮಂಗಳ ವಿಗ್ರಹವ ನೋಡುತ್ತ ನಲಿಯುವರು ||೨೭||

ಪಾವನದ ಹಿಮಋತುವಿನಲಿ ಸಂ
ಭಾವ್ಯ ಮಾರ್ಗಶಿರ್‍ಷ್ವರದಿ ಶುಭದಿನ
ವೀ ವಿವಾಹವು ಸೊಗದಿ ನಡೆದುದು ಸಕಲಜಗನಲಿಯೆ ।
ಪಾವನಗ್ರಹಯೋಗ ತಿಥಿ ತಾ
ರಾವರವ ಶುಭವಾರ ಪರಿಕಿಸು
ತಾ ವನಜಭವ ಸನ್ಮುಹೂರ್ತವನಿರಿಸಿ ತಿಳುಹಿದನು ॥೨೮॥

ಧಾರುಣೀಶ ವಿದೇಹ ವಿನಯದಿ
ನಾರದರ ಕರವಿತ್ತು ಕಳುಹಿದ
ನಾ ರಘೂತ್ತಮನೆಡೆಗೆ ಮಂಗಳ ಪತ್ರಮಂ ಮುದದಿ ।
ಭೂರಿವಿಭವದೊಳದನು ಕೈಗೊಂ
ಡಾ ರಿಸಿಯ ಸನ್ಮಾನಿಸಿದ ದನು
ಜಾರಿ ಜನಕನು ರಾಮಚಂದ್ರನ ಭಾಗ್ಯಮಂ ಹೊಗಳಿ ॥೨೯॥

## ವಿಶ್ರಾಮ ೧೧

ಸೊ॥ ಸುರರುಘೇಯೆನೆ ರಾಮಸೀತಾ
ಕರಕಮಲವಂ ಪಿಡಿಯೆ ಜನಕಾ
ವರಜ ಸುತೆಯರ ವರಿಸಿದರು ಭರತಾದಿಗಳು ನಲಿದು ॥

ಪಣವತಮ್ಮಟೆ ಭೇರಿ ಮೊಳಗಿತು
ಜನಕನರಮನೆಯಲ್ಲಿ – ಶಂಖ
ಧ್ವನಿಯುಗೆಯ್ದರು ಶುಭನಗಾರಿಯ ಸಬುದ ಮಾಡಿದರು ।
ವನಿತೆಯರು ಹಾಡಿದರು ವಿಪ್ರರು
ಘನ ನಿಗಮ ಮಂತ್ರಗಳ ಪಠಿಸಿದ
ರನುವಿನಿಂ ಕಳಸಗಳ ಕಂದಿರಿಸಿದರು ನಾರಿಯರು ॥೧॥

ಏಳು ಜನಕನೃಪಾಲ ವರಗೋ
ಧೂಳಿಲಗ್ನದಿ ನಡೆಸು ಮದುವೆಯ
ನೇಳು ಕನ್ಯಾದಾನಕನುವಾಗೆನಲು ಭೂಸುರರು |
ಕೇಳಿ ಹೊಂಪುಳಿಯೋದನಾ ಭೂ
ಪಾಲ ಸರ್ವರ ಕರೆಸಿ ದಶರಥ
ನಾಲಯಕೆ ಮೆರವಣಿಗೆಯಲಿ ಹೊರವಂಟ ಸಂಭ್ರಮದಿ ||೨||

ಇಳೆಯಮಗಳ ವಿವಾಹ ಸಮಯವ
ತಿಳಿದು ಪರಿಜನಕೊರೆದ ದಶರಥ
ವೊಳಗುತಿರೆ ವಾದ್ಯಗಳು ಹೊಂಪುಳಿಯೋದರಾ ಜನರು |
ಇಳೆಯರಸರೀ ಸಿರಿಗೆ ಸುರಪತಿ
ಯೊಲಿದು ತಲೆವಾಗಿದನು ನಾಣ್ಚಿದ
ಜಲಜಸಂಭವ ಶಿವ ಕುಬೇರರು ನಲಿದರಿದ ನೋಡಿ ||೩||

ಜನಕನರಮನೆಗೊಲಿದು ದಶರಥ
ತನುಜರೊಡನೈದುತಿರೆ ಹರುಷದಿ
ಮಣಿಕನಕ ಸುಮವೃಷ್ಟಿ ಸುರಿಸಿದರಾಪಥದಿ ಸುರರು |
ವಿನಯದಿಂ ನಮಿಸುತಿಹ ಪ್ರಜೆಗಳ
ಜನಪರಿವರ್ಗರು ಮನ್ನಿಸುತ ಮೆರ
ವಣಿಗೆಯಲಿ ನಡೆತರುತಿರಲು ಜಯಘೋಷಮಾಡಿದರು ||೪||

ಸುರರು ಸುರನಾರಿಯರು ದೇಹವ
ಮರೆತಿರಲು ಶಿವನೋಡಿ ಕರುಣದಿ
ಮರೆಯದಿರಿ ದೇಹವನು ರಾಮನ ಲಗ್ನ ಸಂಭ್ರಮದಿ |
ಸ್ಮರಿಸೆ ಸೀತಾರಾಮನಾಮವ
ದೊರಕುವುದು ಪುರುಷಾರ್ಥ ಸಿರಿಪತಿ
ಯಿರವ ಬಲ್ಲವರಾರು ನೋಡಿರಿ ಹರಿಯ ನೀವೆಂದ ||೫||

ನಂದಿವಾಹನನಾಗಿ ಹರುಷದೊ
ಳಿಂದುಧರ ನಡೆದಿರಲು ಸುರಪಡೆ
ಇಂದಿರಾಪತಿ ಜನಕನೆಂದಾ ದಶರಥನ ನೋಡಿ ।
ಮುಂದಿ ಕಲೆತುದು ಜಯ ಜಯಧ್ವನಿ
ಯಿಂದ ತುಂಬಿತು ಲೋಕ ಮುನಿಜನ
ವೃಂದನೆರೆದುದು ರಾಮಚಂದ್ರನ ನೋಡುವಾತುರದಿ ॥೬॥

ಸುರರು ಕಿನ್ನರ ಸಿದ್ಧ ವಿದ್ಯಾ
ಧರರು ನರರೂಪದಲಿ ನೆರೆದರು
ಪರಮಮಂಗಳ ವಿಗ್ರಹವ ನೋಡುತ್ತ ನಡೆದಿಹರು ।
ಭರದಿ ಪುರುಷಾರ್ಥಗಳೆನಲ್ಕೀ
ಧರೆಯೊಳವತರಿಸಿಹರು ನಾಲುಕು
ತರಳರೆಂದಾ ಸುರರುಘೋಷಿಸಿನೆ ಹರುಷಪುಳಕದಲಿ ॥೭॥

ಮಣಿಕನಕ ಸಿಂಗರದ ತುರಗದಿ
ಜನದ ಸಂದಣಿಯೊಳಗೆ ಬರುತಿರ
ಲಿನಕುಲೋದ್ಭವ ರಾಮಚಂದ್ರನ ಶಿವನು ಸತಿಸಹಿತ ।
ಮನದಣಿಯಲೀಕ್ಷಿಸುತ ಹೊಗಳುತ
ವಿನಯದಿಂ ನಮಿಸಿದನು ದಶರಥ-
ಜನಕನೃಪರಿನ್ನೇಸು ಸುಕೃತರೊ ಪರಮಘನರೆಂದ ॥೮॥

ನಿರುತ ನಿಗಮಸ್ತವಕೆ ಸಿಲುಕದ
ಹರಿಯು ಬೆನ್ನಿನೊಳಿಟ್ಟು ಜಾನಕಿ
ಕರವ ಪಿಡಿಸುವ ಭಾಗ್ಯಮಾಯ್ತಾ ರಾಮನಶ್ವಕ್ಕೆ ।
ತುರಗಮಾದೊಡಮೇನು ರಾಘವ
ದರುಶನ-ಸ್ಪರುಶನದ ಸೇವೆಯ
ಹಿರಿಮೆಯಾಯ್ತಿನ್ನೇಸು ಜನ್ಮದ ಪುಣ್ಯವೋ ಹಯಕೆ ॥೯॥

ಸರಸಿಜೋದ್ಭವಗೆಂಟು ಕಣ್ಗಳು
ಹರಸುತಗೆ ಹನ್ನೆರಡು ಕಣ್ಗಳು
ಹರಗೆ ಹದಿನೈದಿರಲು ರಾಮನ ನೋಡಿ ದಣಿಯದಿರೆ ।
ಸುರಪ ಗೌತಮನಿತ್ತ ಶಾಪವು
ಪರಮ ಹಿತವಾಯ್ತೆಂದು ಹಿಗ್ಗುತ
ಹರಿಯ ಸಾಸಿರ ಕಣ್ಗಳಿಂದಲಿ ನೋಡಿದನು ನಲಿದು ॥೧೦॥

ಇದಿರುಗೊಂಡರು ಬಂದು ಸುಂದರ
ವಧುಗಳಾನಂದದಲಿ ಜನಕನ
ಸುದತಿ ಸುನಯನೆ ಹರಿಸುತಾನಂದಾಶ್ರುಗಳ ನಲಿದು ।
ವಿದಿತಘನ ಸಂಪೂರ್ಣ ರೂಪವ
ಪದೆದು ನೋಡಿದಳಚಲ ಸಂತೋ
ಷದಲಿ ನಿಶ್ಚೇಷ್ಟಿತ ಶರೀರದಿ ನಿಂದು ನಳಿನಾಕ್ಷಿ ॥೧೧॥

ಆರತಿಯ ಬೆಳಗಿದರು ಮುದವನು
ಬೀರಿ ರತ್ನಾಭರಣ ವಸ್ತ್ರವ
ನಾರಿಯರು ರಘುರಾಮಗುಡುಗೊರೆಯಿತ್ತು ಹರ್ಷಿಸಲು ।
ಚಾರುಗುಣ ಗಂಭೀರ ರಾಮನು
ದಾರದಿಂ ಮಣಿರತುನ ರಾಶಿಯ
ಪಾರಿತೋಷಕವಾಗಿ ಕೊಟ್ಟನು ತನ್ನ ಪರಿಜನಕೆ ॥೧೨॥

ವಿನಯದಿಂದರ್ಘ್ಯಾದಿಗಳಲಾ
ಜನಪ ದಶರಥನನ್ನು ಪೂಜಿಸಿ
ಜನಕ ಹರುಷದಿ ಲಗ್ನಮಂಟಪದೊಳಗೆ ಕರೆದೊಯ್ದು ।
ಮುನಿನಿಕರಕೆರಗುತ್ತ ಸಿಂಹಾ
ಸನದಿ ಕೂರಿಸಿ ನೃಪರ ಸರ್ವರ
ನನುನಯದಿ ಕರೆತಂದನಾ ಜನಪಾಲ ಮರೆಯದೆಯೆ ॥೧೩॥

ಕೋಸಲೇಶ್ವರ ಶಿವಗೆಸಮನೆಂ
ದಾ ಸುಶೀಲನು ನಮಿಸಿ ಪೂಜಿಸಿ
ತೋಷದಿಂದಿನ್ನಿತರ ಭಾವವ ನೆನೆಯದಿರುತಿಹನು ।
ದಾಶರಥಿ ಪಿತನನ್ನು ನೋಡುತ
ಲಾ ಸುಮತಿ ಗುಣಗಣವ ಮೆಚ್ಚುತ
ಲೇಸು ಜನುಮದ ಸುಕೃತವೆಂದಾದರಿಸಿದನು ನೃಪನ ॥೧೪॥

ದಶರಥನ ಸಂಬಂಧಿಕರ ಪೂ
ಜಿಸಿದ ನೃಪ ಮುದದಿಂದ ಮಿಗೆ ವಂ
ದಿಸಿದ ಬಾಂಧವರುಗಳನುಚಿತಾಸನವನೀಯುತ್ತ ।
ಹಸಿತವದನಂ ನುಡಿಸಿದನು ಸಂ
ತಸವನೊಡ್ಡಿದ ಸಂಭ್ರಮವ ವ
ರ್ಣಿಸಲು ವಾಗ್ಮಿಗೆ ಸಿಗವು ನುಡಿಗಳದೇನ ಬಣ್ಣಿಸಲಿ ॥೧೫॥

ದೇವನಾರಿಯರೊಲಿದು ಬಂದರು
ತೀವಿದೆಳನಗೆಯಿಂದ ನಲಿಯುತ
ಭೂವಧೂಸುತೆಯನ್ನು ನೋಳ್ಪಾತುರದಿ ನರರಂತೆ ।
ಭೂವಧುಗಳಾ ಸುರವನಿತೆಯರ
ಭಾವವರಿಯದೆ ಕಲೆತು ಮಿಗೆ ಸಂ
ಭಾವಿಸಿದವರನ್ನು ವಿನಯದಿ ಹರುಷಮನದಿಂದ ॥೧೬॥

ನೀರೆಯರು ಭೂಜಾತೆಯಂ ಹದಿ
ನಾರು ಬಗೆಯಲಿ ಸಿಂಗರಿಸಿ ಸುಕು
ಮಾರಿಯರು ಹಾಡುತ್ತ ನಡೆದರು ಲಗ್ನಮಂಟಪಕೆ ।
ಮಾರ ತಲೆವಾಗಿದನು ಕೋಕಿಲ
ಸೇರಿದುದು ವನ-ರೂಪ ಗಾನವ
ನಾರು ಬಣ್ಣಿಸಲರಿವರೀ ಧರೆಯಲ್ಲಿ ಮತ್ತರಿದು ॥೧೭॥

ನಡೆದು ಬಂದಳು ಸೀತೆ ಗೆಳತಿಯು
ರೊಡನೆ ಮೆಲುಗತಿಯಿಂದ ರಾಮನ
ಮಡದಿಯಾಗುವೆನೆಂಬ ಹಿರಿಹಿಗ್ಗಿನಲಿ ನಲಿನಲಿದು ।
ಕಡಲಶಯನನಂಗೊಲಿದು ಬಂದಳು
ಪೊಡವಿಮಗಳಾತುರದೊಳಚ್ಚರಿ
ವಡೆಯೆ ಮುನಿಸುರ ಖಚರ ವಿದ್ಯಾಧರ ಮಹೋರಗರು ॥೧೮॥

ಶ್ರೀರಮಾಮಣಿ ಸೀತೆ ಬಂದಳು
ವಾರಿಜೋದರನರಸಿ ಬಂದಳು
ಧಾರುಣೀ ಸಂಜಾತೆ ಬಂದಳು ಮನುಜರೂಪಿರಲಿ ।
ಕ್ಷೀರಸಾಗರಶಯನ ರಾಮನ
ಸೇರಿ ದನುಜರನೊರೆಸಿ ಭೂವಧು
ಭಾರವಿಳಿಸಲು ಬಂದಳಾ ರಘುವನ ವರಿಸಲ್ಕೆ ॥೧೯॥

ಬಂದಳೀ ಹದಿನಾಲ್ಕು-ಲೋಕದ
ತಂದೆಯಂ ವರಿಸಲ್ಕೆ-ಜಾನಕಿ
ಯೆಂದು ಲೋಕದ ಜನನಿಯಂ ನಮಿಸಿದರು ಮನಸಿನಲಿ ।
ಬೆಂದುದಿನ್ನೇಂ ದನುಜಕುಲವನ
ವೆಂದು ನೂರ್ಮಡಿ ತೋಷದಿಂ ರಘು
ನಂದನನ-ಜಾನಕಿಯ ದರುಶನದಿಂದ ಹಿಗ್ಗುವರು ॥೨೦॥

ರತುನಸಿಂಹಾಸನದಿ ದಶರಥ
ಸುತನು ಮೆರೆದಿರೆ ತರಳೆಯರು ಭೂ
ಸುತೆಗೆ ಕೈಗೊಡಲಾಗ ಕೇಸರಿ ಪೀಠವೇರಿದಳು ।
ಸತಿಸಹಿತ ರಘುವರನ ಪದಗಳ
ಲತಿಹಿತದಿ ವಿಮಲೋದಕದಿ ತೊಳೆ
ಯುತಿರೆ ಹೂಮಳೆಗರೆದುದಾ ಸುರನಿಕರ ಪದುಳದಲಿ ॥೨೧॥

ಪರಮಪದರಜ ಸೋಂಕೆ ಗೌತಮ
ನರಸಿ ಪಾವನಳಾದಳಾ ವರ
ಚರಣದುಂಗುಟದಿಂದೊಗೆದುದಾ ದೇವನದಿ ಪರಿದು ।
ಹರಿ–ಪದೋದ್ಭವೆಯೆಂದು ಶಂಕರ
ಶಿರದೊಳಿಟ್ಟನು ದೇವಗಂಗೆಯ
ನರಪನಿಂಥಾ ಪಾದಪದ್ಮವ ತೊಳೆದ ಸಡಗರದಿ ॥೨೨॥

ಧರಣಿಜಾತೆಯ ಕರದಿ ರಾಮನ
ಕರವನಿರಿಸುತ ಗುರುಜನಂಗಳು
ಭರದಿ ಗೋತ್ರಪ್ರವರವೊರೆದರು ಲಗ್ನಕಾಲದಲಿ ।
ಜರುಗಲೀಪರಿ ರಾಮ–ಜಾನಕಿ
ವರವಿವಾಹ ಮುಹೂರ್ತ ಹರವಿಧಿ
ಸುರರು ಮುನಿಜನ ಯೋಗಿ ಸಿದ್ಧರು ಖಚರರುರೆ ನಲಿಯೆ ॥೨೩॥

ಪರುವತನು ಪಶುಪತಿಗೆ ಪಾರ್ವತಿ
ಕರವನಿತ್ತವೊಲಾ ಸಮುದ್ರನು
ಹರಿಗೆ ಲಕ್ಷ್ಮಿಯನಿತ್ತವೊಲು ನೃಪಜನಕ ಪದುಳದಲಿ ।
ಧರಣಿಜೆಯ ರಘುರಾಮಮೂರ್ತಿಗೆ
ವರ ವಿವಾಹದೊಳಿತ್ತ ಸರ್ವರು
ಹರುಷದಿಂ ಜಯಘೋಷಮಾಡಲು ಜಗಕೆ ಶುಭಮಾಯ್ತು ॥೨೪॥

ದೇವದೇವರ ದೇವ ರಾಮನಿ
ಗಾ ವಸುಂಧರೆ ಮಗಳ ಮುದದಿಂ
ಭೂವಧೂವಲ್ಲಭನು ಕನ್ಯಾದಾನ ಮಾಡಿದನು ।
ಆ ವಧೂವರರಿರ್ವರುಂ ಭ
ಕ್ತಾವಳಿಯ ಸಂತಸದಿ ಮುಳುಗಿಸ
ಲಾ ವಿದೇಹ ವಿದೇಹನಾಮವ ಸಾರ್ಥಕಂಗೈದ ॥೨೫॥

ಗುರುವಸಿಷ್ಠನ ನುಡಿಯ ಮನ್ನಿಸಿ
ಹರುಷದಿಂದೂರ್ಮಿಳೆಯ ರಾಮಾ
ವರಜ ಲಕ್ಷ್ಮಣಗಿತ್ತು ಕನ್ಯಾದಾನ ಮಾಡಿದನು ।
ಕರೆಸುತನುಜ ಕುಶಧ್ವಜನ ಸುತೆ
ಯರನು ಪದುಳದಿ ಭರತಶತ್ರು
ಘ್ನರಿಗೆ ನೀಡೆಂದೊರೆಯಲಾಣತಿಯಂತೆ ನಡೆಸಿದನು ॥೨೬॥

ಭರತ ಮಾಂಡವಿಕರವ ಪಿಡಿದನು
ವರಿಸಿದ ಶ್ರುತಿಕೀರ್ತಿಕರವನು
ಹರುಷದಿಂದಾ ಶತ್ರುಸೂದನ ಮುನಿಸುರರು ನಲಿಯೆ ।
ಸುರರುಘೋಷಿಸಿಸಿದನಲಾಗಸದಿ ಸುಮ
ವರುಷಗರೆಯುತ ಶುಭನಿನಾದದಿ
ಧರಣಿ ತುಂಬಲು ನೃಪತಿ ಸಂತಸ ಬಾಷ್ಪ ಸುರಿಸಿದನು ॥೨೭॥

ಅಂದು ಜೀವನು ನಾಲ್ಕವಸ್ಥೆಗ
ಳಿಂದಲುತ್ತಮ ಪುರುಷ ನಾಲ್ವರ
ಬಂದು ಸೇರಿದ ತೆರದೊಲಾ ದಂಪತಿಗಳೆಸೆಯುತಿರೆ ।
ಮಂದಗಮನೆಯರಾರತಿಯ ಸಾ
ನಂದದಿಂದೆತ್ತುತಿರೆ ಬರ್ದಿಲ
ರಂದಣದಿ ಕುಳ್ಳಿರ್ದು ನೋಡಿದರವರ ವೈಮುರೆತು ॥೨೮॥

ಮತ್ತಯೋಧ್ಯಾಧಿಪತಿ ಮನದಿ ನ
ಗುತ್ತ ತನ್ನ ಕುಮಾರರಂ ನೋ
ಡುತ್ತ ಪರಮಾನಂದ ತುಂದಿಲನಾದ ವೈಮುರೆತು ।
ಎತ್ತಲುಂ ಕಣ್ಗೆಸೆಯೆ ಸತಿಸಹಿ
ತುತ್ತಮ ಕುಮಾರಕರು ಭೂಪಕು
ಲೋತ್ತಮನು ಹರುಷಿಸಿದ ಪುರುಷಾರ್ಥಗಳ ಪಡೆದಂತೆ ॥೨೯॥

ತೆಗೆಸಿದನು ಮಣಿಕನಕ ರತುನಾ
ದಿಗಳ ಬಳುವಳಿಯಿತ್ತ ಮಕ್ಕಳಿ
ಗಗಣಿತದ ಸಂಖ್ಯೆಯಲಿ ಜನಕನೃಪಾಲನೊಲವಿನಲಿ ।
ತೆಗೆಸಿ ಪೀತಾಂಬರವ ರಾಮಾ
ದಿಗಳಿಗಿತ್ತನು ಮಣಿಕಿರೀಟವ
ಝಗಝಗಿಪ ವಸ್ತ್ರಾಭರಣಗಳ ಭೂಪಮನದಣಿಯೆ ||೩೧||

ಒಲಿದು ರಥ ಗಜ ತುರಗ ಪಶುಸಂ
ಕುಲವ ಸುಂದರ ಯುವತಿಯರನಿ
ತ್ತಲಘುಮತಿ ಸನ್ಮಾನಿಸಿದ ಜಾಮಾತ ನಾಲ್ವರನು ।
ಹಲವು ಪರಿಯಲಿ ಬಂದ ಬೀಗರ
ಬಳಗವಂ ಸತ್ಕರಿಸಿ ಋಷಿಮುನಿ
ಗಳನು ವಿನಯದಿ ನುಡಿಸಿ ಪೂಜಿಸಿ ಚರಣ ಕೆರಗಿದನು ||೩೧||

ಹಲಹವು ಜನ್ಮದ ಸುಕೃತದಿಂದೀ
ನೆಲನಮಗಳ ವಿವಾಹ ಕಂಡೆವು
ವಿಲಯರುದ್ರನ ಚಾಪವೆತ್ತಿದ ರಾಮದರ್ಶನವ ।
ಸುಳಿಯಲಾ ಭಾರ್ಗವನ ದರ್ಪವ
ನಳಿದ ಮುನಿಸತಿ ಶಾಪವೊರೆಸಿದ
ಜಲಶಯನ ಹರಿಕರುಣ ಕಲ್ಯಾಣಗಳ ನೋಡಿದೆವು ||೩೨||

ತರಳೆಯರು ಮಣಿಮುತ್ತು ಮಾಣಿಕ
ವಿರಿಸುತಾರತಿಯೆತ್ತಿ ಪದುಳದಿ
ಗರಿಕೆ ನೀವಾಳಿಸುತ ದೃಷ್ಟಿಯ ತೆಗೆದು ಹರಸಿದರು ।
ಪುರದ ನರನಾರಿಯರ ಪಡೆ ವಧು
ವರರ ನೋಡುತ ಗಾನಮಾಡುತ
ಪರಮಘನಮಾಯ್ತೆನುತ ಹಿಗ್ಗಿದರೊಲಿದು ನಮಿಸಿದರು ||೩೩||

ನಾಗವಲ್ಲಿಯ ಮುಗಿಸಿ ಜನಪತಿ
ಬೀಗರೌತಣ ಮಾಡಿ ನಲಿಯುತ
ಲಾಗ ದಂಪತಿಗಳನು ಮೆರವಣಿಗೆಯಲಿ ಪತ್ತನದಿ ।
ಯೋಗಿಜನ ಹರುಷಿಸಲು ಪುರಜನ
ರಾಘವನ ದರುಶನದಿ ಪುಳಕಿತ
ರಾಗಿ ದಶರಥ ಜನಕರಿರ್ವರು ನಮಿಸಿದರು ಮುದದಿ ॥೩೪॥

ಪುರದ ವೀಥಿಗಳೊಳಗೆ ನಡೆಯುತ
ಮೆರವಣಿಗೆಯ್ಯೈತಂದು ಭೂಪತಿ
ಯರಮನೆಯ ಬಾಗಿಲ್ಗೆ ಬಂದುದು – ಯುವತಿಯರು ನಿಂದು ।
ಭರದೊಳುಪ್ಪಾರತಿಯ ಬೆಳಗಲು
ಕರೆದು ಕರುಣವ ರಥವನಿಳಿದನು
ಧರಣಿಜಾಸುತೆ ಸಹಿತ ರಾಘವ ಲೋಕ ನಲಿಯುತಿರೆ ॥೩೫॥

ಜನಕನೃಪ ಸೀತಾವಿವಾಹವ
ನನುನಯದಿ ಮಾಡುತ್ತ ದಶರಥ
ಜನಪನುಪಚಾರದಲಿ ಮುಗಿಸಿದ ಹರುಷ ಪೆರ್ಚುತಿರೆ ।
ಅನಘ ಲಕ್ಷ್ಮೀರಮಣ ರಾಕ್ಷಸ
ಹನನಕಾರ್ಯದ ನೆಪದಿ ಬಂದನು
ಮನುಜರೂಪದೊಳಿಂದು ಹೊಗಳಿದ ರಾಮಚಂದ್ರನು ॥೩೬॥

## ವಿಶ್ರಾಮ ೧೨

ಸೂ॥ ಪರಿಣಯಾನಂತರದಿ ತನುಜ
ರ್ವೆರಸಿ ವರಸಾಕೇತ ನಗರಕೆ
ಮರಳಿ ದಶರಥ ಬಂದ ಪರಮಾನಂದಲಹರಿಯಲಿ

ಆದುದುತ್ಸವ ಪಲವು ಬಗೆಯಿಂ
ದಾ ಧರಿತ್ರೀ ಸುತೆಯ ಪರಿಣಯ
ವೋದವಲಿ ಸಾಗಿದುದು ಮಿಥಿಲಾ ನಗರ ನಗುತಿರಲು ।
ಆ ದಯಾನಿಧಿ ದಶರಥನು ಸೂ
ರ್ಯೋದಯದಿ ಗುರುಸನಿಹಕ್ಕೈದುತ
ನಾದಿದನು ಹರ್ಷಾಶ್ರುಬಿಂದುಗಳಿಂದ ಪದಯುಗವ ॥೧॥

ಎಲೆಮುನಿಪ ತರಳರ್ಗೆ ಪರಿಣಯ
ವೊಲವಿನಿಂ ಮಾಡಿಸಿದೆ ನೇಸರ
ಕುಲವ ಬೆಳಿಸಿದೆ ಕರುಣವೆನಿತೋ ನಿನಗೆ ತನಯರಲಿ ।
ಇಳೆಯಮರರಂ ಕರೆಸು ಗೋವ್ರಜ
ನೆಲವನವರಿಗೆ ಕೊಡಿಸು ರತುನಾ
ವಳಿಯ ವಸ್ತ್ರವ ಕೊಡಿಸು ಮಾಡಿಸು ದಾನಗಳನೆಂದ ॥೨॥

ಹೇಮಮಣಿ ಶೃಂಗಾರಯುತ ವರ
ಕಾಮಧೇನುವ್ರಜವ ದಶರಥ
ಭೂಮಿದೇವರಿಗಿತ್ತ ಹಲವು ಸಹಸ್ರಸಂಖ್ಯೆಯಲಿ ।
ಪ್ರೇಮದಿಂ ಯಾಚಕರ ಕರೆಸುತ
ಹೇಮರತುನಾಭರಣ ವಸ್ತ್ರವ
ನಾ ಮಹೀಶನು ಸೂರಗೊಟ್ಟನು ಲೋಕವೆಚ್ಚುತಿರೆ ॥೩॥

ಮತ್ತೆ ವಿಶ್ವಾಮಿತ್ರ ಮುನಿಗೆರ
ಗುತ್ತ ನಿನ್ನ ಕೃಪಾಕಟಾಕ್ಷದೊ
ಳುತ್ತರೋತ್ತರಮಾಯ್ತು ವರಭೂಮಿಜೆಯ ಪರಿಣಯದಿ ।
ತೆತ್ತವಣೆಯೇನಂಬೆ-ನಿಮಿವಂ
ಶೋತ್ತಮನ ಬಾಂಧವ್ಯ ದೊರೆತುದು
ಕೆತ್ತಿಸಿತು ಸತ್ಕೀರ್ತಿ ಲೋಕದೊಳೆಂದನಾ ಭೂಪ ॥೪॥

ಮನ ಬರದು ದಶರಥನ ಕಳುಹಲು
ಜನಕನೃಪತಿಗೆ ರಾಮದರುಶನ
ಕಣುಗಳಿಗೆ ಹಿತವಾಯ್ತು ಜಾಮಾತರನು ನೋಡುತ್ತ ।
ದಿನಗಳುತ್ಸವದಿಂದ ಸಾಗಲು
ಮುನಿಪ ವಿಶ್ವಾಮಿತ್ರ ದಶರಥ
ಜನಪನಂ ಕಳುಹಲ್ಕೆ ಬೆಸಸಲು ಭೂಪನೊಪ್ಪಿದನು ॥೫॥

ಪೊರಮಡುವ ದಶರಥನು ಕುವರ
ರ್ವೆರಸಿ ನಿಜಪುರಕೆನುತಲಂತಃ
ಪುರದ ನಾರಿಯರರಿತು ಸೀತಾರಮಣಿ ವಿರಹದಲಿ ।
ಕರಗಿತಂತಃಕರಣ ಶೋಕದೊ
ಳೊರೆಯಲಮ್ಮದೆ ನೋಡಿದಣಿಯರು
ತರಳೆಯೂರ್ಮಿಳೆ ಮಾಂಡವಿ ಶ್ರುತಕೀರ್ತಿಯರನೊಲಿದು ॥೬॥

ದಿನಪನಸ್ತಮಿಸಲ್ಕೆ ಬಾಡುವ
ವನಜದಂತಾ ಕಮಲಮುಖಿಯರು
ಘನಮಹಿಮ ಶ್ರೀರಾಮನೈದುವನೆಂಬ ನುಡಿಕೇಳ್ದು ।
ಜನನಿ-ಜನಕರ ತೊರೆದ ಶಿಶುವೊಲು
ವನಜವದನೆಯರುಮ್ಮಳಿಸಿ ಗುಣ
ಗಣವ ಕೊಂಡಾಡಿದರು ಕಾರುಣ್ಯವನು ನೆನೆನೆನೆದು ॥೭॥

ಬಂದ ಬಳಗವ ಸತ್ಕರಿಸುತಾ
ನಂದದಲಿ ಫಲಭಕ್ಷ್ಯ ಭೋಜ್ಯಗ
ಳಂದವಾದೋದಕವನಿತ್ತನು ಜನಕನೃಪನೊಲಿದು ।
ಬಂದು ಸವಿನುಡಿಯಿಂದ ತಾನೇ
ಮಂದಿಯಂ ನುಡಿಸುವನೊಲುಮೆಯಿಂ
ತಂದು ಚಿನ್ನದ ತಟ್ಟೆಯಲಿ ತಾಂಬೂಲಗಳನಿತ್ತ ॥೮॥

ಉಡುಗೊರೆಯನೀಯುತ್ತಲವರ
ನ್ನಡಿಗಡಿಗೆ ನುಡಿಸುತ್ತ ನೃಪ ಬೀ
ಳ್ಕೊಡುತ ನೊಂದನು ಕಳುಹಲಾರದೆ ಬಂಧುವರ್ಗವನು |
ಪೊಡವಿಯಲಿ ಪೊಸತೆನಿಸುವೊಲು ತ
ನ್ನಡಿಯ ಮಿಥಿಲಾಪುರದೊಳೂರುತ
ನಡೆದು ಬಂದಾ ರಾಘವನ ಕಾರುಣ್ಯದಲಿ ಹಿಗ್ಗಿ ||೯||

ರಾಜ್ಯ ಸಂಪದ ತುರುಗ ಗಜರಥ
ಪೂಜ್ಯವಸ್ತು ಸಮಸ್ತವನಿತಾ
ಬಜ್ಜರವ ಹರಿಯಂಘ್ರಿಯುಗಳದಿ ಸೂರೆಮಾಡಿದನು |
ರಾಜ್ಯವೇಕಿದು ನಿನ್ನಪದ ಸಾ
ಮ್ರಾಜ್ಯ ದೊರಕಿರಲೆನಗೆ ವರ ಸಾ
ಯುಜ್ಯ ಪದವಿಯ ಕರುಣಿಸೆಂದಾ ಜನಕ ಪ್ರಾರ್ಥಿಸಿದ ||೧೦||

ಹತ್ತು ಸಾವಿರ ಮದಗಜವ ತೊಂ
ಭತ್ತು ಸಾವಿರ ತುರಗರಥ ಮೂ
ವತ್ತು ಸಾವಿರ ಲಕ್ಷ ಗೋವ್ಗಳ ದಾಸದಾಸಿಯರ |
ಇತ್ತ ಮಣಿರತುನಾವಳಿಯನರು
ವತ್ತು ಸಾವಿರ ಭಂಡಿಯಲಿ ಹೇ
ರುತ್ತ ಕಳುಹಿದ ಜನಕನೃಪ ಸಾಕೇತಪುರವರಕೆ ||೧೧||

ಬಂದು ಸುನಯನೆಗೆರಗಿ ದಶರಥ
ನಂದನಂ ನಗೆಮೊಗದಿ ನೋಡುತ
ಲಿಂದಯೋಧ್ಯೆಗೆ ತಂದೆ ತೆರಳುವ ಬಂಧುಜನ ಸಹಿತ |
ಇಂದುಮುಖಿ ಹರಸುತ್ತ ಕಳುಹುವು
ದೆಂದು ನುಡಿಯಲು ಹರುಷ ದುಃಖದಿ
ನೊಂದು ಗದ್ಗದವಾಣಿಯಿಂದುಪಚರಿಸಿದಳು ಮುದದಿ ||೧೨||

ಪರಮ ಪುರುಷನು ನೀನು ನಿನ್ನನು
ದರದಿ ಧರಿಸಿದ ಪುಣ್ಯವೆಷ್ಟೆಂ
ದರಿಯೆನಾಂ ಕೌಸಲ್ಯೆ ಮಾಡಿದ ತಪದ ಬಲ್ಮೆಗಳ ।
ತಿರೆಯ ಮಗಳನ್ನೊಪ್ಪಿಸಿದೆ ಪದ
ಸರಸಿಜದಿ ನಿನ್ನವಳಿವಳು ದಿನ
ಕರನವಂಶವ ಬೆಳಗಿಸುವಳೆಂದೊರದಳಾವನಿತೆ ॥೧೩॥

ಭಾವಿತಾತ್ಮ ಪವಾಡ ಪುರುಷ ಪ
ರಾವರೇಶನ ನಣ್ಪು ಪಲ್ಲವಿ
ಸೀ ವಿದೇಹ ಕುಮಾರಿ ಸಯ್ಪಿಂ ವಿದಿತಮಣಿಯರದಿ ।
ದೇವರೆಸಕವನರಿತು ಸೀತಾ
ದೇವಿ ನಡೆವಳು ನೆಳಲಿನೊಲು ನೀ
ಕಾವುದೈ ಕರುಣದಲಿ ತರಳೆಯನೆಂದಳಾ ಲಲನೆ ॥೧೪॥

ಭೂವಿಯಮರರ ಪಾದಧೂಳಿಯ
ಭೂಮಿಪತಿ ದಶರಥನು ಶಿರದಲಿ
ನೇಮದಿಂ ಧರಿಸುತ್ತ ಪೂಜಿಸುತಿಷ್ಟದೇವರನು ।
ಪ್ರೇಮದಿಂ ವಿಘ್ನೇಶನಡಿಗಳಿ
ಗಾಮಹೀಪತಿ ನಮಿಸಿ ಬೀಳ್ಕೊಂ
ಡಾ ಮಿಥಿಲೆಯನು ಹಿಂದುಳಿದು ಪೊರಡುತಿರೆ ಶುಭವಾಯ್ತು ॥೧೫॥

ಮಣಿವರೂಥವನೇರಿ ದಶರಥ
ತನಯರಂ ವೆರಸುತ್ತ ಪೊರಟರೆ
ಜನಕ ಕಳುಹಿಸಿಕೊಟ್ಟು ಸರ್ವರನಲ್ಪ ಪಯಣದಲಿ ।
ಜನಪತಿಯು ಬೀಳ್ಕೊಟ್ಟು ರಿಂಗಣ
ಗುಣಿವ ಮನದಿಂ ಪುರಕೆ ಮರಳಿದ
ತನುಜೆಯರ ವಿರಹಾತುರದೊಳಭಿಜಾತ ಮರುಗುತಲಿ ॥೧೬॥

ನಡೆನಡೆಯುತಲ್ಲಲ್ಲಿ ತಂಗುತ
ಪೊಡವಿಪತಿ ಗುರು ಬಳಗ ಸುತರುಗ
ಳೊಡನೆ ಪಾಂಥರನೋಡಿ ನುಡಿಸುತ ಹರುಷಗೊಳಿಸುತಲಿ ।
ಅಡಿಯಿಡುತ ಶುಭದಿವಸ ಮಡದಿಯು
ರೊಡನಯೋಧ್ಯಾ ಪುರದ ಬಾಹೆಗೆ
ನಡೆತರಲು ಪುರಜನರು ಹರುಷದೊಳುಬ್ಬಿದರು ನಲಿದು ॥೧೭॥

ಪುರದ ನರನಾರಿಯರು ಹಿಗ್ಗಿನೊ
ಳುರುಬಿ ವೀಧಿಯ ಸಿಂಗರಿಸಿದರು
ಬರೆದು ಚಿತ್ರವಿಚಿತ್ರ ಬಣ್ಣದ ರಂಗವಲ್ಲಿಗಳ ।
ಪರಿಮಳೋದಕದಿಂದ ಸಾರಿಸು
ತಿರಿಸಿ ಕನ್ನಡಿ ಕಳಸ ಲೋಕೇ
ಶ್ವರನ ಮುಖದರ್ಶನಕೆ ನಿಂದರು ಸೌಧಗಳನೇರಿ ॥೧೮॥

ಫಲಭರಿತ ಗಿಡಗಳನು ಪೂಗೀ
ಫಲ ರಸಾಲ ಕದಂಬ ಕದಳಿ ಬ
ಕುಲ ತಮಾಲ ಮಧೂಕ ಮಂಟಪಗಳನು ರಚಿಸಿದರು ।
ಬೆಳೆದ ಭಾರಿಯವೃಕ್ಷ ಪರಿವಿಡಿ
ಗಳನು ನಾಚಿಸುವಂತೆ ವಿಧವಿಧ
ಫಲತರುಗಳಿಂ ಸಿಂಗರಿಸಿದರು ಚಿತ್ರತರವಾಗಿ ॥೧೯॥

ಪಣವ ತಮ್ಮಟೆ ಭೇರಿ ಕಹಳಾ
ಧ್ವನಿ ಡಮರುಗ ನಗಾರಿ ದುಂದುಭಿ
ನಿನದವಾಗಲು ಲೋಕಪಾಡಿತು ರಾಮನಾಮವನು ।
ಅನುವಿನಿಂ ಕರಿತುರಗ ಮೃಗಗಳು
ದನಿವಿಡಿದು ಕೂಗಿದುವು ರಾಮನ
ಘನತೆಯರಿಯುತ ನೆನೆದು ಹಿಗ್ಗಿದರಾರು ಹರುಷದಲಿ ॥೨೦॥

ಭರದಿ ಹರಿ ವೈಕುಂಠಕ್ಕೈದುವ
ತೆರದಿ ರಘುವರ ಶುಭಮುಹೂರ್ತದಿ
ಪುರವ ಹೊಕ್ಕನು ಹರಿಹರರ ವಿಘ್ನೇಶ್ವರರ ನೆನೆದು !
ಹರುಷದಿಂದುಪ್ಪಾರತಿಯ ನವ
ತರುಣಿಯರು ಬೆಳಗಿದರು ಪಾಡುತ
ದರುಶನದಿ ಹಿಗ್ಗಿದರು ಹರಸಿ ನವೀನ ವಧುವರರ ||೨೧||

ಆರತಿಯನೆತ್ತಿದರು ಪದುಳದಿ
ನೀರೆಯರು ಸುಕುಮಾರರಿಂಗು
ಪ್ಪಾರತಿಯ ಬೆಳಗಿದರು ಪುರನಾರಿಯರು ನಗು ಮೊಗದಿ !
ನೀರೆಯರು ಪಲ್ಲಕ್ಕಿ ಮರೆ ನೀ
ವಾರಿಸುತ ಸುಕುಮಾರಿಯರ ವದ
ನಾರವಿಂದವ ನೋಡಿ ಮರೆದರು ತಮ್ಮ ದೇಹಗಳ ||೨೨||

ಉಡುಗೊರೆಯನೀಯುತಲಿ ತನುಜರ
ತಡವರಿಸಿ ತಕ್ಕೈಸಿ ಸೊಸೆಯರ
ತೊಡಿಸಿದರು ರತ್ನಾಭರಣಗಳ ನೃಪನರಾಣಿಯರು |
ಪೊಡವಿಯಲಿ ಬಂದುದಕೆ ಪುತ್ರರ
ಪಡೆದು ಸಾರ್ಥಕವಾಯ್ತೆನುತಲಾ
ಪೊಡವಿಪತಿಯರಸಿಯರು ರೋಮಾಂಚನದಿ ಹಿಗ್ಗಿದರು ||೨೩||

ಬಿಡದೆ ಕುಲನೀತಿಗಳ ನಿಗಮದ
ನುಡಿಯ ಹಳಿಯದೆ ಸರ್ವ ವಿಧಿಗಳ
ಸಡಗರದಿ ವಿರಚಿಸುತ ದಶರಥ ಪರಿಣಯವ ಮುಗಿಸಿ |
ನುಡಿಯಲಮ್ಮದೆ ಹರುಷಭಾರದಿ
ಪೊಡವಿಪಾಲ ಕುಮಾರ ಸೊಸೆಯರ
ಬಿಡದೆ ಕೈವಾರಿಸುತ ನಲಿಯುವ ಸತಿಯರೊಡ ನೊರೆದು ||೨೪||

ಅರಮನೆಯ ಹೊಗುವಂದು ನೃಪ
ತರುಣಿಯರು ತೆಱಿಕೈಸಿ ಮಕ್ಕಳ
ಹರುಷ ಬಾಷ್ಪವ ಸುರಿಸಿದರು ವಧುವರರ ನೋಡುತಲಿ |
ಕರೆಸಿ ವಿಪ್ರಾವಳಿಯ ಪೂಜಿಸು
ತೆರಗಿ ಹರಕೆಯ ಕೊಂಡು ರತ್ನಾ
ಭರಣ ಭೂಷಣವಿತ್ತು ಸತ್ಕರಿಸಿದರು ಪದುಳದಲಿ ||೨೫||

ಬಳಿಕ ವಿಶ್ವಾಮಿತ್ರಗೆರಗುತ
ಬೆಳಗಿಸಿದೆ ರವಿಕುಲವ ಕರುಣವ
ನೊಲಿದು ಕರೆಯುತಲೆಂದು ಹೊಗಳಿದ ಮುನಿಯ ದಶರಥನು |
ಹಲವು ಪರಯಿಂ ಮಣಿವ ನೃಪತಿಯ
ನಿಲಿಸಿ ಕೈವಾರಿಸುತಲಾಶ್ರಮ
ನಿಲಯಕಭಿಮುಖನಾದನಾ ರಿಸಿ ಹರುಷ ಮನದಿಂದ ||೨೬||

ಹೊಸಪರಿಯೊಳುತ್ಸವವ ವಿರಚಿಸಿ
ಹೊಸತೆನಿಸಿ ಲೋಕದಲಿ ನೃಪ ಸಂ
ತಸವ ಬೀರಿದ ದಿವಸದಿವಸ ನವೀನ ಕೃತಿಗಳಲಿ |
ವಸುಧೆ ನಗುತಿರೆ ಸುತರ ಮೇಣಾ
ಸೊಸೆಗಳಂ ಕಣ್ಣಿಟ್ಟು ಕಾವನು
ಬಸುಱ ಮಕ್ಕಳ ದೈವವೆಂದೇ ಬಗೆದ ದಶರಥನು ||೨೭||

ಮನದಿ ರಾಮನಮೂರ್ತಿ, ನೃಪತಿಯ
ವಿನಯ, ರಾಮವಿವಾಹ ಸಂಭ್ರಮ
ಜನಕನನುಪಮ ಪೂಜೆ. ಸೀತಾಶಕ್ತಿ ನಲಿದಾಡೆ |
ಜನಪದವು ಹರ್ಷಾಶ್ರು ಕರೆಯುತ
ಲನಘನಾಮ ಸ್ಮರಣೆಯಿಂದೀ
ಜನುಮ ಸಾರ್ಥಕ ಮಾಯ್ತೆನುತ ಹಿಗ್ಗಿದುದು ಸಂತಸದಿ ||೨೮||

ಬಂದ ಬಳಗವನುಪಚರಿಸಿ ನಿಜ
ಮಂದಿರಕೆ ಕಳುಹಿದನು ಪರಮಾ
ನಂದಕಂದ ರಘೂತ್ತಮನ ಬಿಡಲಾರದೆಯೆ ನಡೆದು ।
ಮಂದಿ ಮೋಹದ ಮನವ ನಿಲಿಸುತ
ಹಿಂದುಹಿಂದಕ್ಕೆ ತಾವು ನಡೆದರು
ಮುಂದುಮುಂದಕೆ ಹೊತ್ತು ಜಡದೇಹವನು ಪಯಣದಲಿ ॥೨೯॥

ದಶರಥನ ಮೈದುನನು ಕೇಕೆಯ
ವಸುಧೆಯರಸನು ಪದಕೆರಗಿ ಪ್ರಾ
ರ್ಥಿಸಿದ ಭರತನ ಪುರಕೆ ಕರೆದೊಯ್ಯಲ್ಕೆ ತನ್ನೊಡನೆ ।
ಒಸೆದು ಶೀಘ್ರದಿ ಮರಳಿ ಬಹ ಭರ
ವಸದೊಳೊಪ್ಪಿದ ತಂದೆಯಿಂ ವಂ
ದಿಸುತ ಶತ್ರುಹನೊಡನೆ ಮಾವನ ಮನೆಯ ಸೇರಿದನು ॥೩೦॥

ಅತ್ತ ತೆರಳಲು ಭರತ ಶತ್ರುಹ
ರಿತ್ತಲಾ ರಘುರಾಮ ಲಕ್ಷ್ಮಣ
ರುತ್ತಮದ ಪಿತೃಮಾತೃ ಸೇವಾಕೃತ್ಯದಲಿ ತೊಳಲಿ ।
ತಿತ್ತಿಗರ ನೆನೆವುತ್ತಲವರಂ
ಚಿತ್ತದಲಿ ಹಾರೈಸುತಿರ್ದರು
ಹೊತ್ತು ಹೋಗದು ಬಂಧುವಿರಹದ ಬೇಗೆಯಿಂ ದಣಿದು ॥೩೧॥

ಕರುಣೆಯೆನಿತೋ ರಾಮಚಂದ್ರಗೆ
ಭರತ-ಶತ್ರುಹರನ್ನು ನೆನೆಯುತ
ಕರಗುವನು ಲಕ್ಷ್ಮಣನು ಮರೆಯಾಗಿರಲು ಮರುಗುವನು ।
ಪರಮಘನ ಗಂಭೀರ ಭಕ್ತರ
ಕರೆಗೆ ಬಂದೊದಗುವ ಮಹಾ ಶಂ
ಕರನ ಕುಣಿಸುವ ದೈವ ದಶರಥಗೊಲಿದು ಪೂಜಿಸುವ ॥೩೨॥

ಕವಿಕುಲದ ಜೀವನವು ಸುಖಗಳ
ತವರು, ಭಕ್ತರ ನಿಧಿಯು, ಸೀತಾ
ಧವನು - ರಾಮನು, ಕೃತಿಯನೆಸಗುವ ತನ್ನವರನೊಲಿಸೆ ।
ಅವನ ಚರಿತೆಯನೊರೆವ ಬರೆದೋ
ದುವರ ಹೃದಯದೊಳಿರ್ದು ಪ್ರೇಮವ
ಸವಿವ ದಶರಥ ರಾಮ - ಕರುಣದೊಳೊಲಿದು ರಕ್ಷಿಸುವ ॥೩೩॥

ಇದು ರಘೂತ್ತಮ ಚರಿತಮಾನಸ
ಮಿದುವೆ ಕನ್ನಡತಾಯ ಚರಿತೆಗ
ಳಿದು ವಿನೂತನನಂತವಾಣಿ ಮನೋಜ್ಞಮಾಗಿರಲು ।
ಹೃದಯದೊಳು ನೆನೆಯುತಿರೆ ಕಾವನು
ಪದುಮಲೋಚನ ರಾಮಚಂದ್ರನು
ಮೊದಲು ನೋಡುವ ಭಕುತರಾರ್ತಿಯನರಿವ ರಘುರಾಮ ॥೩೪॥

॥ ಮಂಗಳಂ ॥

———

# ಅಯೋಧ್ಯಾಕಾಂಡ

## ವಿಶ್ರಾಮ ೧

**ಸೊ॥ ರೂಢಿಯಿಂ ರಾಮಂಗೆ ರಾಜ್ಯವ**
**ನೀಡಲಾಲೋಚಿಸಲು ದಶರಥ**
**ಮೂಡಿದುದು ಘನಹರ್ಷ ವರಸಾಕೇತನಗರದಲಿ ॥**

ಶ್ರೀವಧೂವರ ವಿಮಲಗುಣ ರಾ
ಜೀವಲೋಚನ ದೇವಕುಲ ಸಂ
ಭಾವನೀಯ ವಿರಿಂಚಿ - ಶಂಕರ ಸಕಲ ಜಗವಂದ್ಯ ।
ರಾವಣಾದಿಯ ಕೊಂದಖಿಳ ಲೋ
ಕಾವಳಿಯ ಸಲಹಲ್ಕೆ ರಘುರಾ
ಮಾವತಾರದಿ ಬಂದ ದಶರಥರಾಮ ಕಾಪಿಡಲಿ ॥೧॥

ಶ್ರೀಮನೋಹರ ರಾಮಚಂದ್ರ ನಿ
ರಾಮಯಾನಂದಾತ್ಮ ನಿರ್ಗುಣ
ಧಾಮ ಸತ್ವರಜಸ್ತಮೋಗುಣರೂಪ ನಿರವಯವ ।
ಕಾಮಪಿತ ಕರುಣಾಲವಾಲ ಸು
ಧಾಮಪಾಲ ಸುಶೀಲ ಮಂಗಲ
ನಾಮ ಸೀತಾರಾಮ ಸುರಿಸಲಿ ಸಂತಸದ ಮಳೆಯ ॥೨॥

ವಿಮಲ ತುಲಸೀದಾಸಕೃತ ನಿರು
ಪಮ ರಘೂದ್ವಹ ಚರಿತ ಮಾನಸ
ಕಮಲ ಮಧುರಸ ಭೃಂಗ ಝೇಂಕೃತಿಯಿಂದ ಸಂಚರಿಸಿ ।
ಅಮರನುಡಿಯೊಳನಂತ ರಾಗದಿ
ಸುಮನಸರ ಮನವೊಲಿಸಿ ನುಡಿದನು
ಪವಿತ ಹರ್ಷದಿ ನಲಿದು ಮೆರೆದುದು ಚಿತ್ತ ತನ್ಮಯದಿ ॥೩॥

ಪರಿಣಯಾನಂತರದಿ ಜಾನಕಿ
ವೆರಸಿ ರಾಘವ ಬರಲಯೋಧ್ಯಾ
ಪುರಕೆ ನೂತನ ಹರುಷ – ಹೊಂಪುಳಿಯಿಂದ ಮೈಗೂಡಿ !
ನೆರೆ ನವೀನೋತ್ಸವದಿ ಮಂಗಲ
ವರುಷ ಕೆರೆದುದು ಸುಕೃತ ರಾಮನ
ನಿರುಪಮಾನ ಸುನಾಮ ಗಾನವಚೋವಿಲಾಸದಲಿ ||೪||

ಹರಿಯ ಪ್ರೇಮದ ಸವಿಯ ಮನಗಂ
ಡುರುತರದ ಪೂಗಾಯಿ ಪಣ್ಗಳ
ಭರದೊಳೊಪ್ಪಿಸುತಿಹವು ಶ್ರದ್ಧಾ ಭಕ್ತಿ ಪ್ರೀತಿಯಲಿ |
ಗಿರಿಯೊಳೊಗೆದೊಡವೇನು ನದಿನದ
ದರುಶನಾತುರ-ಪೆರ್ಚಲೋಡುತ
ವರಪಯೋನಿಧಿಯೆನಿಸಿದುವು ಸಾಕೇತ ಪುರವರವ ||೫||

ತೋಷಗೊಳೆ ಹದಿನಾಲ್ಕು ಲೋಕಗ
ಳಾ ಸುಧಾಕರ ಮುಖವ ನೋಡುತ
ದಾಶರಥಿ ಮಾತೆಯರು ನಲಿದರು ತಮ್ಮ ಪುಣ್ಯದಲಿ |
ಆ ಸಕಲ ಮುನಿನಿಕರ ರಾಮ ವಿ
ಲಾಸಗಳ ಹೊಗಳುತಿರೆ ತನ್ನುಜರ
ಭಾಸುರಾಂಗ ಸ್ಪರ್ಶನದಿ ದರ್ಶನದಿ ಹಿಗ್ಗುವರು ||೬||

ಗುಣಯುತಂ ಹರಿಯಂತೆ ಕರುಣಾ
ವನಧಿ ಧರೆಯೊಲು ಶಕ್ತಿಪೂರ್ಣಂ
ಮನಸಿಜಾರಿಯ ತೆರದಿ ವರ ಶ್ರೀಮಂತನಿಂದ್ರನಂತೆ |
ವನಜಭವನೊಲು ವಾಣಿಯುಕ್ತನು
ಮನಸಿಜನವೊಲು ಲೋಕಮೋಹಕ
ಮನುಜನೇ ಶ್ರೀರಾಮಮೂರ್ತಿಯನರಿಯಲಳವಲ್ಲ ||೭||

ಕ್ರೂರಿಯೇ ಹರಿ ದುರಿತಕುಲ ಸಂ
ಹಾರಿ ಚೋರನು ಭಕ್ತಕುಲ ಮನ
ಹಾರಿ ಕಾಮುಕನೊಲಿವ ಸಿಲುಕುವ ತನ್ನ ನೆನೆದರಿಗೆ ।
ಆರ ನೆನೆಯದಿರಾರನೊಲಿಸನ
ದಾರಗೊಲಿಯನಪಾರ ಮಹಿಮೋ
ದಾರ ಗುಣಗಂಭೀರ ದಶರಥರಾಮಚಂದ್ರಮನು ॥೮॥

ರಾಮ ಪಾಪವಿರಾಮ ದಶರಥ
ರಾಮ ಸೀತಾರಾಮ ಸುಗಣೋ
ದ್ದಾಮ ಕರುಣಾಕರನಯೋಧ್ಯಾರಾಮ ಶ್ರೀರಾಮ ।
ಶ್ರೀಮನೋಹರಮೂರ್ತಿ ಕೋಸಲ
ರಾಮ ಚಿನ್ಮಯರೂಪ ಮೋಹನ
ರಾಮನಂ ಭುವನಾಭಿರಾಮನ ಮೆಚ್ಚಿದುದು ಲೋಕ . ॥೯॥

ಇವನೆಮಗೆ ಪ್ರಭು-ದಶರಥನು ಮುಂ
ದಿವಗೆ ರಾಜ್ಯವನೀವ ನಾವಿ
ನ್ನಿವನ ಪ್ರಜೆಗಳು ರಾಮ ಸಾಮ್ರಾಜ್ಯದಲಿ ಮೆರೆಯುವೆವು ।
ಇವಗೆ ಸ್ಪಂದುದು ಕಷ್ಟ ಸುಖಗಳು
ಜವನ ಭಯವೆಮಗಿಲ್ಲ ಲೋಕದ
ಬವಣೆ ತೊಲಗಿತು ರಾಮಚಂದ್ರನ ಸನ್ನಿಧಾನದಲಿ ॥೧೦॥

ಭೂಪಗಾದುದು ಮುಪ್ಪು ಜವ್ವನ
ರೂಪ ಮೂಡಿತು ರಾಮಚಂದ್ರಗೆ
ಶ್ರೀಪಯೋನಿಧಿಯಾಯ್ತು ಸಾಕೇತಪುರ ಮೆರೆವುತಲಿ ।
ರೂಪಗುಣಶೀಲಗಳಿಗಾಕರ
ನಾ ಪಯೋದಧಿಶಯನ ಪ್ರಜೆಗಳ
ತಾಪಸರ ಯೋಗಿಗಳ ಹೃದಯದಿ ಮೆರೆವನನವರತ ॥೧೧॥

ಒಂದು ದಿನವೊಡ್ಡೋಲಗದಿ ನೃಪ
ನಂದನರ ಸಹಿತಿರಲು ಸಭೆಯೊಳ
ಗಿಂದುಮುಖ ರಘುರಾಮಮೂರ್ತಿಯ ಸತ್ಯಧರ್ಮಗಳ |
ಸುಂದರನ ಸುಗುಣಾವಳಿಯ ಸಾ
ನಂದದಿಂ ಹೊಗಳುತಿರೆ ಹಿಗ್ಗಿದ
ನಂದು ದಶರಥ ಮಗನ ವಿದಿತ ಯಶೋವಿತಾನದಲಿ ||೧೨||

ತನ್ನ ನಡೆನುಡಿ ರಾಜ್ಯಭಾರದೊ
ಳುನ್ನತಾಮಲ ಕೀರ್ತಿವಡೆದ ನೃ
ಪೋನ್ನತಂ ರಘುರಾಮಚಂದ್ರನ ಬಯಸುತಿರೆ ಜನರು |
ಇನ್ನು ತನಗೀ ಲೋಕಸಂಪದ
ತಿಣ್ಣಮೇಕೆಂದಾ ಧರಾಧಿಪ
ತನ್ನ ತನಯಗೆ ರಾಜ್ಯಪದವಿಯನೀಯಲನುವಾದ ||೧೩||

ನರಪ ದಶರಥನೊಂದು ದಿವಸಂ
ಶಿರದಿ ಮಕುಟವ ತೊಡುತ ನೋಡಿದ
ಕರದ ಕನ್ನಡಿಯೊಳಗೆ ತೋರಿತು ಜರೆಯ ನವಿರೊಂದು |
ಅರರೆ ನೃಪನೀ ವೃದ್ಧನಾದರು
ಧರಣಿ ಸಿರಿ ನಾರಿಯರ ವಿಷಯವ
ಮರೆಯದಿಹೆ ಛೀಯೆಂದು ನುಡಿವೊಲು ಕಿವಿಯೊಳಿರಗಿದುದು ||೧೪||

ರಚಿಸು ಯುವರಾಜ್ಯಾಭಿಷೇಕವ
ನಚಲಧರ್ಮಗೆ ನಿನ್ನ ಜೀವನ
ಶುಚಿಯು ಮಾಡೆಂದೊರೆದುದಾ ಮುದಿಗೂದಲಾ ನೃಪಗೆ |
ಅಚಲ ನುತಿಯುಚ್ಚರವ ಪಡೆಯುತ
ವಚನ ತೊಟ್ಟನು ರಾಮಮೂರ್ತಿಗೆ
ರಚಿಸೆ ಯುವರಾಜ್ಯಾಭಿಷೇಚನ ತನ್ಮುಹೂರ್ತದಲಿ ||೧೫||

ಒಂದು ಶುಭದಿನ ಭೂಪದಶರಥ
ಬಂದು ಕುಲಗುರು ವರವಸಿಷ್ಠನ
ಕುಂದಪದಗಳಿಗೆರಗಿ ಸಂತಸ ಚಿತ್ತದಿಂ ನೋಡಿ ।
ಕಂದ ರಾಮನಿಗೀ ಧರಿತ್ರೀ
ಬಂಧನವ ತೊಡಿಸಲ್ಕೆ ಮನವಾ
ಯ್ತಿಂದು–ಯುವರಾಜ್ಯಾಭಿಷೇಚನವೊಪ್ಪಿತೇನೆಂದ ॥೧೬॥

ಮುನಿತಿಲಕ ಶ್ರೀರಾಮ ಶಕ್ತನು
ಮನುಕುಲದ ಹರಿಪೀಠವೇರಲು
ಜನರ ಸೇವಕ ಮಂತ್ರಿ ಮಿತ್ರಾರಾತಿ ಪರಿಜನರ ।
ಮನವುದಾಸೀನವಿರೆ ಬಹುಜರೆ
ಯೆನ್ನನಪ್ಪಿರಲಿನ್ನು ರಾಮಗೆ
ಜನಪ ಪದವಿಯನೀಯೆ ಮಾಡಿದೆ ಮನವನಾನೆಂದ ॥೧೭॥

ರಾಮ ಕಾಮನೆ ಪೆರ್ಚಿ ಪ್ರಜೆಗಳಿ
ಗಾ ಮಹೋನ್ನತ ಗುಣವ ಮುನಿಋಷಿ
ಕಾಮಿನೀ ನಿಕುರುಂಬ ಮೆಚ್ಚಿತು ನಿನ್ನ ಹರಕೆಯಲಿ ।
ರಾಮಮಯವಿಾ ಲೋಕ ಸತ್ಯ
ಪ್ರೇಮಮಯನಂ ಬಯಸುತಿಹುದೀ
ಭೂಮಿಪಾಲನೆಗಿಂದು ನರಮೃಗವೃಂದ ತಿಳಿಯೆಂದ ॥೧೮॥

ಗುರುಚರಣರಜ ಧರಿಸೆ ಶಿರದಲಿ
ದೊರೆವುದಷ್ಟೈಶ್ವರ್ಯ ಸಂಪದ
ಧರೆಯ ಪಾಲನ ಶಕ್ತಿ ಮೂಡುತ ಕಾಂತಿಯೇರುವುದು ।
ಗುರುವೆ ನಿಮ್ಮಡಿ ಪೂಜೆಯಿಂ ಪಡೆ
ದಿರುವೆ ಮೇಲ್ಮೆಯ ಕೀರ್ತಿವಡೆದೆನು
ಧರೆಯೊಳಾರಿಹರಿನ್ನು ಸಮರೆನಗೆಂದ ದಶರಥನು ॥೧೯॥

ಅರಸನನು ಮನ್ನಿಸಿ ವಸಿಷ್ಠನು
ಶಿರವನೆಗಹಿದ ಕರಕಮಲದಿಂ
ಸುರಿಸುತಾನಂದಾಶ್ರು–ರಾಮಗೆ ಕೊಡು ಧರಿತ್ರಿಯನು ।
ತರಣಿಕುಲ ಧರ್ಮಾಸನದಿ ರಘು
ವರನು ಮೆರೆಯಲಿ ನಿನಗಿದೊಪ್ಪಿತು
ಹರಿಗೆ ಯುವರಾಜ್ಯಾಭಿಷೇಚನ ಮಾಡು ಹೋಗೆಂದ ॥೨೦॥

ಭೂಪಕುಲಮಣಿ ಸುಕೃತದಿಂ ಚಿ
ದ್ರೂಪನಂ ಪಡೆದಿರುವೆ ರವಿಕುಲ
ಭೂಪ ಸಿಂಹಾಸನದಿ ಪೂಜಿಸು ಲೋಕರಕ್ಷಕನ ।
ಆ ಪವಿತ್ರಗೆ ರಾಜ್ಯಪಟ್ಟವ
ಲೋಪವಿಲ್ಲದೆ ರಚಿಸು ಪುಣ್ಯದ
ರೂಪವೆತ್ತಿಹ ರಾಮನಾಗಲಿ ಮುಂದೆ ಯುವರಾಯ ॥೨೧॥

ತರಿಸು ಸಾಮಗ್ರಿಗಳ ತಡವೇ.
ಕಿರಿಸು ಸುಮುಹೂರ್ತವನು ಶ್ರೀರಘು
ವರನ ಯುವರಾಜ್ಯಾಭಿಷೇಕದ ದಿನವೆ ಶುಭದಿವಸ ।
ಕರೆಸು ಸರ್ವರ ಬೇಗ ನೀನೆನ
ಲರಸನತ್ಯಾನಂದದಿಂದಲಿ
ಚರಣಕೆರಗುತ ರಾಮಪಟ್ಟಕೆ ಸಿದ್ಧಮಾಡಿದನು ॥೨೨॥

ಅರಸನೊಡ್ಡೋಲಗದಿ ಸಚಿವರಿ
ಗೊರೆದನೀ ಶುಭವಾರ್ತೆ ಸರ್ವರು
ಹರುಷ ಹೊಂಪುಳಿವಡೆದು ನಲಿದರು ರಾಜವಾಣಿಯಲಿ ।
ಪುರಿದಿ ಹರಹಿತು ವಾರ್ತೆ ರಾಮನ
ಪರಮ ಮಂಗಳನಾಮದಿಂ ಜನ
ಮರೆತು ನಿಜತನು ಭಕ್ತಿವಾರಿಧಿ ಜಲದೊಳೀಸಿದರು ॥೨೩॥

ಚೂತ ಕದಳಿ ತಮಾಲ ತೆಂಗು
ವ್ರಾತ ಪನಸ ಪಲಾಶ ಮೊದಲಹ
ಭೂತಲದ ಭೂರುಹದ ಪತ್ರದ ತೋರಣಂಗಳಲಿ |
ನೂತನದಿ ಸಿಂಗರಿಸಿ ಗಜಮಣಿ
ಜಾತ ಮಣಿಮಯ ವೀಧಿಯಿಂ ಸಾ
ಕೇತಪುರ ರಂಜಿಸಿತು ಲೋಕಾತೀತವಾಗುತಲಿ ||೨೪||

ತುರಗ ಗಜರಥ ಪಶುಗಣಂಗಳ
ಚರರು ಸಿಂಗರಿಸಿದರು ಮುದ್ಗರ
ಪರಶು ಕಾರ್ಮುಕ ಖಡ್ಗ ತೋಮರಗಳನು ಥಳಥಳಿಸೆ |
ವರಮುನಿಪನಾಜ್ಞೆಯಲಿ ಹೊಳಪಿಸಿ
ಹರಿಯ ಪಟ್ಟಕೆ ಸಚಿವ ಸೈನಿಕ
ವರರು ನಿಂದರು ರಾಯನರಮನೆಯಿದಿರು ಕೈಮುಗಿದು ||೨೫||

ತಂದೆ ಪಟ್ಟವ ತನಗೆ ನೀಡುವ
ನೆಂದು ರಘುವರ ಕರೆದು ಜಾನಕಿ
ಗೆಂದ ಮಾವನ ಮನೆಗೆ ಪೋಗಿಹ ಭರತ ಬಹುದಿನಕೆ |
ತಂದೆ ಕರೆಸದೆ ತಮ್ಮನಂ ತನ
ಗಿಂದು ರಘುಕುಲ ರಾಜ್ಯವೀವನೆ
ಕಂದ ಬಾರನೆ ಪುರಕೆನುತ ಮರುಗಿದನು ಮನದೊಳಗೆ ||೨೬||

ಆವನ ನಡೆನುಡಿ ಸರಳಗುಣ ಮೋ
ಣವನ ಭುಜಬಲ ಶೌರ್ಯ ರಣದೊಳ
ಗವನ ಸಾಹಸ ವಿಜಯ ಸತ್ಯಪ್ರೇಮಧರ್ಮಗಳ |
ಆವನ ನಲ್ನುಡಿ ಸಲುಗೆ ಸ್ನೇಹಗ
ಳವನ ಹೃದಯ ವಿವೇಕ ಜಾಣ್ಮೆಗ
ಳವನ ಗುರುಹಿರಿಯರಲಿ ನಮ್ರತೆ ಪರಮಘನವೆಂದ ||೨೭||

ನಗೆಮೊಗೆವ ಚಂದ್ರಿಕೆಗೆ ವಾರಿಧಿ
ಮಿಗೆ ಹರುಷದಿಂದುಕ್ಕುವಂತಾ
ನಗರಿವಾಸಿಗಳಾ ಸುವಾರ್ತೆಯ ಕೇಳಿ ಹಿಗ್ಗಿದರು ।
ನಗೆಮೊಗದೊಳಾ ನೃಪನ ಪೆಂಡಿರು
ರಘುಪತಿಯನಪ್ಪಿದರು – ಸೀತೆಯ
ಹೊಗಳಿದರು ಸನ್ಮಾನಿಸುತ ಹರಸಿದರು ಮನವೊಲಿದು ॥೨೮॥

ಮಾಡಿದಳು ಕೌಸಲ್ಯೆ ಪೂಜೆಯ
ಬೇಡಿದಳು ಶ್ರೀಪತಿಯ ಪದದಲಿ
ರೂಢಿಯೊಳಗುತ್ತಮದ ಪದವಿಯ ನೀಡೆ ತನಯಂಗೆ ।
ಪಾಡಿ ಯುವರಾಜ್ಯದಲಿ ಮಗನಿಗೆ
ನೀಡೆ ಮಂಗಳ ಪದದಿ ತನುವೀ
ಡಾಡಿದಳು ಶುಭಗಳನು ಬಯಸುತ ಭಕ್ತಿಭಾವದಲಿ ॥೨೯॥

ಅರಸನಾಜ್ಞೆಯೊಳಾ ವಸಿಷ್ಠನು
ಭರದಿ ವ್ರತನಿಯಮಗಳ ಮಾಡಿಸೆ
ಬರುತಿರಲು ಕಂಡೆದ್ದು ರಾಘವನೆರಗಿದನು ಪದದಿ ।
ಕರುಣಿಸಿದೆ ನೀ ನಡೆದು ಬರುತಲಿ
ತರಳನನು ಕಾಪಿಡುವ ಭಾರವ
ಧರಿಸಿ ಗುರುವರ ಪತಿಕರಿಸಿ ನೀನೊಲಿದೆ ಘನವೆಂದ ॥೩೦॥

ಅರಿಯನೇ ನಿನ್ನಿರವ ರಘುಪತಿ
ಮರುಳು ಮಾಡುವೆಯೇಕೆ ಕರುಣಾ
ವರನೆ ಲೋಕಾವನತ ಚರಣ ಸರೋಜ ಘನಮಹಿಮ ।
ದುರಿತವಿಪಿನ ಕುಠಾರ ನಿನಗಿಂ
ದರಸ ಯುವರಾಜ್ಯಾಭಿಷೇಕವ
ವಿರಚಿಸುವನದರಿಂದ ಹರಿದೈತಂದೆ ತಾನೆಂದ ॥೩೧॥

ರಾಮು ನಿಯಮೋಪಾಸನ ವ್ರತ
ಹೋಮು ನೇಮುಗಳಿಸಗು ಶ್ರೀಹರಿ
ನಾಮು ಜಪಗಳನ್ಮಾಡು ಕುಲಪದ್ಧತಿಗಳನುಸರಿಸಿ ।
ಶ್ರೀಮುನೋಹರ ನಡೆಯೆನಲು ರಘು
ರಾಮುನಚ್ಚರಿವಡೆದ ರವಿಕುಲ
ಭೀಮು ಭರತಕುಮಾರನಿಲ್ಲದೆ ಪಟ್ಟವೇಕೆನುತ ॥೩೨॥

ಏಕಕಾಲದೊಳಾಯ್ತು ಜನ್ಮವು
ಏಕಕಾಲದಿ ಶಯನ ಭೋಜನ
ಏಕಕಾಲದಿ ಕರ್ಣವೇಧವು ಮುಂಜಿ ಕಲ್ಯಾಣ ।
ಕೈಕಯಿಸುತನಿಲ್ಲದಿರಲಭಿ
ಷೇಕವೊಪ್ಪುವುದೇ ವಸುಂಧರೆ
ಯೇಕೆ ಭರತಕುಮಾರನಿಲ್ಲದೆ ಪಟ್ಟವೇಕೆಂದ ॥೩೩॥

ಮುನಿಪ:ರಾಮುನ ಸಂತವಿಡುತಿರ
ಲನಿತರಲಿ ಸೌಮಿತ್ರಿ ಬಂದನು
ವನಜಪದಗಳಿಗೆರಗಿ ನಿಂದನು ನೋಡಿ ಕಣ್ದಣಿಯ ।
ಅನುಜ ಭರತನ ನೆನೆದು ಮರುಗುವ
ವನಜನಾಭಗೆ ಸೂಕ್ತಿವೊರೆವುತ
ಲಿನಕುಲದ ಧರ್ಮಾಸನದಿ ಬೆಳಗೆಂದು ಬಯಸಿದನು ॥೩೪॥

ಮೊಳಗಿದುವು ನಿಸ್ಸಾಳ ಭೇರಿಗ
ಳುಲಿಯೆ ಮಂಗಳ ವೇದಘೋಷಗ
ಳೊಲಿದು ನರನಾರಿಯರು ಭರತನ ಬರವ ಕಾಯುತಲಿ ।
ಸುಳಿಯನೇಕೆ ಕುಮಾರ ನಮ್ಮಾ
ಹೊಳಲ ಮರೆತನೊ ಶತ್ರುಸೂದನ
ನೊಲಿದಯೋಧ್ಯೆಗೆ ಬಾರನೇಕೆಂದವರು ಮರುಗುವರು ॥೩೫॥

ಎಂದಿಗಾ ಶ್ರೀರಾಮ ತಾನ್ಯೈ
ತಂದು ಜಾನಕಿಸಹಿತ ರಾಜ್ಯವ
ನಂದಗೊಳಿಪನೊ ರತ್ನಪೀಠವನೆಂದಿಗಡರುವನೊ ?।
ಎಂದು ಮಕುಟವ ಶಿರದೊಳಿಡುವನೊ ?
ಎಂದು ಸಂತಸಮುಳಿಗರೆವನೋ ?
ಎಂದು ಸೀತಾರಾಮಚಂದ್ರರ ಪ್ರಜೆಗಳಿನಿಸುವೆವೋ ||೩೬||

ಈ ವಿವರ ಹದಿನಾಲ್ಕು ಲೋಕಗ
ಳಾವರಿಸೆ ಸುರರೊಡೆಯ ಚಿಂತಿಸಿ
ರಾವಣಾಸುರ ವಧೆಗೆ ಮಾನುಷರೂಪದಿಂ ಬಂದ ।
ದೇವ ಸಿಂಹಾಸನವ ತಳೆದರೆ ।
ಸಾವು ತಪ್ಪದು ಭೂಮಿಗದರಿಂ
ದೀ ವಿನೋದವ ನಿಲಿಸಬೇಕೆಂದೆಣಿಸಿದನು ಶಕ್ರ ||೩೭||

ಹಲವು ವಿಧದಿ ವಿರಿಂಚಿ ಸತಿಯ
ನ್ನೊಲಿಸಿ ವೈಯಿಕ್ಕಿದರು ಪದದಲಿ
ಖಳಕುಠಾರನ ಮಂಗಳೋತ್ಸವ ನಿಲಿಸಬೇಕೆಂದು ।
ಖಳ ಕುಬುಜೆ ಮಂಥರೆಯ ಬುದ್ಧಿಯ
ಹೊಲೆಗೆಡೆಸುತ್ತೈದಿದಳು ರಘುಕುಲ
ತಿಲಕನೊಲಿದೀ ಲೋಕಸಲಹಲು ದುಷ್ಟಜನರಿಂದ ||೩೮||

## ವಿಶ್ರಾಮ ೨

ಸೊ|| ಸರಸತಿಯ ನೇಮದಲಿ ಮಂಥರೆ
ದುರುಳ ಮಂತ್ರವನೊರೆಯೆ ದಶರಥ
ನರಸಿ ಹೊಕ್ಕಳು ಕೋಪನಿಲಯವ ರಾಜ್ಯದಾಸೆಯಲಿ ।

ಆ ಮಹಾಪತ್ತನದಿ ಮಂಗಳ
ನಾಮರಸ ಪೀಯೂಷ ಪರಿದುದು
ರಾಮಚಂದ್ರನ ಸುಗುಣಗಾನ ಯಶೋವಿಶಾಲವನು ।
ರಾಮಣೀಯಕವಾಗಿ ಹೊಗಳುತ
ಲಾ ಮನೋಹರ ನಗರ ಮೆರೆದಿರೆ
ಕಾಮಿನೀನಿಕುರುಂಬ ನಲಿಯಲು ವಾದ್ಯ ಮೊಳಗಿದುದು ॥೧॥

ಕೇಳಿ ಮಂಗಳ ವಾದ್ಯರವ ವಿ
ಪ್ರಾಳಿ ಮಾಡುವ ಮಂತ್ರಘೋಷ ವಿ
ಕಾಳಿಸಿತು ಮನ ಕೈಕೆ ನಚ್ಚಿನ ಧಾತ್ರಿ ಮಂಥರೆಗೆ ।
ನಾಳೆ ರಾಜ್ಯವನೀವ ಧರಣೀ
ಪಾಲ ರಾಮಂಗೆಂಬ ನುಡಿಗಳ
ನಾಲಿಸುತ ಬೆಚ್ಚಿದಳು ಮನದೊಳಸೂಯೆ ಮೂಡಿದುದು ॥೨॥

ಅರಿಯಳಾ ಸುಕುಮಾರಿ ಕೇಕೆಯ
ತರಳೆ ತನ್ನ ಕುಮಾರಗೊದವಿದ
ಪರಮದಾರುಣ ಕಷ್ಟ ರಾಮನ ರಾಜ್ಯಭಾರದಲಿ ।
ಧರಣಿಪತಿ ಕೌಸಲ್ಯೆಗೊಲಿಯುತ
ಧರೆಯ ರಾಮಂಗೀವ ಕೈಕೆಗೆ
ಭರತ–ಕುವರಗೆ ಕಷ್ಟವಾಯ್ತೆಂದಳಲಿದಳು ಕುಬುಜೆ ॥೩॥

ಜನಪ ಮರೆಮೋಸದಲಿ ಮಾವನ
ಮನೆಗೆ ಕಳುಹಿಸಿ ಪಟ್ಟಗಟ್ಟುವ
ತನಯ ರಾಮಗೆ ಮರುಳುಮಾಡಿದ ಕಿರಿಯ ರಾಣಿಯನು ।
ಎನಗರಿಯದೇನಿವರ ಮಾತುಗ
ಳನಕುಲೋತ್ತಮ ಭರತನಾಗನೆ
ಜನಪ ! ನೋಡಲಿ ಕುಬುಜೆ ಶಕ್ತಿಯನೆಂದು ಸಾರಿದಳು ॥೪॥

ಮನದಿ ಕುದಿದಳಲುತ್ತ ಕೈಕೆಯ
ಸನಿಯಕ್ಕೈದುತ ಕಾರ್ಯ ಕೆಟ್ಟುದು
ವನಜಮುಖಿ ನೀ ಕೆಟ್ಟೆಯೆಂದಾ ಗೂನಿ ದುಃಖದಲಿ ।
ಕುಣುಗಳಲಿ ನೀರ್ಗರೆದು ಮೌನದಿ
ಮನಕರಗುವಂತಳುತ ನಿಂದಿರ
ಲನುನಯದಿ ನೃಪನರಸಿ ನುಡಿಸಿದಳವಳ ಕರುಣದಲಿ ॥೫॥

ನೋಯಲೇತಕೆ ಧಾತ್ರಿ ದಶರಥ
ರಾಯುಗೇನಹುದಿನ್ನು ಕೋಸಲ
ರಾಯಸೂನು ಕ್ಷೇಮವೇ ಪುರಜನಕೆ ಸುಖವುಣ್ಟೆ ? ।
ಆ ಯಮುಳರಿಗೆ ಸುಖಮೆ ನಿನಗೇ
ನಾಯಸಂ ನುಡಿ ಬೇಗ ರಘುಕುಲ
ರಾಯತಿಲಕ ಕ್ಷೇಮವೇ ಪೇಳೆಂದಳಾ ಕೈಕೆ ॥೬॥

ಪೇಳಲೇನಹುದಿನ್ನು ಸಕಲ ಸು
ಖಾಳಿ ತೊರೆದುದು ನಿನ್ನ ಭೂಮಿಾ
ಪಾಲ ನಂಬಿಸಿ ಕುಹಕಿ ಕೆಡಿಸಿದ ಮುಗುಧೆಯೆಂದರಿದು ।
ಮೂಲವಂ ಕೊಯ್ದಳಿಯ ಲತೆಯೊಲು
ಬಾಳುಗೆಡಿಸಿದ ನೀನು ನಿದ್ರಾ
ಲೋಲುಪತೆಯಿಂ ಕೆಟ್ಟೆ ಹೋಗಕಟೆಂದಳಾ ಧಾತ್ರಿ ॥೭॥

ಪಡೆದಳಾ ಕೌಸಲ್ಯೆ ರಾಮನ
ಪೊಡವಿಯೊಡೆತನ ಮಾಡೆ ಭರತಂ
ಗಡವಿಯೊಡೆತನವಿನ್ನು ರಾಜ್ಯಾದಿಗಳ ಹಂಗೇಕೆ ?।
ನಡುಹೊಳೆಯೊಳಾಗಿಹುದ ಕಾಣದೆ
ಪೊಡವಿಪನ ಮೋಸಗಳ ನಂಬಿದೆ
ಬಿಡು ವಿನೋದಕೆ ಸಮಯವೇ ನುಡಿಯೆಂದಳಾ ಕುಬುಜೆ ॥೮॥

ನೀಲಮೇಘಶ್ಯಾಮ ರಾಮಗೆ
ನಾಳೆ ಯುವರಾಜ್ಯಾಭಿಷೇಚನ
ಪಾಲಿಪಳು ಕೌಸಲ್ಯೆ ಕೋಸಲ ರಾಜ್ಯಲಕ್ಷ್ಮಿಯನು ।
ಏಳು ನಿದ್ರೆಯ ತೊರೆದು, ಭರತನ
ಹಾಳು ಹೊಕ್ಕುದು ರಾಮನಿಂದಲಿ
ಬಾಳುಗೆಟ್ಟುದನರಿಯದಿಹುದೇನೆಂದಳಾ ಕುಬುಜೆ ॥೯॥

ಇದಕೊ ವಜ್ರದಹಾರ ರಾಮಗೆ
ಪದವನಿತ್ತಪನೀ ಶುಭೋದಯ
ಹದುಳವಮಹುದೌ ಹರುಷವಾದುದು ಕೇಳಿ ಶುಭವಚನ ।
ಉದಯಿಸಿದ ರವಿಕುಲದ ಭಾಸ್ಕರ
ವಿಧಿತಘನ ಸಿಂಹಾಸನದಿ ಮೆರೆ
ವುದನು ನೋಡುವೆನೆಂದೆನುತ ಕೊಂಡಾಡಿದಳು ಕೈಕೆ ॥೧೦॥

ಕೋಸಲೆಗೆ ಮಿಗಿಲಾನು ರಾಮಂ
ಗೇಸುಭಕ್ತಿಪ್ರೇಮವೆನ್ನೊಳು
ಮಿಾಸಲೀ ಸಾಮ್ರಾಜ್ಯ ಕೋಶಗಳಾ ರಘೂದ್ವಹಗೆ ।
ತೋಷವಾದುದು ದಾಶರಥಿ ಸಿಂ
ಹಾಸನದಿ ಮೆರೆವಾಗ ನೀಡುವೆ
ಭೂಷಣಂಗಳ ನವರತುನ ನಿನಗೆಂದಳಾ ಕೈಕೆ ॥೧೧॥

ಸುಡುಸುಡೇತರ ಪಾರಿತೋಷಕ
ತೊಡವು–ಬೆಡಗುಗಳೇಕೆ ಬಂಚಿಸಿ
ಕೆಡಿಸನೇ ಬೆಳ್ಮಾಡಿ ದಶರಥನಬಲೆಯೊರ್ವಳನು ।
ಮುಡುಬರೊಲು ಪಟ್ಟಿರುವೆ ಪರಿಭವ
ಮಡರೆ ತಿಳಿಯದ ಪಾಪಿಯುಪಹತಿ
ಹೆಡತಲೆಯೊಳಿರೆ ತಿಳಿಯೆನೀ ಹೋಗೆಂದಳಾ ಕುಬುಜೆ ॥೧೨॥

ಸಾಕು ನಿನ್ನಾಳಾಪ ಹಾವನು
ಸಾಕಿ ಬದುಕುವ ಪರಿಯೆ ಮಾತಿ
ನ್ನೇಕೆ ಭಕ್ತಿಪ್ರೇಮ ಕಾಂಬುದು ನಾಳಿನುದಯುದಲಿ ।
ನೂಕಿ ಮಾವನ ಮನೆಗೆ ಭರತನ
ನೀ ಕುಠಾರನ ಮೆಚ್ಚಿದೆಯ ಸುರ
ಲೋಕ ಸುಖಗಳನೊದೆವೆಯಾ ಹೋಗೆಂದಳಾ ಕುಬುಜೆ ॥೧೩॥

ಜನಪಹಿತ ನಿನಗೆಂದು, ಕೋಸಲೆ
ತನಯ ಹಿತನೇ, ರಾಮುಸರ್ಪದ
ಘನವಿಷವ ನೀನರಿಯೆ ಭರತನ ಜೀವಹೀರುವುದು ।
ನಿನಗೆ ಮಗನಲಿ ಮರುಕವಿಲ್ಲಲಿ
ಘನಕಿರಾತಿನಿಯಾದೆಯಕಟಾ
ಜನಪತಿಯ ಹುರುಳರಿಯೆ ನೀನೆಂದಳಾ ಕುಬುಜೆ ॥೧೪॥

ನುಡಿಯದಿರು ಮಂದಮತಿ–ರಘುವರ
ಪೊಡವಿಸತಿಗಧಿಕಾರಿ ಕರುಣದ
ಕಡಲು ಸತ್ಯಾಗಾರ ಧರ್ಮಾಧಾರ ಗಂಭೀರ ।
ಸುಡಲಿ ಮೂಣಲಿ ಹಾನಿವೃದ್ಧಿಯು
ನಡಿಯೊಳರ್ಪಿಸಿ ರಾಮುಸೇವೆಯು
ನೆಡಬಿಡದೆ ಮಾಡುವುದೆ ಘನವೆಂದಳಾ ಕೈಕೆ ॥೧೫॥

ಕ್ಷೀರಸಾಗರ ಮಥಿಸುತಿರೆ ಘನ
ಘೋರವಿಷ ತಲೆದೋರಿದಂತೀ
ವಾರಿಜೋದರನುತ್ಸವದಿ ಕರುಬುವರೆ ಧಾತ್ರಿ ।
ಆರಘೂತ್ತಮನೆಡೆಯೊಳಿರ್ದರು
ನೀರೆ ಕುಹಕವನೊರೆವರೇ ನೀ
ನಾರೊಳುಸುರುವೆ ತಿಳಿಯೆ ಕೆಡಬೇಡೆಂದಳಾ ಕೈಕೆ ॥೧೬॥

ಹಿರಿಯಮಗ ಸಮ್ರಾಟನಪ್ಪುದು
ಕಿರಿಯ ಕಿಂಕರನವಗೆ-ರವಿಕುಲ
ದರಸರಿಗೆ ನೀತಿಯಿದು, ಹುಯ್ಯಲಿದೇಕೆ ಶುಭದಿನದಿ ।
ನಿರಜೆಯಾ ಕೌಸಲ್ಯೆ ಕೂರ್ಪರ
ಪುರುಡಿಸುವರೇಂ ಕೈಯೊಳೆಸೆಯುವ
ಪರುಸವೇದಿಯನೊಡೆವರೇ ಹೋಗೆಂದಳಾ ಕೈಕೆ ॥೧೭॥

ಎನಗೆ ಮುಳಿಸಿನಿತಿಲ್ಲ ನಿನ್ನಲಿ ;
ಕನಸುಮನಸಿನೊಳಾ ರಘೂತ್ತಮ
ನೆನಗೆ ಪ್ರಿಯಕರ ಧರೆಯನಾಳಲಿ ಲೋಕಪಾಲಿಸಲಿ ।
ಹೊಣಕೆಯೇ ನಿಜಕುವರ ರಾಮಗೆ
ವನಜಪದ ಕೈಂಕರ್ಯವೆಸಗಲಿ
ನೆನೆಯದಿರು ಕೈತವವ ಮಂಥರೆಯೆಂದಳಾ ಕೈಕೆ ॥೧೮॥

ಹಲವು ಜನ್ಮದ ಸುಕೃತಫಲದಿಂ
ದೊಲಿದು ಕೌಸಲೆ ಸೂನುವೆನಿಸಿದ
ಸಲಿಸಲೆನಗಿನ್ನೊಂದು ಜನ್ಮದಿ ಮನದಭೀಷ್ಟವನು ।
ಒಲಿದೆನಗೆ ಸುಕುಮಾರನಾಗಲಿ
ಇಳೆಯಸುತೆ ಮಗಳಾಗಿ ಜನಿಸಲಿ
ಬೆಳಗಲೆಮ್ಮಯ ಕುಲವ ರಾಘವನೆಂದಳಾ ಕೈಕೆ ॥೧೯॥

ಅರಸನಾದೊಡೆ ರಾಮ ನಿನ್ನಯ
ಕರುಳು ಕತ್ತರಿಸುವುದೆ ? ವರ್ಧಿಪ
ತರಳನಲಿ ಮುಳಿಸೇಕೆ ಹರ್ಷದಿ ಹರಸುಮನವೊಲಿದು ।
ಪರಮಪಾವನಮಹುದು ರಾಘವ
ಮೆರೆಯೆ ಸಿಂಹಾಸನದಿ ಮಂಥರೆ
ದರುಶನದಿ ಶುಚಿಯಾಗುಯೆಂದಳು ಕೈಕೆ ನಸುನಗುತ ॥೨೦॥

ಕೇಳುತುದ್ವೇಗದಲಿ ಕೋಪ
ಜ್ವಾಲೆ ಕಂಗಳಲುರಿಯೆ ದುಃಖ
ವ್ಯಾಳ ವಿಷಕಾರುತ್ತ ಬಿಸಿಯುಸಿರಿಡುತ ನೋಡುತ್ತ ।
ನಾಲಿಗೆಯ ಸೀಳಿಲಗೆ ಹೊಡಿಹೊಡಿ
ಕಾಳಕೂಟವ ಕುಡಿಸಿ ಕೊಲ್ಲಿಸು
ನಾಳೆಗಿರೆ ನಾನೆಂದು ನುಡಿದಳು ಕುಬುಜೆ ಮುಳಿಸಿನಲಿ ||೨೦||

ಎರಡು ನಾಲಿಗೆಯಿಲ್ಲ ನುಡಿಯೆರ
ಡೊರೆಯೆ ನಾನಾಪನಿತು ಹಿತಗಳ
ನೊರೆದೆನಲ್ಲದೆ ಗನ್ನಕತಕದ ಹುರುಳನಾನರಿಯೆ ।
ಪರಿಚರಿಸುತಿನ್ನೆವರ ನಿನ್ನೊಳ
ಗೆರಡೆಣಿಸುವೆನೆ ತಾಯೆ ಭರತನ
ಪರಿಯ ನೆನೆದೆನು ಕೈಕೆ ಪರುಠವಿಸೆಂದಳಾ ಗೂನಿ ||೨೨||

ಜಿನುಗುಮತಿಯುನ್ಮಾರ್ಗಿ ಜತ್ತ್ರಕಿ
ಯನುವರಿಯೆನೊಳ್ಪರಿಯೆ ಕಂಟಕಿ
ನಿನಗೆ ತೊಟ್ಟಾಗಿರುವೆ ವಿಧಿನಿಯಮಾನುಸಾರದಲಿ ।
ನಿನಗವಜ್ಞೆಯದಾಗೆ ಸಹಿಸದ
ಕಿನಿಸು ಮೂಡಿತು ಬೆಬ್ಬಳಿಸಿ ಭರ
ತನಿಗೆ ಹದುಳವ ಬಯಸಿ ನುಡಿಸಿದೆನೆಂದಳಾ ಕುಬುಜೆ ||೨೩||

ದೊರೆಯೆ ಸುಂದರರೂಪಮೆನಗಾಂ
ಧರೆಯನಾಳ್ವೆನೆ, ಪಟ್ಟಮಾದೊಡೆ
ಭರತಕುವರಗೆ ರಾಣಿಯಪ್ಪೆನೆ ಕೈಕೆಯೆನಿಸುವೆನೆ ! ।
ಅರುಹಿ ಮಹದಪರಾಧಗೆಯ್ದೆನು
ಕೊರಳ ತೆಗೆ ನಾಲಿಗೆಯ ಕೀಳಿಸು
ಪರಮ ಕರುಣಾವನಧಿಯೆಂದಳು ಕುಬುಜೆ ಕೋಪದಲಿ ||೨೪||

ಕಪಟನುಡಿ ಬೆಳ್ಮಾಡಿದುದು ತನ
ಗುಹೆಪತಿಯು ನೃಪ ಬಗೆದನೆಂದೇ
ಚಪಲೆಯರಿತಳು ಸುರರಮಾಯಾ ಬಲೆಗೆ ಬಲಿಯಾಗಿ ।
ವಿಫಲಮನದಿಂ ನವೆದು ಮಂಥರೆ .
ಕಪಟ ಭಣಿತಿಗಳಗಡುಗೊಳಿಸಲು
ನೃಪರಮಣಿಯುನ್ಮಾರ್ಗಿಯಾದಳು ನಿಜ್ರವಣಿಗೆಗುಂದಿ ||೨೫||

ಶಬರಗಾನಕೆ ಸೋತು ಸಿಲ್ಕುವ
ದಬಲ ಹರಿಣದೊಲಾ ಸುವಾಸಿನಿ
ಕುಬುಜೆ ನುಡಿಗಳ ನಂಬಿ ಕಕ್ಕುಲಿತೆಯಲಿ ಕೇಳುತಿರೆ ।
ಪ್ರಬಲಳಾದಳು ಗೂನಿ ಕೈಕೆಯ
ಸಭಯ ಚಕಿತವನರಿತು ಚಣದಲಿ
ಕಬಳಿಸಿದಳಾ ವಿಮಳ ಹೃದಯುವ ಕಲಕಿ ಕೌಳಿಕದಿ ||೨೬||

ಕಲಹೆ ಕಂಟಕೆಯೆಂಬ ಬಿರುದುಗ
ಳೊಲಿದು ಕೊಟ್ಟಹೆ ದೇವಿ ಕಟುಬಿದ
ರುಳಿವೆನೇ ನೃಪನರಸಿಯರನೇಡಿಸಲು ಬದುಕುವೆನೆ ! ।
ಎಳೆಗುವರಿ ನೀನರಿಯೆ ಕಪಟವ
ಗಳಿತ ಸುಖಿ ನೀನೆನುತ ಮಂಥರೆ
ಸುಲಭದಿಂದೊಲಿಸಿದಳು ರಾಣಿಯ ಮನವ ನಿಮಿಸದಲಿ ||೨೭||

ಇರಬಹುದು ಸುಪ್ರೀತಿ ನಿನ್ನಲಿ
ಧರಣಿಜೆಗೆ ರಾಮಂಗೆ ಕೋಸಲೆ
ಗರಸನಾದೊಡನುಳಿವುದೇ ತತ್ಪ್ರೀತಿ ಮೋಹಗಳು ।
ಪರಮ ಮಿತ್ರನೆ ಶತ್ರುವಪ್ಪನು
ಪರಮ ಶತ್ರುವೆ ಮಿತ್ರನಾಗುವ
ತರಳೆ ಕೇಳಿದು ಕಾಲಮಹಿಮೆಗಳಿಂದಳಾ ಧಾತ್ರಿ ||೨೮||

ಕಮಲ ನೀರೊಳಗಿರಲು ನೇಸಱು
ಕಮಲ ಬಾಂಧವನೆನಿಸಿ ಪೊರೆಯುವ
ನಮಲ ಜಲ ಬರಿದಾಗೆ ದಹಿಸುವ ತಾನೆ ಕುಸುಮಗಳ ।
ಕಮಲಸಖಕುಲ ಜಾತ ರಾಘವ
ಕಮಲಮುಖಿ ನುಡದಿಹನೆ ಮೇಣಾ
ಕುಮತಿ ಕೋಸಲೆ ಬಿಡುವಳೇ ಹೇಳೆಂದಳಾ ತರುಣಿ ॥೨೯॥

ಪತಿಯೊಲವು ನಿನಗುಂಟು ಸರ್ವದ
ಹಿತನು ವಶವೆನಗೆಂಬ ಗರ್ವದಿ
ಪತಿಹೃದಯ ತುಂಬಿರುವ ಕಲ್ಮಷವರಿಯದಿರುತಿರುವೆ ।
ಹಿತವಚನವಾಡುವನು ಮೇಲುಪ
ಹತಿಯ ನೆನೆವನು ಮನದಿ ನೃಪತಿಯ
ಕೃತಕ ನುಡಿಗಳ ನಂಬಿ ಕೆಡಬೇಡೆಂದಳಾ ಕುಬುಜೆ ॥೩೦॥

ಅಟ್ಟಿ ಭರತನ ತನ್ನ ತನಯಗೆ
ಪಟ್ಟಗಟ್ಟಿಸಿ ನಿನ್ನ ಯಮಪುರಿ
ಗಟ್ಟಿ ಸುಖಸಾಮ್ರಾಜ್ಯದಲಿ ಭೋಗಿಪಳು ಕೌಸಲ್ಯೆ ।
ಪಟ್ಟಿರುವೆ ನೀನೆಗ್ಗತನದಿಂ
ಕೆಟ್ಟ ನಿನ್ನೊಳು ಜನಿಸಿ ತಾ ಪರ
ವುಟ್ಟನಾರ್ದ ಭರತನೆಂದಳು ಧಾತ್ರಿ ಖಾತಿಯಲಿ ॥೩೧॥

ಕುಲಕೆ ಕೀರುತಿಯಹುದು ಜನಮನ
ಕೊಲವ ತರುತಿಹುದಿಂದು ರಾಮಂ
ಗಿಳೆಯ ನೀಡಲ್ಕೆನಗು ಸುಖ ಮತ್ತಿದರ ಫಲಗಳನು ।
ತಿಳಿಯೆ ಭೀಕರ ಪತನ ಕೇಕಯ
ಕುಲಲಲಾಮಗೆ ಭರತಕುವರಂ
ಗಿಳೆಯೊಳಿನ್ನುಳಿವಿಲ್ಲಕಟ ಹೋಗೆಂದಳಾ ಧಾತ್ರಿ ॥೩೨॥

ಕೇಳುತುಮ್ಮಳದಿಂದ ಕುಬುಜೆಯು
ಕೌಳಿಕದ ಮಾತುಗಳ ನಂಬುತ
ಕೋಳುವೋದಳು ಕೈಕೆ ಪರಿಭವವಾಯ್ತು ತನಗೆನುತ ।
ಕಾಳಮತಿಯನುವರಿತು ಮಾಯಾ
ಜಾಳಿಗೆಯನೊಡ್ಡಿದಳು ಭೂಮಿಯು
ನಾಳುವೊಡೆ ರಘುರಾಮ, ಕಱುಬಿದಳಾ ಸರೋಜಾಕ್ಷಿ ॥೩೩॥

ಹತ್ತುದೆಸೆಗಳನೊಳಗು ಗೆಯ್ದ ನೃ
ಪೋತ್ತಮನ ಸುಶ್ರೋಣಿ ಮಾರಿಯ
ಕುತ್ತಕೊಳಗಾಗುತ್ತ ನೊಂದಳು ನೆಱವಣಿಗೆಗುಂದಿ ।
ಮೃತ್ಯುವಿಗೆ ತುತ್ತಾದ ಭರತಂ
ಗೆತ್ತ ಸಾಮ್ರಾಜ್ಯೋಪ ಭೋಗಗ
ಳೆತ್ತ ಸುಖವೆಂದೊರಲಿದಳು ಸುಕುಮಾರಿ ದುಃಖದಲಿ ॥೩೪॥

ನೋಯಲಿಲ್ಲವೆ ಕದ್ರು ವಿನತೆಯು
ಮಾಯಜಾಲದಿ ಸುರುಚಿ ಕರುಬುತ .
ಹೇಯದಿಂದವಗಡಿಸಲಿಲ್ಲವೆ ವರಸುನೀತಿಯನು ।
ರಾಯತನವಂತಿರಲಿ ಬಂಧನ
ದಾಯತಿಕೆ ಭರತಂಗೆ ನೃಪತಿ ಸ
ಹಾಯ ತಪ್ಪಲು ಹಾನಿಯಾದಪುದೆಂದಳಾ ನಾರಿ ॥೩೫॥

ಸಿಡಿಲೆರಗಿದಂತಾಯ್ತು ಮೇದಿನಿ
ಕೆಡಹಿ ನುಂಗಿದೊಲಾಯ್ತು ಭಯದಿಂ
ನಡುಗಿ ತನಗಿನ್ನಡವಿಯೇ ಗತಿಯೆನುತ ಹಲುಬಿದಳು ।
ಪೊಡವಿಪತಿ ಕೌಸಲ್ಯೆ ತಂತ್ರದಿ
ಮಡುಹಿದಳು ಕೌಳಿಕದಿ ತನ್ನನು
ಕಡೆಗೆ ಕರುಣದೊಳೆಚ್ಚರಿಸಿದಳೆ ಸಮಯದಲಿ ಧಾತ್ರಿ ॥೩೬॥

ಕೋಪ–ದುಃಖಗಳೆರಡು ಭಾಧಿಸೆ
ರೂಪ ಮಾಸಿತು ಚೆಲುವು ಬೀತುದು
ಪಾಪಿ ನುಡಿಗಳು ಕಿವಿಗೆ ಹಿತಮಾ ರಾಮ ಹಗೆಯಾಗೆ ।
ತಾಪಹರಣಕೆ ಬಗೆಯನರಿಯದೆ
ಪಾಪಿ ಪಾದದಿ ಶರಣುವೊಕ್ಕೊಡ
ನಾ ಪಯೋಧರೆ ಮನವ ಕಲಕಿದಳಾ ಕುರೂಪಿಣಿಯು ॥೩೭॥

ಅರಿಯದಾದೆನು ಶತ್ರುಮಿತ್ರರ
ಪರಿಯ ಪಕ್ಕಾದೆನು ದುರಾತ್ಮರ
ಕಿರುಕುಳಕೆ ಮೈಸೋತು ಸಿಲ್ಕಿದೆನಕ್ಕ ಬಲೆಯೊಳಗೆ ।
ಹಿರಿದು ದುಸ್ವಪ್ನಗಳ ಕಾಣುವೆ
ನಿರುಳು ದೇಸಿಗರಂತೆ ವನದಲಿ
ಭರತ ಚರಿಪುದ ಕಂಡೆನಕಟೆಂದಳು ಸರೋಜಾಕ್ಷಿ ॥೩೮॥

ಸವತಿ ಸಹವಾಸದಲಿ ಬದುಕುವ
ಬವಣೆಯೇಕಿದು ರಾಮರಾಜ್ಯದಿ
ನವೆವ ಕೋಟಲೆಯೇಕೆ ಕೇಕಯ ವಂಶದಲ್ಲುದಿಸಿ ।
ಹವಣರಿಯೆ ಪರಿಭವದಿ ಸಾರ್ವೆನು
ತವರುಮನೆಯುಂ ಬಂಚಿಸಿದ ವಿಧಿ
ಬುವಿಯೊಳಗೆ ಬೆಸಕೆಯ್ವರಾರೆಂದಳಲಿದಳು ಕೈಕೆ ॥೩೯॥

ಎಲೆ ಮುಗುಧೆ ಬಳಲದಿರು ಭರತಂ
ಗಿಳೆಯ ಸಾಧಿಪ ಮಂತ್ರವೊರೆವೆನು
ಹಳುವದಲಿ ರಘುರಾಮ ಚರಿಸುವ ತೆರದಿ ಮಾಡುವೆನು ।
ತಿಳಿಯೆ ದೇವಾಸುರರ ಪೂರ್ವದ
ಕಲಹದಲಿ ನೃಪ ನಿನಗೆರಡು ವರ
ಗಳನು ಕೊಟ್ಟುದ ಮರೆತೆಯಾ ಹೇಳೆಂದಳಾ ಧಾತ್ರಿ ॥೪೦॥

ಒಂದು ವರದಲಿ ಬೇಡುರಾಜ್ಯವ
ಕಂದ ಭರತಂಗೆರಡನೆಯ ವರ
ದಿಂದ ರಾಮನು ಹೊಗಲಿ ಹಳುವವ ವರುಷ ಹದಿನಾಲ್ಕು !
ಕಂದ ಮೂಲ ಫಲಾಶನದಿ ಮುನಿ
ಯಂಧದಲಿ ನಾರುಡೆಯ ಜಟಿಧರಿ
ಸಿಂಧುಮುಖ ವನವಾಸಮಾಡಲ್ಕೆಂದಳಾ ದುರುಳೆ ||೪೧||

ಸವತಿಯರಿಗುಲ್ಲಾಸ ಭಂಗವ
ಜವದಿ ಮಾಡಿನ್ನೇಳು ತಳುವಿದೊ
ಡವರ ಬಯಕೆಯು ಸಾಧಿಪುದಕಿಂ ಬೇಗ ನೆನೆಕಾರ್ಯ |
ಅವನಿಪತಿ ಬಂದೊಡನೆ ಯಾಚಿಪು
ದವನಿಜಾಪತಿಯಾಣೆ ಪಡೆಯುತ
ದವನಿಯನು ಭರತಂಗೆ ಪಡೆನೀನೆಂದಳಾ ಧಾತ್ರಿ ||೪೨||

ಜಾಣೆ ಮಂಥರೆ ಭರತಗೆಣಿಸಿದ
ಕೇಣಮಂ ಮುರಿಯುತ್ತ ಸಲಹಿದೆ
ಮೌನದಿಂದಾನಿನ್ನು ಹೊಗುವೆನು ಕೋಪ ಗೃಹಮನ್ನು |
ಕ್ಷೋಣಿಪತಿ ಬರುವನದೊ ಸಂಶಯ
ಮೇಸಿದಕೆ ವರಯುಗಳ ಬಲದಿಂ
ಕ್ಷೋಣಿಯೊಡೆತನ ಭರತಗೆಂದಳು ರಾಣಿ ಸುಶ್ರೋಣಿ ||೪೩||

ಕಳುಹಿ ಕುಬಜೆಯ ಕೈಕೆ ದುಃಖದಿ
ಬಳಲಿ ರತುನಾಭರಣ ಮುಕ್ತಾ
ವಳಿಯ ಹರಿದೊಗೆಯುತ್ತ ಹೊಕ್ಕಳು ಕೋಪನಿಲಯವನು |
ಉಳಿದು ಪೀತಾಂಬರವ ಮಾಸಿದ
ಮಲಿನ ವಸನವನುಟ್ಟು ನೆಲದಲಿ
ಮಲಗಿದಳು ರಘುರಾಮಚಂದ್ರನ ಬಗೆಯ ನೆನೆಯುತ್ತ ||೪೪||

## ವಿಶ್ರಾಮ ೩

ಸೂ|| ಒಲಿದು ಕೊಡು ಭರತಂಗೆ ರಾಜ್ಯವ
ಹಳುವದೊಡೆತನ ನೀಡಿ ರಾಮನ
ತೊಲಗಿಸೆಂದಾ ಕೈಕೆ ಭೂಪನ ಬೇಡಿದಳು ವರವ

ದುಷ್ಟಮಂತ್ರದ ನೆಲದಿ ನೆಟ್ಟಳು
ದುಷ್ಟಕಾಲದ ಬೀಜ ಮಂಥರೆ
ದುಷ್ಟ ಕಾವಳ ನೀರನೆರೆಯುತ ಫಲವಪೊಂದಿದಳು |
ಪುಟ್ಟಿದುವು ವರವೆಂಬ ದುಷ್ಫಲ
ಕೊಟ್ಟಳಾ ನೃಪಸತಿಗೆ ಮುಂದಿನ
ಕಷ್ಟವರಿಯದೆ ಮುಗುಧೆ ಸೋತಳು ಕುಬುಜೆ ನುಡಿಗಳಿಗೆ ||೧||

ಹರಿದು ತಾರಾಹಾರ ಪೀಠಾಂ
ಬರವನೊಲ್ಲದೆ ಮಲಿನವಸನದಿ
ಬರಿಯ ನೆಲದೊಳು ಮಲಗಿ ಕಬರಿಯ ಕೆದರಿ ನಿಷ್ಠುರದಿ |
ತರುವನೊಸಗೆಯ ನೃಪತಿಗುಬ್ಬಸ
ತರುವ ಮೃತ್ಯುವಿನಂತೆ ಮರವ
ಟ್ಟೊರಗಿದಳು ಸತಿ ಕೋಪನಿಲಯದಿ ಪತಿಯುಬರವರಿತು ||೨||

ಪರಮ ಕರುಣಾವನಧಿ ನಮಗಿ
ನ್ನರಸನಹ ಲೋಕಾಭಿರಾಮಗೆ
ಧರೆಯ ಯೋಗಕ್ಷೇಮ ಸೇರ್ದುದು ಪಟ್ಟಬಂಧನದಿ |
ಅರಸ ತರಣಿಕುಲ ಪ್ರದೀಪನೊ
ಳಿರಿಸುತಧಿಕಾರಗಳನುಚಿತದಿ
ಹರುಷಗೊಳಿಸಿದ ತನ್ನ ಪ್ರಜೆಗಳನೆಂದು ಪುರಹೊಗಳೆ ||೩||

ಪಟ್ಟದೊಸಗೆಯೊಳುತ್ಸವಂಗಳ
ಪಟ್ಟಣದ ಜನವೆಸಗಲತ್ತಲು
ಪಟ್ಟರಲು ನೃಪನರಸಿ ಹೊಲ್ಲಿಹವೆಸಗುತಂಡಲೆದು ।
ಪಟ್ಟವಾಗದು ಹರಿಗೆ ದಶರಥ
ನಟ್ಟುವನು ವನಕೆಂಬ ರೋಷದಿ
ಸಿಟ್ಟನಲಿ ಕೆಂಪಾಗುತಸ್ತಾಚಲವ ರವಿ ಸಾರ್ದ ॥೪॥

ಅರಸಗುತ್ಸವಮಾಯ್ತು ರಾಮಂ
ಗರಸುತನವೀವಂದು ತಾನೇ
ತರಳನ ಪ್ರಜೆಯೆಂಬ ಗರ್ವದಿ ಹಿಗ್ಗಿದನು ನೃಪತಿ ।
ಮೆರೆದು ವರ್ಧಿಪ ಸುತಗೆ ಸೀತಾ
ವರಗೆ ಮಂಗಳವೆಸಗುವಾತುರ
ಭರದೊಳಿರುತಿರಲಸ್ತಮಿಸಿದನು ಸೂರ್ಯ ಪಶ್ಚಿಮದಿ ॥೫॥

ಜನಗಳುತ್ಸಹಕಡ್ಡಿಯೆಂಬುದ
ದಿನಪನೊರಿವಂತಸ್ತಮಿಸಿದನು
ವನಜಮುಖಿ ಕೈಕೇಯಿಯರಮನೆಗೈದ ಭೂಪಾಲ ।
ತನಯ ರಘುರಾಮಾಭಿಷೇಕದ
ಘನ ಸುವಾರ್ತೆಯೊಳವನು ಹರುಷಿಸೆ
ನೆನೆದು ಬಂದನಮೋಘ ಗುಣ ಸಂಪನ್ನಕಾತರದಿ ॥೬॥

ದಾರವಟ್ಟದೊಳಿಲ್ಲವೆಂದಿನೊ
ಳಾ ರಮಣಿ ತಾನಿದಿರುಗೊಳ್ಳಳು
ಹಾರವಿಸಿ ಕರಯಲ್ಕೆ ಬಾರಳು ಭೀತಿ ಮೂಡಿದುದು ।
ಆರು ನುಡಿಯರು ದುರದುರನೆ ಪಡಿ
ಹಾಱಿಗಳು ನೋಡುವರು ವಹಿಲದಿ
ನಾರಿಯನ್ವೇಷಣದಿ ಸೋತ ನೃಪಾಲ ತರಹರಿಸಿ ॥೭॥

ಜಿನುಗುವಮತಿ ಛಲಗಾತಿ–ನಿರ್ನೆರ
ಮಿನಿತು ಕಣ್ಮರೆಯಹಳೆ ಪೊಲ್ಲದು
ವನಜಮುಖಿಯೆಲ್ಲಿಹಳೊ ಕಾಣೆನೆನೆತ್ತ ದಡದಡಿಸಿ ।
ಜನಪ ಪೆಳ್ಪಳಿಸುತಲಿ ನೊಂದಂ
ಮನುಮಥಾಗ್ನಿಗೆ ಸಿಲುಕಿ ನಿಷ್ಠುರ
ಮನದೊಳಡಗಿದ ಪರಿಗೆ ಕಾರಣ ನೆನೆದು ಕಂಪಿಸಿದ ॥೮॥

ನುಡಿಯರೊರ್ವರು, ಕೋಪ ನಿಲಯುದ
ಕಡೆಗೆ ದಿಟ್ಟಿಯ ನಿಲಿಸಿ ನಿಂದಿರೆ
ನಡುಗಿ ದೂವ್ವಾಳಿಸಿದ ನೃಪನುದ್ವೇಗ ಮನದಿಂದ ।
ಕೆಡೆದ ಸತಿಯಂ ಕಂಡ ಭೂಷಣ
ತೊಡವು ಚೆಲ್ಲಿರೆ ಸನಿಯಕೈದುತ
ಮುಡಿಯ ನೇವರಿಸುತ್ತ ನೋಡಿದ ಕರುಣ ದೃಷ್ಟಿಯಲಿ ॥೯॥

ನೊಂದ ಹರಿಣಿಯೊಲಾ ಸುಮಂಗಳೆ
ಕಂದಿದವಯವದಿಂದ ಪಟ್ಟಿರ
ಲಂದು ಪೆಂಪಳಿದವಯವದಿ ಕೋಟಲೆಗೆ ವೈಗೊಡುತ ।
ಬಂದು ತಬ್ಬೈಸುತಲಿ ನೃಪ ಜವ
ಗುಂದಿ ಗಲ್ಲವ ಪಿಡಿದು ಮುದ್ದಿಸಿ
ಸುಂದರಾಂಗಿಯನೆಳ್ಚರಿಸಿ ನುಡಿಸಿದನು ದೈನ್ಯದಲಿ ॥೧೦॥

ಸರಸಿಜಾನನೆ ಪರುಶವಿಸು ದು
ಸ್ತರದ ಕೋಪವಿದೇಕೆ ಕಾಣದ
ಕುರುಹಿದೇನಿದು ಕೋಪಗಾಣದ ರೂಪು ಭಯಗೊಳಿಸಿ ।
ತರಹರಿಸುತೆನ್ನಸುವ ಚಾಳಿಸಿ
ಮರವಡುವರೇ ರಮಣಿಯೇಳೌ
ಪರಮ ಸಂತಸವಾರ್ತೆಯಿಂ ತೊಡೆ ಕೋಪ ನೀನೆಂದ ॥೧೧॥

ಪತಿಯನಾಲೋಕಿಸದೆ ಮುಳಿಸಿಂ
ಪತಿಯೆ ಕರಗಳ ನೂಕಿ ಸೆರೆಬಿಗಿ
ಯುತಿರೆ ದುಗುಡುವ ಕೆತ್ತು ಕಡುಗಾಹೇಱಿದಳು ನಾರಿ ।
ಕ್ಷಿತಿಪಗಿರಿದಂತಾಯ್ತು ಜವಗುಂ
ದುತಲಿ ಕೋಪದೊಳೀನ ನೆನೆವಳೊ
ಸತಿಯೆನುತ ನಿರ್ವಿಣ್ಣ ಭಾವದಿ ಮತ್ತೆ ನುಡಿಸಿದನು ||೧೨||

ದೇವಿ ಪಲ್ಲಟವೇಕೆ ಬಿಡುಬಿಡು
ಕೌವರಿಂದಲಿ ಬಂದೊಡೆನಗೀ
ಹೇವಮಾದುದು ಕಟಕಿಯುಪ್ಪುದು ನಿನ್ನ ಕಡುಗೋಪ
ಕೋವಿದಳೆ ಶುಭಸಮಯದಲಿ ದುಃ-
ಖಾವಲಂಬನವೇಕೆ ನಿನಗಿ
ನ್ನಾವನಿಂದೊದವಿದುದು ಕಷ್ಟನೀ ಹೇಳೆಂದನಾ ನೃಪತಿ ||೧೩||

ಆರು ನಿನಗಹಿತವನು ಬಯಸಿದ
ನಾರು ದುಃಖವನೊಡ್ಡಿದರ್ ವೇ
ಣಾರ ಶಿರ ಹೋಳಾಗಿ ಹೋಹುದೊ ಮಸೆದ ಕಣೆಗಳಲಿ ।
ಆರು ನಿನಗನುಚಿತವ ಬಗೆದರ
ದಾರಿಗಪಯಶ ಕೊರಳಮೆಟ್ಟಿತೊ
ಆರೊಳೀನಪರಾಧ ಮಾಯ್ತೊರೆಯೆಂದನಾ ಭೂಪ ||೧೪||

ನಿನ್ನ ಶತ್ರುಗಳಮರರಾಗಲಿ
ಗಣ್ಯ ಮಾಡೆನು ನಿನ್ನೊಳನುಚಿತ
ಮನ್ನು ನೆನೆದವ ರಾಮನಾದರು ಶಿಕ್ಷಿಸುವೆನೀಗ ।
ಇನ್ನು ದುಃಖಮಿದೇಕೆ ಬಿಡುಬಿಡು
ನಿನ್ನ ಮನದಭಿಲಾಷೆ ಸಲಿಸುವೆ
ಪೆಣ್ಮಣಿಯೆ ಕೋಪಿಸದಿರೌ ಬಾರೆಂದ ಹಲುಬುತಲಿ ||೧೫||

ತುರುಬು ಕಟ್ಟೇಳೆ ರಮಣಿ ನವ್ಯಾಂ
ಬರವನುಡು ಮೇಲೇಳು ರಘುವರ
ಧರಣಿಪಾಲಕನಪ್ಪನುದಯದಿ ನಿನ್ನ ಹರಕೆಯುಲಿ ।
ಭರತನಿಲ್ಲದ ದುಃಖ ನಿನಗಾ.
ವರಿಸಿತೇಯೆನ್ನಾಣೆ ನಲ್ನುಡಿ
ಯೊರೆದು ಸಂತಸದಾಳು ಬೇಡುವೆನೆಂದನಾ ಭೂಪ ||೧೬||

ದೇವಿ ನಿನ್ನದು ಸಕಲ ಸಂಪದ
ಜೀವ ಮಾನ ಪ್ರಾಣ ನಿನ್ನದು
ಈ ವಿವಿಧ ಪರಿವಾರ ರಾಜ್ಯೈಶ್ವರ್ಯ ನಿನ್ನವಿವು ।
ಹೇವಗೊಳಿಸದೆ ಪರುಠವಿಸು ರಾ
ಜೀವಲೋಚನೆ ಹರ್ಷಮುಖದಲಿ
ಧಾವತಿಯ ತೊರೆ ಪೇಳು ನಿನ್ನಿಷ್ಟಾರ್ಥವೇನೆಂದ ||೧೭||

ಏಳು ಪುಸಿಯನ್ನೊರೆಯೆ ಸತ್ಯವ
ಕೇಳು ನಗೆಮೊಗದಿಂದ ನೀನಿ
ನ್ನೇಳು ಸುಂದರ ತನುವ ಸಿಂಗರಿಸೇಳು ಲಲಿತಾಂಗಿ ।
ಏಳು ಶ್ರೀರಾಮಾಭಿಷೇಕವ
ನಾಳೆ ರಚಿಸುವೆ ಧರೆಯನಾಳುವ
ನೀಲಲೋಚನ ನಿನ್ನ ಹರಕೆಯೊಳೆಂದನವನೀಶ ||೧೮||

ಬೇಡಿದೊಡೆ ನಿನಗಿಲ್ಲವೆಂಬೆನೆ
ಬೇಡಲೇತಕೆ ದೇವಿ ಕೋಸಲ
ನಾಡು ನಿನ್ನದು ಭರತನಾಳಲಿ ನಿನ್ನ ಮನವಿರಲು ।
ಕೋಡದಿರು ರಘುರಾಮ ನಾಣೆಯೊ
ಳಾಡಿತವ ನಡೆಸುವೆನು ರಮಣಿ ಸ
ಗಾಢಿಕೆಯೊಳಿನ್ನೇಳು ಸಿಂಗರಿಸೆಂದ ಭೂಪಾಲ ||೧೯||

ಸತಿಯ ಮೋಹದ ಬಲೆಗೆ ಸಿಲ್ಕಿ
ಕ್ಷಿತಿಪ ರಘುವರನಾಣೆಯಿಡುತಿರೆ
ಮತಿವಿಹೀನೆಯು ಮನದಿ ಹಿಗ್ಗುತ ಮೆಲ್ಲನೇಳುತ್ತ ।
ಪತಿಯ ನೋಡದೆ ವಸ್ತ್ರ ಸಂವರಿ
ಸುತಲಿ ಕಬರಿಯ ಕಟ್ಟಿ ರಾಯನ
ಮತಿಗೆ ಮಸಿಯಂ ಬಳಿದು ನಿಂದಳು ಮೌನದಲಿ ದೂರ ॥೨೦॥

ಸುರಮುನಿಗಳಭಿಮಾನಿಗಳು ಪುರ
ವರದ ನರನಾರಿಯರು ರಾಮಗೆ
ಧರೆಯನೀವುದ ಬಯಸಿ ಕಾದಿಹರೌ ಸರೋಜಾಕ್ಷಿ ।
ಪರಮಪುಣ್ಯ ಶ್ಲೋಕಹಿತೆ ನೀ
ನಿರದೆ ಮಂಗಳವೆತ್ತ ತನಯನ
ಹರಸು ಬಾ, ಬಾ–ವಾದ್ಯವೇದಧ್ವನಿಯು ಕೇಳುತಿದೆ ॥೨೧॥

ಬೇಡ ಬಲ್ಲೆನು ಬೇಡಿದೊಡೆ ನೀ
ನೀಡಲಾಪೆಯ ಕಾಂತ ಕೇಳ್ವುದ
ನೀಡುವೊಡೆ ತತ್ಕ್ಷಣದಿ ಬೇಡುವೆನು ವರವ ।
ನೋಡು, ದೇವಾಸುರರ ಯುದ್ಧದಿ
ನೀಡಿದೆರಡು ವರಂಗಳನು ನಾ
ಬೇಡುವೆನು ನೆನಪಿಹುದೆ ಕೊಡುವುದಕೆಂದಳಾ ಕೈಕೆ ॥೨೨॥

ವಾರಿಜಾಕ್ಷಿಯ ಕುರುಳ ತಿದ್ದುತ
ವಿಾರಲರಿವೆನೆ ಕೊಟ್ಟ ಭಾಷೆಯ
ನೀರೆ ಯಾಚಿಸದಿರಲು ಮರೆತಿಹೆ ಕೊಟ್ಟೆನಿನ್ನೇಳು ।
ಸಾರವೇದ ಪುರಾಣ ಪುರುಷನು
ದಾರ ಸತ್ಯಾಶ್ರಯ ನಿರಾಮಯ
ಭೂರಮಾವರ ರಾಮಚಂದ್ರಮನಾಣೆ ಹೇಳೆಂದ ॥೨೩॥

ರೂಪ-ಮಾತುಗಳಿಂದ ಬಿಗಿದಾ
ಭೂಪತಿಯ ಬಳಲಿಸುತ-ವರಗಳ
ನಾಪನಿತು ಪಡೆವುದಕೆ ಭರವಸೆ ಪೊಂದಿರಲು ಕೈಕೆ
ಶ್ರೀಪತಿಯ ಮೇಲಾಣೆಯಿಡುವ ವಿ
ಲಾಪವರಿಯದೆ ಸತಿಯು ಮೋಹದ
ತಾಪದಿಂ ಮನಸೋತ ದಶರಥ ಮತ್ತೆ ಮಜ್ಜಿಸುಂದಿ. ||೨೪||

ಸತ್ಯವೇ ರವಿಕುಲದರಾಯರ
ನಿತ್ಯ ಧರ್ಮ ನೃಪೋತ್ತಮನೆ
ಸತ್ಯ ನಿನ್ನಾಶ್ರಯವ ಪೊಂದಿತು-ನಿನಗುಚಿತವೊರೆದೆ ।
ಪೃಥ್ವಿಯಲಿ ನಿನಗಾರು ಧೊರೆ ನೀ
ಸತ್ವಗುಣ ಸಂಪನ್ನ ಪೂರ್ವದೊ
ಳಿತ್ತ ವರಗಳನೀಗ ನೀಡೆಂದಳು ಸರೋಜಾಕ್ಷಿ ||೨೫||

ತರಣಿಕುಲ ಸಾಮ್ರಾಜ್ಯದಧಿಪತಿ
ಭರತನಾಗಲಿ ಸಿಂಹಪೀಠದಿ
ಮೆರೆಯಲಿಂದೇ ಮೊದಲ ವರದಲಿ ಭೂಮಿಪತಿಯಾಗಿ ।
ಎರಡನೆಯ ವರ ಕೇಳು ರಾಮನು
ಧರಿಸಿ ಜಟೆ ನಾರುಡೆಯ ಹಳುವದಿ
ವರುಷಗಳು ಹದಿನಾಲ್ಕು ವಾಸಿಸಲೆಂದಳಾ ರಾಣಿ ||೨೬||

ಸಿಡಿಲೆರಗಿದಂತಾಯ್ತು ಕೈಕೆಯು
ನುಡಿಸರಳು. ಹಮ್ಮೈಸಿ ಬಿದ್ದನು
ಪೊಡವಿಯಲಿ ಹುರಿಯೊಡೆದು ದಶರಥ ಕೆಡೆದು ಮೂರ್ಛೆಯಲಿ
ಒಡನೆ ಮೈ ತಿಳಿದೆದ್ದು ರಾಮಂ
ಗಡವಿವಾಸವೆ ? ಶಿವಶಿವಾಯೆಂ
ದೊಡನೆ ಬೀಳ್ವನು ತಿಳಿಯುತೇಳ್ವನು ಸಿಲ್ಕಿಕೋಟಲೆಗೆ ||೨೭||

ಭೂವನಿತೆ ವರಿಸಿದಳು ರಾಮನ
ದೇವಮುನಿಸುರರೊಲಿದು ವಂದಿಪ
ದೇವ ಜ್ಯೇಷ್ಠನು ರಾಜ್ಯವವನದು–ನಮ್ಮ ಪದ್ಧತಿಗೆ ।
ಹೇವಮಲ್ಲವೆ ಭರತನಾಳ್ದರೆ
ಭಾವಿಸದಿರೀ ಬಯಕೆ ಕೈಕಾ
ದೇವಿ ಭರತಗೆ ಮಿಗಿಲು ರಘುಪತಿ ನಿನಗೆ ಕೇಳೆಂದ ॥೨೮॥

ಪೊಡವಿಯಾಳಲಿ ಭರತ ರಾಮಂ
ಗಡವಿಯೊಡೆತನವೇಕೆ ? ವರಗಳ
ಪಡೆದು ದುರ್ವಿನಿಯೋಗ ಮಾಳ್ಪರೆ ಹೇಳು ನೀನೆನಲು ।
ಸಿಡಿದು ಕೋಪದಿ ಕಣ್ಗಳಲಿ ಕೆಂ
ಗಿಡಿಯು ಕಾರುತ ನಾಥನೆಂಬುದ
ಕಡೆಗಣಿಸುತುದ್ದುರುಟು ನುಡಿಗಳನೊರೆದಳಾ ಕೈಕೆ ॥೨೯॥

ಅಂಧಳಾದಳು ಕೈಕೆ ಕೋಪದಿ
ನೊಂದು ನುಡಿಯಲು ಭೂಪ ಭರತನೊ
ಳಿಂದು ಮಮತೆಯ ತೊರೆದೆಯಾ ಮಗನಲ್ಲವೇ ನಿನಗೆ ।
ಇಂದು ಮರೆವೆಯ ಭರತನಂ ನೀ
ನಂದು ವರಿಸಿದೆ ಯೆನ್ನ ಕಾಮನ
ದಂದುಗವ ಪರಿಹರಿಸೆ ನೃಪ ಹೋಗೆಂದಳಾ ಕೈಕೆ ॥೩೦॥

ಎನ್ನ ಶತ್ರುಗಳಮರರಾಗಲಿ
ಅನ್ಯರೇಂ ರಘುರಾಮನಾಗಲಿ
ಇನ್ನಳಿದರೆಂದೊರೆದ ಪೌರುಷವೆಲ್ಲಿ ಮರೆಯಾಯ್ತು ।।
ನಿನ್ನ ಸುತಗೀ ರಾಜ್ಯವೀಯುವೆ
ನೆನ್ನುವೀ ನಾಲಿಗೆಯು ಹೊರಳಿತೆ ?
ಗನ್ನಕತಕವ ತಿಳಿಯೆನೆಂದಳು ಕೈಕೆ ಕೋಪದಲಿ ॥೩೧॥

ಬೇಡುವೆನೆ ಬಹುರುಚಿಯ ಭಕ್ಷ್ಯವ
ಬೇಡುವೆನೆ ಮೃಷ್ಟಾನ್ನ ಭೋಜ್ಯವ
ಬೇಡುವವಳಾನಲ್ಲ ನಿಮ್ಮಲಿ ರತ್ನಪದಕಗಳ ।
ಕಾಡಿದರೆ ಕೇಳಿದೆನು ಕೊಡದೊಡೆ
ಕಾಡುವವಳಾನಲ್ಲ ನೀವ್ಮೊದ
ಲಾಡಿದಾ ನುಡಿ ಮಾಸಿತೆಂದಳು ಕ್ರೂರನುಡಿಗಳಲಿ ॥೩೨॥

ಹಿಂದೆ ಶಿಬಿ ಭೂಪಾಲ ಪಕ್ಷಿಗೆ
ನೊಂದು ದೇಹವನಿತ್ತ. ಸಂತಸ
ದಿಂದ ಮೌನಿ ದಧೀಚಿ ಜೀವವನಿತ್ತನಿಂದ್ರಂಗೆ ।
ಇಂದು ಭರತಂಗಿಳೆಯ ಬಯಸಿದೆ
ನೆಂದು ಭೂಪತಿ ಸತ್ಯವಾಕ್ಯವ
ಬಂಧಿಸಿದಿರೇ ಹೋಗಲೆಂದಳು ಕೈಕೆ ಕೋಪದಲಿ ॥೩೩॥

ಕಿವಿಯೊಡೆದು ಕಣ್ಣುಡಿದು ಖಡ್ಗದಿ
ಸವರಿ ಗಂಟಲಕೊಯ್ಯುತಂಗಾಂ
ಗವನು ಶಸ್ತ್ರಗಳಿಂದ ಭೇದಿಸಿದೊಲು ನೃಪೋತ್ತಮನು ।
ಬುವಿಯೊಳುರುಳಿದನೊಡನೆ ತಿಳಿಯುತ
ವಿವಿಧ ಪರಿಯಿಂದಳಲುತಕಟಾ
ಯುವತಿ ಕಂಟಕಿ ಮೃತ್ಯುವಾದಳೆನುತ್ತ ಮರುಗಿದನು ॥೩೪॥

ಇರಿದಳೇ ನುಡಿ ಶರದಿ ಹೃದಯುವ
ಹರಿದಳೇ ರವಿಕುಲದ ಧರ್ಮವ
ಮುರಿದಳೇ ಪೀಳಿಗೆಯ ಮಾರಿಗೆ ಬಲಿಯ ನಿಕ್ಕಿದಳೇ ।
ಧರೆಗಮಂಗಳ ತಂದಳೇ ರಘು
ವರಗೆ ಚೀರಾಜಿನವೆ ಹಾಹಾ
ಕರೆದಳಪಮೃತ್ಯುವನು ಮಾರಿಯೆನುತ್ತ ಹಲುಬಿದನು ॥೩೫॥

ಪುರಜನರು ಕಾದಿಹರು ಮುನಿಗುರು
ವರರು ಮೋದದೊಳಿಹರು ರಾಮಂ
ಗೊರೆವೆನೇನನು ಭರತನಿದನೊಪ್ಪುವನೆ ಕಾತರಿಸಿ।
ತೊರೆದು ಧೈರ್ಯವ ನೃಪತಿ ಕಂಪಿಸಿ
ಸೆರೆಬಿಗಿಯು ತುಪರೋಧದಿಂ ಸರ
ಸಿರುಹ ವದನೆಯ ಕುರುಳ ತಿದ್ದುತ ಪೇಳ್ದನಿಂತೆಂದು ॥೩೬॥

ರಮಣಿ ಮರುಳಾಡದಿರು ನಿನ್ನನು
ಪಮದ ಗುಣವೊತ್ತರಿಸಿ ರಾಮಂ
ಗಮಿತ ಕಷ್ಟವನೇಕೆ ಬಯಸುವೆ ಭೇದವೆಣಿಸುತ್ತ।
ಸುಮತಿ ಕೇಕೆಯ ಕುಲಶಿರೋಮಣಿ
ಸಮನಿಸದು ನಿನಗೀ ದುರಾಗ್ರಹ
ಕಮಲಲೋಚನೆ ಕರುಣಿಸೌ ರಘುರಾಮಚಂದ್ರಮನ ॥೩೭॥

ಕುಟಿಲ ಕಟಕಿ ಕರಾಳವದನೆ ಭ್ರು
ಕುಟಿಯ ಕುಣಿಸುತ ಗುಬ್ಬವಿಕ್ಕಿಸಿ
ಹಟವ ತೊಟ್ಟಿರೆ ನೆನೆದು ಪರಿಭವ ನೊಂದನಾ ನೃಪತಿ।
ಕಠಿನನುಡಿ ಸರಳೆಸೆಯದಿರು ದು
ರ್ಘಟದ ವರಗಳ ಕೇಳದಿರು ಸಂ
ಘಟಿಸದಿರು ಮಾರಣಕ ಹೋಮವ ದೇವಿ ನೀನೆಂದ ॥೩೮॥

ಭರತ ರಾಘವರೆನ್ನ ಕಣ್ಗಳು
ತರಳೆ ದೂತರನಟ್ಟಿ ಶೀಘ್ರದಿ
ಕರೆಸಿ ಭರತಗೆ ರಾಜ್ಯವೀವೆನು ನಿನ್ನ ಮನದಂತೆ।
ಕರುಮ ಸಿಂಹಾಸನವನೊಲ್ಲನು
ಪರಮಘನ ವೈರಾಗಿ ರಾಮನು
ಭರದೊಳೀವನು ರಾಜ್ಯಕೋಶಗಳನುಜಗೊಲವಿಂದ ॥೩೯॥

ಹಿರಿಯ ಕುವರಗೆ ರಾಜ್ಯವೀವುದು
ತರಣಿ ಕುಲದರಸುಗಳ ನೀತಿಯು
ಹಿರಿಯ ನಾಲ್ವರೊಳಾ ರಘೂತ್ತಮನದರಿನಿಂದವಗೆ ।
ಧರೆಯನೀಯಲು ಮನವ ಮಾಡಿದೆ
ನೆರಡ ಬಗೆದವನಲ್ಲ ಭರತಗೆ
ತರುಣಿಮಣಿ ಕೌಸಲ್ಯೆ ಕೌಳಿಕವೆಸಗಿದವಳಲ್ಲ ॥೪೦॥

ಮೂಢಮತಿಯಿಂ ನಿನ್ನೊಳೊರೆಯದೆ
ರೂಢಿಯಿಂ ಶುಭಲಗ್ನವಿಡೆ ಕೈ
ಗೂಡದಾದುದು ಮನ್ಮನೋರಥ–ಬಲುಗರವ ತೊರೆದು ।
ನೋಡು ಯುವರಾಜ್ಯಾಭಿಷೇಕವ
ಮಾಡುವೆನು ಭರತಂಗೆ ಶೀಘ್ರದಿ
ನೀಡಿದೆನು ವರವೊಂದ ವಸ್ತ್ರಾಭರಣ ಧರಿಸೆಂದ ॥೪೧॥

ವಿದಿತಘನ ಸತ್ಕೀರ್ತಿಯುತ ಗುಣ
ಸದನ ಸೀತಾಕಾಂತ ಭೂಪತಿ
ಪದವ ಕೇಳ್ದವನಲ್ಲ ಬಿಡುಬಿಡು ವಾಯದಪವಾದ ।
ಸದಯದಿಂ ಪೂರಾಯಮಾನದಿ
ಚದುರೆ ಕರುಣಿಸು ರಾಮಚಂದ್ರನ
ಮುದದಿ ಭರತನ ರಾಜ್ಯವೈಭವ ನೋಡಲವನೆಂದ. ॥೪೨॥

ತೊರೆಯಲೇನಪರಾಧ ಗೈದನು
ತರಣಿಕುಲ ಸಿಂಹಾಸನವ ಕೊಡು
ತಿರಲು ರಾಜ್ಯಭ್ರಂಶವೇತಕೆ ರಾಮಚಂದ್ರಮಗೆ ।
ಸರಸಿಜಾನನೆ ಮನವ ಮಥಿಸುತ
ವರವ ಯಾಚಿಸು ವೃದ್ಧಪತಿಯೆಂ
ದಿರದೆ ಛಲದಿಂದಣಕವಾಡದಿರೆಂದ ಭೂಪಾಲ ॥೪೩॥

ಪರಿಕಿಸದಿರೌ ಹೃದಯ ಸೋತುದು
ಇಚ್ಚಿಕೆವಡೆದೆಂ ಹಾಸ್ಯಮೆಸಗದೆ
ಕಚ್ಚಿಬಧಿರು ಸಂಸ್ತೂಯಮಾನನ ಕಾಡಿಗಟ್ಟದಿರು ।
ಇರಲಿ ಯಮಳರೊಲಾ ರಘೂತ್ತಮ
ಭರತ ವೈಭವ ನೋಡಿ ದಣಿಯಲಿ
ಮುರಿಯದಿರು ರಘುವಂಶ ಮೂಲವನೆಂದನವನಿಪತಿ ॥೪೪॥

ಇನಕುಲೋತ್ತಮನಿಂದ ಜೀವನ
ಮೆನಗೆ, ದರುಶನದಿಂದ ಬದುಕಿಹೆ
ವನವ ಪೊಕ್ಕೊಡೆ ರಾಮ ಯಮನಾಲಯವ ಸೇರುವೆನು ।
ಮುನಿಯದಿರು ಪಿಸುಣಿಗರ ನೂಕುತ
ವನಜವದನೆ ವಿವೇಕಿ ವೃದ್ಧನ
ಟೊಣೆಯದಿರು ರಾಘವನ ಕರುಣದಿ ದೇವಿ ಸಲಹೆಂದ ॥೪೫॥

ರೋಷವುಕ್ಕಿತು ಮಾನಿನಿಯ ಮನ
ಮಾಸಿದುದು ಹೃದಯಾಗ್ನಿ ಹೊತ್ತಿತು
ನಾಶಮಾದುದು ದೈನ್ಯ ಕೋಪವ ಬೆಳೆಸುತಡಿಗಡಿಗೆ ।
ಬೀಸರದ ನುಡಿಯೇಕೆ ಬೇಡುವೆ
ದೇಸಿಗರೊಲೀ ದೈನ್ಯವೇಕೆ ವಿ
ನಾಶಮಾಗದೆ ವಂಶ ನಿನ್ನಿಂದೆಂದಳಾ ಕೈಕೆ ॥೪೬॥

ಬಾಯಬಲ್ಲಿದನಾದೆ ವಿವಿಧೋ
ಪಾಯಗಳ ನೀ ಬಲ್ಲೆ ಮೋಸದ
ಮಾಯಗಳನೊಡ್ಡುವೆಯ ನಗಳೀ ಕೀರ್ತಿ ಮಾನಿನಿಯು ।
ಆಯತಿಕೆಯೇನಾಯ್ತು ರವಿಕುಲ
ರಾಯಪೀಳಿಗೆ ನರಕಕಿಳಿವುದು
ಹೇಯಮಲ್ಲವೆ ನೃಪತಿ ಮಾತೇಕೆಂದಳಾ ಕೈಕೆ ॥೪೭॥

ಭೂಮಿಯೋ ಕಡುಸಾಧು ದಶರಥ
ರಾಮರಿರ್ವರು ಸಾಧು ಶೀಲರು
ರಾಮಮಾತೆ ವಿನೀತೆ ಸದ್ಗುಣಿಯೇತಕೀ ಮಾತು ।
ಭೂಮಿಯಲಿ ಕೌಸಲ್ಯೆ ಕೈಕೆಗೆ
ಪ್ರೇಮ ಬಗೆವಳೆ ಪಡೆಯುತೆನ್ನನು
ಕಾಮತೃಪ್ತಿಯ ಪೊಂದಿ ಸುಖಿಸಿದುದಾಯ್ತು ಧರಣಿಪತಿ ॥೪೮॥

ತರಣಿಯುದಯಿಪ ಮುನ್ನ ರಾಘವ
ಧರಿಸಿ ವಲ್ಕಲ ವನವ ಸೇರಲಿ
ತೆರಳದಿರ್ದೊಡೆ ಮೃತ್ಯುವಪ್ಪುವಳೆನ್ನ ಪಥ್ಯವಿದು ।
ಅರಸ ನಿನಗಪಕೀರ್ತಿ ತಪ್ಪದು
ಸೆರಗಿನಲಿ ಗಂಟಿಕ್ಕು ಭಾಷೆಯ
ಮರೆಯದಿರು, ಕೊಡದಿರಲು ವರವೇಕೆಂದಳಾ ಕೈಕೆ ॥೪೯॥

ಉದಯಿಸಿದುದಘ ನಗದಿ ರೋಷದ
ನದಿ ಪಳಾಳ ವಿನಾಶಕರನುಡಿ
ಯುದಕ ಪೂರದೊಳಿರಡು ವರಗಳ ದಡವ ಮಿಾರುತಲಿ ।
ಸದೆದು ನೃಪತರುಮೂಲವಾಪ
ತ್ತುದಧಿಗೆಸೆದುದು ಬುದ್ಧಿ ದೊರೆದನು
ಹೃದಯ ಕಂಪಿಸೆ ಕುಸಿದು ಬಿದ್ದನು ಭೂಪ ಹಮ್ಮೈಸಿ ॥೫೦॥

ಶಿರವ ಬಲಿಗೊಡುವೆನೆಲೆ ಭಾಮಿನಿ
ಕರುಣಿ ಕುಲತರುಮೂಲಕಗ್ನಿಯ
ನಿರಿಸುವರೆ ಬಯಸುವೆಯ ನಿಜಪತಿ ಮರಣವಿನ್ನೇನು ।
ವಿರಹತಾಪದಿ ಮರಣ ನಿಜಮೆಂ
ದೊರೆಯಲೇತಕ್ಕೈದೆದಾಳಿಯ
ಹರಿದಮಂಗಳರೂಪ ಹಾರವಿಸದಿರು ನೀನೆಂದ ॥೫೧॥

ಹಳುವ ಹೊಗದಿರೆ ರಾಮ ಬದುಕುವೆ
ಕುಲಲಲಾಮನ ನಿತ್ಯ ದರ್ಶನ
ದೊಲವು ದೊರಕಲು ಜೀವಧಾರಣವೆನಗೆ ಲೋಕದಲಿ ।
ಬಲಿಯನೀವನೆ ಪುಣ್ಯಮೂರ್ತಿಯ
ಕುಲವಿಘಾತಿನಿ ಕೊಲುವಳೆನ್ನನು
ಸಲಹು ರಘುಪತಿಯೆಂದು ಬಿದ್ದನು ಧರೆಗೆ ಮೂರ್ಛೆಯಲಿ ॥೫೨॥

ಕರಿ ಬಿಸುಟ ಸುರಭೂಜದೊಲು ಧರೆ
ಗುರುಳಿ ಧೊಪ್ಪನೆ ಕೆಡೆದ—ಜಲದಿಂ
ದ್ದೊರಗೆ ಬಿಸುಟಿಹ ಮೀನಿನಂದದಿ ಸೊರಗಿ ಕಂದಿದನು ।
ಇರಿಯೆ ಹೃದಯವ ನುಡಿ ಶಿಳೀಮುಖ
ಪರಿತಪಿಸಿ ಬಿಸುಸುಯ್ದು ಮುಂದೇ
ನರಿಯದಾ ನೃಪ ರಾಮರಾಮೆನ್ನುತ್ತ ಮಲಗಿಹನು ॥೫೩॥

ಮತ್ತೆ ನುಡಿದಳು ಕೈಕೆಯಜನಿಸು
ತಿತ್ತ ಮಾತೇ ಮಿಥ್ಯವಾಯ್ತು ರ
ಘೂತ್ತಮನೆ ವರ ಬೇಡು ಬೇಡೆಂದೊತ್ತಿ ಪೇಳಲ್ಕೆ ।
ಚಿತ್ತದಾಸೆಯನೊರೆದೆ ಕೊಡದು
ನ್ಮತ್ತನೊಲು ಮೊದಲಿತ್ತು ಹಾಯೆಂ
ದತ್ತರೇಂ ಸುಖ ದಿಂಡುಗೆಡೆಯದೆ ವಂಶ ಪ್ರೈಜೆಯಲಿ ॥೫೪॥

ಕೊಟ್ಟ ಮಾತನು ಸಲಿಸುವುದು ಮೇಣ್
ತೊಟ್ಟ ಪ್ರೈಜೆಯ ಮುರಿಯುವುದು ಮನ
ಮುಟ್ಟುವುದೆ ಕೇಳಿರಡು ಕಾರ್ಯಗಳೇಕ ಕಾಲದಲಿ ।
ಇಷ್ಟವಾದರು ಮಾಳ್ಪುದರಿತು ವಿ
ಶಿಷ್ಟ ಮಾರ್ಗವ ಬಿಡದೆ ರಾಯ ಘ
ರಟ್ಟ ವರ್ತಿಸು ಹೊಣೆಕೆಯ ನಡೆಸೆಂದಳಾ ರಮಣಿ ॥೫೫॥

ಅಬಲೆಯಂತಳುತಿರುವೆ ಬೇಡುವೆ
ಯಬಲೆಗಿತ್ತಿಹ ವಚನ ಮರೆತೆಯ
ಸಬಲನಾಗೈ ಕ್ಷತ್ರಕುಲಮಣಿ ಧೈರ್ಯವಡೆಯೆನಲು ।
ಸಬಳ ನುಂಗಿದ ತೆರದೊಳಾಗ
ಲ್ಕಬಲೆಯಲ್ಲಾ ನುಂಗಲೆನ್ನನು
ಸಬಲ ಮೃತ್ಯು ವಿನಾಶಕಾರಿಣಿ ಕೈಕೆ ನೀನೆಂದ ॥೫೬॥

ಕನಸು ಮನಸಿನೊಳಾನು ಭರತನು
ಜನಪನಾಗುವನೆಂದು ಬಗೆದೆನೆ
ವನಜಮುಖಿ ಮೂಡಿದುದು ದುರ್ಮತಿ ವಿಧಿ ವಿಲಾಸದಲಿ ।
ಇನಿತು ಘಟಿಸಿತು ಮಾರಲಾಪೆನೆ
ಪಣೆಯ ಲಿಖಿತವನಿಂದುಮೆನಗಾ
ವನಜ ಪೀಠನೆ ಶತ್ರುವಿನ್ನೀಂ ಮೃತ್ಯುವೆನೆಗೆಂದ ॥೫೭॥

ರಾಮ ಜಗದಭಿರಾಮ ಮಂಗಳ
ಧಾಮ ಸದ್ಗುಣ ಪೂರ್ಣ ಕೋಸಲ
ಭೂಮಿಯಾಳ್ವನು ಬಾಹುವಿಕ್ರಮದಿಂದ ಜಯಿಸುವನು ।
ಭೂಮಿಪರು ಮಣಿಯುವರು ರಿಪುಕುಲ
ಭೀಮ ರಾಮನ ಕೀರ್ತಿಮಾನಿನಿ
ಪ್ರೇಮದಿಂ ಬೆಳಗುವಳು ಮೂಲೋಕಗಳ ಸಂಚರಿಸಿ ॥೫೮॥

ದುರುಳೆ ಬೆನ್ನಟ್ಟುವುದು ದುರ್ಯಶ
ಪರಿಭವಕೆ ಪಕ್ಕಾಗಿ ಸಾಯುವೆ
ಚರಿಸು ಮನ ಬಂದಂತೆ ಮುಖ ತೋರದಿರು ಸಾರೆಲಗೆ ।
ಕರುಣವಿಲ್ಲೆಲೆ ಪಾಪಿ ಕಂದನ
ದುರುಳ ಕಾನನಕಟ್ಟುವೆಡೆ ಮನ
ಕರಗಲೊಲ್ಲದೆ ತೊಲಗು ಶಾಕಿನಿ ಕೆಡುವೆ ಹೋಗೆಂದ ॥೫೯॥

ದೇವಿ ಕೈಗಳ ಮುಗಿವೆ ಮತ್ತಿ
ನ್ನಾವ ಮಾತಾಡದಿರು ಸಿಂಹಕೆ
ಗೋವ ತಂದೀವಂತೆ ಕಂದನ ಬಲಿಯು ನಿನಗಾಯ್ತು ।
ಹೇವಮಿಲ್ಲದ ನಿನ್ನ ಪಾಪಿ ಮು
ಖಾವಲೋಕನ ಹೇಯಮಪ್ಪುದು
ತೀವಿದಪವಾದದಲಿ ಸಾಯುವೆ ತೊಲಗು ನೀನೆಂದ ॥೬೦॥

ಸೂರ್ಯಕುಲ ಭಾರಾಪನೋದನ
ಕಾರ್ಯಕೋಸುಗ ಜನಿಸಿ ಕರವಿಡಿ
ದಾರ್ಯೆ ರಕ್ಕಸಿಯಾದೆ ಕುಲಪಾಂಸುಲಿನಿ ತೊಲಗೆನುತ ।
ಆರ್ಯ ದಶರಥ ಕೆಡೆದನವನಿಗೆ
ಧೈರ್ಯಮಳಿದುದು ದುಗುಡ ಪೆರ್ಚಿತು
ಕಾರ್ಯ ಕೆಟ್ಟಿತೆನುತ್ತ ಕಿಡಿಕಿಡಿಯೋದಳಾ ಕೈಕೆ ॥೬೧॥

ಪಕ್ಷಮಿಲ್ಲದ ಪಕ್ಷಿಯೊಲು ಭೂ
ರಕ್ಷಕನು ಧರೆಗೊರಗಿ ರಾಮೆನು
ತಕ್ಷಿಗಳ ತೆರೆಯುತ್ತ ನೋಡಿದ ಸುತ್ತ ನೋಯುತ್ತ ।
ಪಕ್ಷಿಗಣ ಹಾಡದಿರಲಾದಿನ
ರಕ್ಷಕನು ಮೂಡದಿರಲೀ ಖಳ
ಶಿಕ್ಷೆಯನು ರಘುರಾಮಗಾರುಂ ತಿಳುಹದಂತಾಗೆ ॥೬೨॥

ರಘುಕುಲದ ಗುರು ಸವಿತೃದೇವನೆ
ಹೊಗದಿರುದಯೊಚಲವ–ಹೋಗ
ಲ್ಕಘುವಯೋಧ್ಯಾವುರವ ಸಾವುರ್ದು ದುಃಖವೊಡ್ಡುವುದು ।
ಮುಗುಧೆ ಮೋಹದೊಳಾನು ಸಿಲ್ಕುತ
ಬಗೆದೆನಪರಾಧವನು ರಾಮುಗೆ-
ಬೆಗಡುಗೊಳಿಸಿದಳೀಕೆ ನಿಷ್ಠುರದಿಂದ ಹರಿಯೆಂದ ॥೬೩॥

ಬಂದೆಯಾ ರವಿ ಧರೆಗೆ ದುಃಖವ
ತಂದೆಯಾ ನಾಂ ಬೇಡಿಕೊಂಡರು
ತಂದೆ ಕಷ್ಟವನಕಟವೊಡ್ಡಿದೆ ಬೆಂಗದಿರನಹುದು ।
ಬಂದೆಯಾ ಬೆಳಕೊಡನೆ ಕತ್ತಲೆ
ತಂದೆಯಾ ದಶರಥನ ಭಾಸ್ಕರ
ಕೊಂದೆಯಾ ಕಡುಪಾಪಿಯೆನ್ನುತ ಸಂದ ಮೂರ್ಛೆಯಲಿ ॥೬೪॥

ಅತ್ತು ಬೆಂಡಾಗಿರುವ ನರಪತಿ
ಗಿತ್ತು ಸುಜ್ಞಾನವನು ತಮವನು
ಕಿತ್ತು ಬೆಳಕೀಯಲ್ಕೆ ಮೂಡಿದ ಭಾನು ಪೂರ್ವದಲಿ ।
ಅತ್ತ ಮಾಗಧ ವಂದಿಗಳು ಹೊಗ
ಳುತ್ತಲಿರಲೆಚ್ಚರಿಸೆ ಭೂಪತಿ
ಚಿತ್ತ ಭೇದನವಾಯ್ತು ಮಂಗಳವಾದ್ಯ ಕೇಳುತಿರೆ ॥೬೫॥

ಪತಿಯು ಸೇರಲು ಚಿತೆಯನೇರುವ
ಸತಿಗೆ ರತುನಾಭರಣ ಬೇಹುದೆ
ಹಿತಮಹುದೆ ನಿಸ್ಸಾಳ ಮಂಗಳವಾದ್ಯ ದಶರಥಗೆ ।
ಅತಿ ಹರುಷದಲಿ ಪುರ ಜನಂಗಳು
ನುತಿಸುತಿರೆ ರಘುವರನ ಗುಣಗಳ
ಮತಿಯು ತೊರೆದಾ ನಿದ್ರೆಯಳಿದುದು ನೀಗಿ ಸಕಲರನು ॥೬೬॥

ಅರಮನೆಯ ಬಾಗಿಲಲಿ ಮಂತ್ರೀ
ವರರು ಸೇವಕ ಜನರು ಕಾದಿರ
ಲರಸನಿನ್ನೇಕೇಳದಿಹನೆಂಬಾತುರದ ಮನದಿ ।
ಪರಿಪರಿಯೊಳೂಹಿಸುತ ನರಪತಿ
ಬರವ ನೋಡುತಲಿಹರು ರಾಮನ
ಪರಮ ಘನ ರಾಜ್ಯಾಭಿಷೇಕವ ನಡೆಸುವಾತುರದಿ ॥೬೭॥

# ವಿಶ್ರಾಮ ೪

ಸೂ|| ಜನಕ್ಕನಾಡಿತವರಿತು ಕೈಕೆಯು
ನನುನಯುದಿ ಸಂತವಿಸಿ ರಾಘವ
ವನಕೆ ತೆರಳಲು ವಚನತೊಟ್ಟನು ನರಪನಿದಿರಿನಲಿ ||

ನೆರೆದು ಸೂರ್ಯೋದಯದ ಮುನ್ನವೆ
ನರಪನರಮನೆ ಬಾಗಿಲಲಿ ಜನಗಣ–
ವರಸನಾಗುವ ರಾಮನೆಮ್ಮಯ ಪುಣ್ಯದಿಂ ಬಂದು |
ಸುರರು ಕಾಣದ ನಾಕಸುಖಗಳ
ಕರೆಯುವನು ಸಾಕೇತ ಪುರದಲಿ
ಮೆರೆಯುರೇ ಭೂವಿಜಯ ವಿದ್ಯಾಲಕ್ಷ್ಮಿಯರು ನಲಿದು ||೧||

ಪಟ್ಟದೊಸಗೆಯೊಳೊಲಿದು ದಶರಥ
ಪಟ್ಟಿರುವ ರವಿ ಮೂಡಣಾದ್ರಿಯ
ನೆಟ್ಟನೇರಿದ, ಹೊಸ್ನನೇತಕೆ ಬದ್ಧವಣಗಳನು |
ಕೊಟ್ಟು ಕೋಸಲರಾಜ್ಯ ದನುಜ ಘ
ರಟ್ಟ ರಾಮಗೆ ಧನ್ಯನಾದ ವಿ
ಶಿಷ್ಟ ಗುಣಸಂಪನ್ನ ಭಾಸ್ಕರಕುಲ ಗಗನ ಸೂರ್ಯ ||೨||

ಕುಲವ ಬೆಳಗುವ ತರಳ ತಾನಿಂ
ದಿಳೆಯ ಭಾರವ ತಳೆವ ನೋಡುವೆ
ನಲಿವೆನೆಂದತಿ ಹರುಷದಿಂ ರವಿ ಪೂರ್ವಶೈಲದಲಿ |
ತೊಳಗಿದನು ನೃಪ ಮುಂದುಗಾಣದೆ
ತಳುವಿದನು ಹೋಗೈ ಸುಮಂತ್ರನೆ
ಕಳೆದು ನಿದ್ರೆಯ ನೃಪನನೆಚ್ಚರಿಸೆಂದರಾ ಜನರು ||೩||

ಏನಿದಚ್ಚರಿ ಭೂಪನೇಳನಿ
ದೇನು ಹೊಂಗುತ ಮರೆತನೇ ಕರೆ
ದಾ ನೃಪಾಲನನೆಚ್ಚರಿಸು ಹೊತ್ತಾಯ್ತು ಹೋಗೆನಲು ।
ಮೌನದಿಂದ ಸುಮಂತ್ರ ಜನಪತಿ
ಗೂಣೆಯೇನೆಂದರಿಯೆ ನಿದ್ರಾ
ಮಾನಿನಿಯನೊಲಿಸುತ್ತ ಮರೆತಿಹನೆಂದು ಒಳಹೊಕ್ಕ ||೪||

ಆರು ನುಡಿಯರು ಸಚಿವಗೊರೆಯರು
ದಾರವಟ್ಟವ ತೆರೆದು ನಿಂದಾ
ಗೌರವಾರ್ಹನ ಮೌನದಿಂದೊಳ ಹೊಗಿಸೆ ಹೊಗರಳಿದು ।
ಆರಿದುದು ತಾಳಿಗೆಯ ಪಸೆ ನೀ
ರೂರಿದುದು ಕಂಗಳಲಿ–ಕಂಡನು
ದೂರದಿಂ ನೃಪ–ಕೈಕೆಯಿರ್ವರ ವಂದಿಸಿದನೊಲಿದು ||೫||

ಕೇಡಿಗರು ಕಿತ್ತೊಗೆದ ಬಿಸಿಲಿಗೆ
ಬಾಡಿ ಕಂದಿಹ ಕಮಲದಂತಾ
ನಾಡೊಡೆಯನಿಳೆ ಮೊಗದಿ ಮರುಗುತ ಮಲಗಿಹುದ ಕಂಡ ।
ನೋಡನೇಳ ಸುಮಂತ್ರನಂ ಮಾ
ತಾಡಿಸನು ಸೆರೆ ಬಿಗಿದು ಕಂಪಿಸಿ
ಮೂಢನಂದದಿ ಬಿದ್ದು ಕೋಟಲೆಗೊಂಬನಾ ನೃಪತಿ ||೬||

ಸೆರೆಬಿಗಿದು ನುಡಿಸಿಕ್ಕುತರಸನ
ಪರಿಯು ನರಿಯುದೆ ನೊಂದು ಕೈಕೆಯ
ಸಿರಿಮೊಗವ ನೋಡಿದನು ಮೊಗಸನ್ನೆಯಲಿ ಕೇಳಿದನು ।
ಅರಿಯೆನಾನುಂ ರಾಮರಾಮೆಂ
ದೊರೆದು ಚೀರ್ವಂ ಬಳಲುತಳುವಂ
ತರಹರಿಪ ನಸುನಿದ್ರೆಯಿಲ್ಲದೆಯೆಂದಳಾ ಕೈಕೆ ||೭||

ಹೋಗು ಕರೆತಾ ರಾಮಚಂದ್ರನ
ಬೇಗ ನೃಪನೇಳುವನು ವಹಿಲದಿ
ರಾಘವನ ಹಂಬಲದಿ ಬಳಲಿದನೆಂದೊಡಾ ಕೈಕೆ |
ತಾಗಿತೆನಗೀ ಮಾತು ಭೇದದ
ಲಾಗಿನಲಿ ಸಿಲ್ಕಿದನು ದಶರಥ
ಮೂಗುವಟ್ಟಿಹ ಸತಿಯ ವಂಚನೆಗೆಂದು ಮನದಂದ ||೮||

ಬಂದೊಡಾ ರಘುರಾಮ ಮನಕಾ
ನಂದವುಪ್ಪದೊ–ಗಾಸಿವಡೆವನೊ–
ಬಂದರೊಳ್ಳಿತೊ–ಬಾರದಿರ್ದೊಡೆ ನೃಪತಿ ನೋಯುವನೋ ?|
ಕಂದಗೇನಾಣತಿಯನೀವನೊ
ಕುಂದನೊರೆಯದೆ ಭೂಪ ಕಂದಿಹ
ನೆಂದು ನಡೆದನು ವರ ಸುಮಂತ್ರನು ರಾಮನರಮನೆಗೆ ||೯||

ಬಂದ ಮಂತ್ರಿಯ ಕುಳ್ಳಿರಿಸಿ ರಘು
ನಂದನನು ವಂದಿಸಿದ ಕಾಣಿಕೆ
ಯಿಂದ ಸತ್ಕರಿಸುತಲಿ ಹೊಗಳಿದ ಸದ್ಗುಣಂಗಳನು |
ಕಂದ, ದಶರಥ ಕರೆವ ನೀ ನಡೆ
ಯೆಂದು ವಹಿಲದಿ ರಾಮನೊಡನೈ
ತಂದು ದಶರಥನಾಲಯವನೊಳಹೊಕ್ಕ ಮೌನದಲಿ ||೧೦||

ಎನಗೆ ಜಗ ಮೂಕಾಯ್ತು ಕಂಡೊಡೆ
ಭಣಿತೆಯಳಿಸಿತು ಬೆಗಡುಗೊಂಡಿಹು
ದೆನಗೆ ಮನ್ನಣೆಯಿಲ್ಲ ಕೈವಾರಿಸದು ರೂಢಿಯಲಿ |
ಎನುತ ಕಳವಳಗೊಂಡು ಹೊಕ್ಕನು
ಜನಕನಾಲಯ ನೊಸಲ ಚಾಚಿದ
ವನಜಪದಯುಗಳದಲಿ ಭಕ್ತಿಯೊಳಾ ರಘೂತ್ತಮನು ||೧೧||

ವಂದಿಸುವ ಮಗನನ್ನು ನುಡಿಸನು
ಬಂದೆಯಾ ಬಾರೆಂದು ಕರೆಯನು
ನೊಂದ ಮದಗಜದಂತೆ ಬಿಸಿಯುಸಿರಿಡುತ ಮಲಗಿಹನು ।
ಇಂದೆನಗೆ ಪಟ್ಟಾಭಿಷೇಚನ
ಮೆಂದು ಕೌವರೆವಡೆದ ಜನಪತಿ
ನೊಂದನೇಕೆಂದರಿಯದಾ ರಘುರಾಮ ಚಿಂತಿಸಿದ ॥೧೨॥

ಸನಿಹದಲಿ ಕಡುರೋಷದಿಂದಲಿ
ಜನನಿ ಕೈಕಾದೇವಿ ನಿಂದಿರ
ಲನುಪಮನು ಪಾದಾಭಿವಂದನ ಗೈದು ಭಕ್ತಿಯಲಿ ।
ವನಜ ಕರಗಳ ಮುಗಿದು ತಾಯೇ
ಜನಕನಾಶಿಸನೇಕೆ–ಬಂದಿಹ
ತನಯನಂ ನೋಡದೆಯೆ ನೊಂದಿಹನೇಕೆ ಪೇಳೆಂದ ॥೧೩॥

ಹುರಿಯೊಡೆದು ಪಟ್ಟರುವ ವಂದಿಸೆ
ಹರಸನೇಕೋ ಜನನಿ ಕಾರಣ
ಪೊರೆದುಪಾಯವ ತೋರು ಜನಕನ ನುಡಿಸು ನೀನೆನಲು ।
ತರಳ ನಿನ್ನಯ ಮೋಹದಲಿ ನೊಂ
ದಿರುವ, ನೀನೇ ದುಃಖ ಕಾರಣ
ಪರಮ ಪ್ರೇಮದ ಪುತ್ರನೀ ಪರಿಹರಿಸು ದುಃಖವನು ॥೧೪॥

ಕೊಟ್ಟ ವಚನವ ಸಲಿಸಲಾರದೆ
ಪಟ್ಟರುವ ಗರುವಾಯಿಗೆಟ್ಟನು
ಕೊಟ್ಟು ವರವೆರಡೆನಗೆ ದೇವಾಸುರರ ಯುದ್ಧದಲಿ ।
ಧಟ್ಟಿಸುವ ಬೇಡಲ್ಕೆ ನೃಪ ಬಾ
ಯ್ಬಿಟ್ಟು ನುಡಿಯನು ಪುತ್ರ ಮೋಹದಿ
ಬಟ್ಟೆಗೆಟ್ಟನು ವರಗಳೀವೆಡೆಯೆಂದಳಾ ಜನನಿ ॥೧೫॥

ಪುತ್ರ ಮೋಹದ ಕುತ್ತವೊಂದೆಡೆ
ಸತ್ಯವಚನದ ಪೈಜೆಯೊಂದೆಡೆ
ಕತ್ತರಿಗೆ ಸಿಲ್ಕಿದೊಲು ಭೂಪತಿ ಘಾಸಿಪಡುತಿಹನು ।
ಉತ್ತಮನೆ ಪಿತೃವಚನ ಪಾಲಿಪು
ದುತ್ತಮರ ಸನ್ಮಾರ್ಗ ಮಾಡಿತ
ಮಿತ್ತೆಯಾದೊಡೆ ಹರ್ಷಗೊಳ್ಳುವನೆಂದಳಾ ರಾಣಿ ॥೧೬॥

ಕಂದ, ಬೇಡೆನೆ ಯಾಚಿಸಿದೆ ಕೇ
ಳೊಂದು ವರದಲಿ ಸುತಗೆ ರಾಜ್ಯವ
ನೊಂದು ವರದಲಿ ನಿನಗೆ ಕಾನನವಾಸ ದೀಕ್ಷೆಯನು ।
ನೊಂದು ದುಗುಡವ ಕೆತ್ತು ಮಲಗಿಹ
ತಂದೆಯಾಡಿತದಾಗುಹೋಗುಗ
ಳಿಂದು ಸೇರ್ದುದು ನಿನ್ನನೆಂದಳು ಪರಮ ನಿಷ್ಕರುಣಿ ॥೧೭॥

ಘಡ ವಿಕಾರಿಯ ನೂಕೆನುತ ಸಿಡಿ
ಸಿಡಿದು ಕಾಠಿನ್ಯಗುಣ ಕರಗಿತು
ಕಡೆಗಣಿಸಿ ನಾರೀ ಹೃದಯ ಕಲ್ಲಾಯ್ತಿದಚ್ಚರಿಯು ।
ಒಡನೊರೆದು ರಾಮಂಗೆ ನಿಂದಿರೆ
ಕೆಡೆದು ಕೈಕಾ ಚರಣ ತಲದಲಿ
ಪೊಡಮಿಯಾಳಲಿ ಭರತ ಹೊಂಪುಳಿಯೋದೆ ತಾನೆಂದ ॥೧೮॥

ಕಂದಿದನೆ ಕುಂದಿದನೆ ದುಃಖವ
ತಂದನೇ ವನವಾಸವೆಂದುರೆ
ನೊಂದನೇ ಪೂರಾಯಮಾನದಿ ತಾಳ್ದ ದೀಕ್ಷೆಯನು ।
ತಂದೆಗೆರಡೆಣಿಸಿದೊಡೆ ಬಾಳ್ವೆನೆ
ಮುಂದೆ ನರಕವ ಪಡೆವುದಿಲ್ಲವೆ
ತಂದೆಯೇ ಪರದೈವ ಮಕ್ಕಳಿಗೆಂದು ಮನದಂದ ॥೧೯॥

ತಂದೆ ತಾಯ್ಗಳ ವಚನಮತಿಶಯ
ತಂದೆಯೊಡಿತವೆನಗನುಗ್ರಹ
ಮುಂದೆನಗೆ ವನರಾಜ್ಯದೊಡೆತನಮಿತ್ತು ಕರುಣಿಸಿದ ।
ಇಂದು ನಿಮ್ಮಡಿ ಹರಕೆಯಿರೆ ವನ
ಮಂದಿರದೊಳೆನಗಾವ ನಿಷ್ಠುರ
ವೊಂದನರಿಯೆಂ ತಾಯೆ ಕಳುಹುವುದೆಂದನಾ ರಾಮ ॥೨೦॥

ಅನುಜ ಸಿಂಹಾಸನವನೇರ
ಲ್ಕೆನಗೆ ಪರಮಾನಂದ ರಘುಕುಲ
ಮಣಿ ವಿಲಾಸದೊಳಾಳಲೀ ನೆಲ ಪರಮ ವೈಭವದಿ ।
ವನದಿ ವಲ್ಕಲ ಜಟೆ ಧರಿಸಿ ಮೃಗ
ಮುನಿ ನಿಕರಪಾಲಿಸುವೆ ಮುಕ್ತಾಂ
ಗನೆಯನೊಲಿಸುವೆ ನಿನ್ನನುಗ್ರಹವೆಂದನಾ ರಾಮ ॥೨೧॥

ಸುರತರುಗೆ ಕಿಚ್ಚಿಕ್ಕಿ ಶಾಲ್ಮಲಿ
ತರುವ ಭಜಿಪರೆ, ಸುಧೆ ತೊರೆದು ವಿಷ
ವೆರೆವರೇ ಸುರಧೇನುವಟ್ಟುತ ಹುಲಿಯ ಕಟ್ಟುವರೆ ?।
ಪರಮಘನ ಕೈವಲ್ಯವಿಲ್ಲದ
ಧರೆಯ ಭೋಗಮಿದೇಕೆ ತಾಯೇ
ಕರುಣಿಸಿದೆ ಘನಪದವಿ ಪುತ್ರಗೆ ಧನ್ಯ ತಾನೆಂದ ॥೨೨॥

ಇದಕೆ ಚಿಂತಿಪನಲ್ಲ ನರಪತಿ
ಯದಟನರಿಯೆನೆ ಖಿನ್ನನಾಗಿಹ
ನಿದರ ಕಾರಣವೊರೆದು ಹೃದಯದ ದುಗುಡ ಕಳೆಬೇಗ ।
ಮುದದಿ ನೋಡನು, ನುಡಿಸನೇಳನು,
ಪದಕೆ ನಮಿಸಲು ಹರಸನೇಕೋ
ಮುದದೊಳಜ್ಞಾನದಲಿ ತಪ್ಪೆಣಿಸಿದೆನೆ ತಾನೆಂದ ॥೨೩॥

ಆವುದಪರಾಧವೆಸಗಿದೆ ಮೇ
ಣಾವ ರೀತಿಯೊಳೇನು ಘಟಿಸಿತೊ
ಆವಕಾರ್ಯದಿ ದುಃಖಮಿತ್ತೆನೊ ಪರಮ ಪಾಪಿಯಲಾ ।
ಪಾವನಾತ್ಮನ ನೋಯಿಸಿದೆ ಭೂ
ದೇವಿ ನುಂಗದೆ ತಡೆದಳೇ ತಾ
ನಾವ ಪರಿಯಿಂದೊಲಿಸಿಕೊಂಬೆನು ತಾಯೆ ಹೇಳೆಂದ ॥೨೪॥

ಆವ ಸಾಹಸ ಕಾರ್ಯವೆಸಗಿದೊ
ಡಾವ ಶಪಥವ ಕೈಗೊಳಲು ವಸು
ಧಾ ವರನು ಸಂತೋಷಗೊಳ್ಳುವ ಶಾಂತನಾಗುವನು ।
ಪಾವನಾಂಘ್ರಿಯೊಳೇನ ಗೈದೆನು
ಸಾವನೇ ಬಲಿಗೊಡುವನೇ ಸಂ
ಭಾವಿತನನೊಲಿಸುವ ಸುಮಾರ್ಗವ ತೋರು ನೀನೆಂದ ॥೨೫॥

ಸರಳ ಸಹೃದಯ ಸೂನೃತವ್ರತ
ಶರಣಜನ ಸುರಧೇನುವೆಂಬುದ
ಮರೆತು ಪಾಟಿಸಿ ಮನದೊಳಾರೈವುದನು ತೊರೆದು ।
ವರಿಸುವನು ವನವಾಸ ಕಂಟಕ
ಮುರಿದು ರಾಜ್ಯೈಶ್ವರ್ಯ ಸೇರ್ದುದು
ಭರತ ಕುವರಂಗೆಂದು ಹಿಗ್ಗಿದಳಾ ತಳೋದರಿಯು ॥೨೬॥

ರಾಮ ನೀನಪರಾಧಿಯೇ ಗುಣ
ಧಾಮ ರಾಕ್ಷಸಭೀಮ ಜಗದಭಿ
ರಾಮ ತಪ್ಪೆಣಿಸುವೆಯ ಜನನೀ ಜನಕ ಸುಖದಾತ ।
ಭೂಮಿಪನ ಬಗೆಯರಿಯೆ ನುಡಿಯನ :
ದೇಂ ಮನೋವ್ಯಥೆಯೊರೆಯ ಕೇಳಲು
ನಾಮಸಕದಿಂ ಟೊಣೆದು ನುಡಿಯುವನೆಂದಳಾ ಕೈಕೆ ॥೨೭॥

ತಿಳುಹು ನಿನ್ನ ಮನೋಭಿಲಾಷೆಯ
ನುಳುಹು ಜನಕನ ನುಡಿಯ ಪಾಪಕೆ
ಬಿಳದೊಲಾರೈದವನಿಪನ ಸಂತವಿಸು ವಹಿಲದಲಿ ।
ಮುಳಿಸು ಮನ ಚಂಚಲವ ತೊಲಗಿಸು
ತಿಳಿಯ ನೀಡಲಿ ಭರತ ಕುವರಗೆ
ತಿಳುಹು ಬೇಗದೊಳೆಂದು ನಿಯಮಿಸಿದಳು ರಘೂತ್ತಮಗೆ ॥೨೮॥

ಅನಿತರಲಿ ನೃಪ ಮೂರ್ಛೆ ತಿಳಿಯಲು
ಮಣಿ ಮಕುಟ ಚಾಚಿದನು ಚರಣದೊ
ಳಿನಕುಲೋತ್ತಮ ಭಕ್ತಿಭಾವದಿ ತನ್ನ ಪೆಸರೊರೆದು ।
ತನಯನಂ ತಕ್ಕೈಸಿ ಕಣ್ಣೀ
ರಿನಲಿ ನನೆದನು ನೃಪತಿ ತಾಳಿಗೆ
ಯೊಣಗಿ ನುಡಿಬಾರದಿರೆ ನೋಯುತ ಬೆಕ್ಕಸಂಗೊಂಡ ॥೨೯॥

ಬೆಗಡುಗೊಳಿಸಿದಳೀ ನೃಪಾತ್ಮಜೆ
ಬಗೆದಳೀ ವಿಶಸನವ ನುಡಿಯಲಿ
ನಿಗಳ ತೊಡಿಸಿದಳೆನಗೆ ಮತ್ತಿನ್ನೇನು ನಿರ್ವಾಹ ।
ಹೊಗುವನೇ ವನ ರವಿಕುಲಾಗ್ರಣಿ
ತೆಗೆದುದೇ ಪಟ್ಟಾಭಿಷೇಚನ
ವೊಗಡಿಸದೆ ಜಗವೆನ್ನ ಕೃತಿಯಿಂದೆಂದು ವಿಲಪಿಸಿದ ॥೩೦॥

ಆರಿಗೊರೆಯಲಿ ಮನದ ದುಃಖವ
ಮಾರಹರ ಕರುಣಾಳು ತನಗಿ
ನ್ನಾರುಗತಿ ಶ್ರೀರಾಮರಾಜ್ಯಭ್ರಷ್ಟನಾಗಲ್ಕೆ ।
ನಾರಿಗತಿಶಯ ಮತಿಯನಿತ್ತು ನಿ
ವಾರಿಪುದು ಕಯ್ಗಾದು ಕೊಳ್ಳೈ
ಸಾರಧಿರಲಾ ರಾಮ ವನಕೆಂದಳಲಿದನು ನೃಪತಿ ॥೩೧॥

ಅಪಯಶವೆ ಬರಲೆನಗೆ ಸಗ್ಗವು
ಕುಪಿತಗೊಳ್ಳಲಿ, ನರಕವಾಗಲಿ,
ಶಪಥ ಮುರಿಯಲಿ, ಸಹಿಸಲಾಗದ ದುಃಖ ಬರಲೆನಗೆ ।
ತಪವು ನಶಿಸಲಿ, ಸತ್ಯವಳಿಯಲಿ,
ತಪನ ಕುಲಮಣಿ ರಾಮಚಂದ್ರನು
ವಿಪಿನಕೈದದೆ ಎನ್ನಸಂಗದೊಳಿರಲದುವೆ ಭಾಗ್ಯ ॥೩೨॥

ಮೇಲೆ ಮೇಲುಕ್ಕುತಿರೆ ದುಃಖ ಪ
ಳಾಳವರಿಯದೆ ನುಡಿಯು ಬಾರದೆ
ಬಾಲಕನ ಮೊಗ ನೋಡದಾ ನೃಪ ಬಳಲಿ ಬೆಂಡಾದ ।
ಚಾಳಿಸಿತು ಕಡುದುಃಖ ಮೋಹದಿ
ಕೋಳುಪೋದನಿದೇಕೆ ಹರಹರ
ಪಾಲಿಸೈ ಸತ್ಯೇಶನೃಪತಿಯನೆಂದನಾ ರಾಮ ॥೩೩॥

ತಂದೆ ಬಿಡುಬಿಡು ಚಿಂತೆ ಭರತಂ
ಗಿಂದೆ ರಾಜ್ಯವನಿತ್ತು ಜನನಿಯ
ದಂದುಗವ ಪರಿಹರಿಸು ವನವಾಸಕ್ಕೆ ತೆರಳುವೆನು ।
ಇಂದಿದುವೆ ಶುಭಮುಕ್ಕು ವರಯುಗ
ಳಿಂದ ಮಂಗಳವಾಯ್ತು ಲೋಕಕೆ
ಕಂದು ಕುಂದನು ತೊರೆದು ಬೀಳ್ಕೊಡು ವನಕೆ ನೀನೆಂದ ॥೩೪॥

ಏಳೆರಡು ವರುಷಗಳ ನೂಕುವೆ
ಪಾಲಿಸುವೆ ಮುನಿಮಾನ್ಯ ಋಷಿಗಳ
ಬಾಳುವೆಯ ಸತ್ಯದಲಿ ನಿನ್ನೀ ಹರಕೆಯೊಂದಿರಲು ।
ಕಾಳುಗೆಡೆವೆನೆ ನಿನ್ನ ನುಡಿಗಳ
ನೇಳು ಕೊಟ್ಟಾಣತಿಯ ಬೀಳ್ಕೊಡು
ಭಾಳಲೋಚನನಾಣೆಯೆಂದನು ರಾಮಚಂದ್ರಮನು ॥೩೫॥

ನಿನ್ನ ಬೆಸಕೆಯ್ವಲ್ಲಿ ತಪ್ಪಿದೆ
ನೆನ್ನುವಾತುರವೊಂದುಮಲ್ಲದೆ
ನಿನ್ನ ನುಡಿಗಳು ವೇದವಾಣಿಗಳೆನಗೆ ಪಾಲಿಸುವೆ ।
ನಿನ್ನ ವಚನವನಳಿಸಿದೊಡೆ ಜಗ
ವೆನ್ನ ನೂಕದೆ ತಂದೆ ಮಾತಾ
ಡೆನ್ನ ಬೀಳ್ಕೊಡು ಬೇಗ, ನೋಯದಿರೆಂದನಾ ರಾಮ ॥೩೬॥

ಧನ್ಯನಾದೆನು ತಂದೆ ವನದೊಳ
ಗಿನ್ನೆನಗೆ ಶುಭಮಕ್ಕು ಲೋಕದಿ
ನಿನ್ನ ನುಡಿಗಳ ಪಾಲಿಪುದಕಿನ್ನೆನಗೆ ಬೇರೇನು ?।
ನಿನ್ನ ಹರಕೆಯು ಹೊತ್ತು ವನಗತಿ
ಯನ್ನು ತೀರಿಸಿ ಮರಳಿ ಬರುವೆನು
ನಿನ್ನ ಸೇವೆಯ ಕೊಂಬೆನೆನ್ನುತ ರಾಮನನುವಾದ ॥೩೭॥

ಹೊರಡಲನುವಾಗಲ್ಕೆ ರಾಮನು
ಬರುವ ದುಃಖದಿ ನುಡಿಯಲಾರದೆ
ನರಪನೊರಗಿದ ನನೆದು ಕಣ್ಣೀರ್ಗಳಲಿ–ಮಲಗಿಡನು ।
ಹರಡಿದುದು ನಗರದಲಿ ವಾರ್ತೆಯು
ಪುರದಿ ಹರಿದುದು ದುಃಖವಾರಿಯು
ನೆಱವಣಿಗೆ ಗುಂದಿದುದು ಸಾಕೇತಪುರ ಬಸನದಲಿ ॥೩೮॥

ಒಂದು ನೋಡಲು ಬಯಸಿ ನಾವಿ
ನ್ನೊಂದು ದೃಶ್ಯವ ನೋಡುತಿರುವೆವು
ಇಂದಿನಾ ಯುವರಾಜ ಕಾಡನು ಸೇರ್ವನೇನಕಟಾ ।
ದಂದುಗವು ತಲೆಯೆತ್ತಿ ಸಂತಸ
ಬೆಂದುದೇ ವರವೆಂಬ ಬೆಂಕಿಯೊ
ಳಿಂದರಸ ಸಂತಸವ ದಹಿಸಿದನೆಂದರಾ ಜನರು ॥೩೯॥

ಒಲಿದನೇ ನೃಪಮಾರಿ ಕೈಕೆಗೆ
ಬಲಿಯಗೊಟ್ಟನೆ ರಾಮಚಂದ್ರನ
ಇಳೆಯ ಬಯಸಿದನೇಕೆ ಭರತನು ಯೌವರಾಜ್ಯವನು ।
ನೆಲವ ಮಗನಿಗೆ ಕೊಡಿಸಿ ರಾಮನ
ಹಳುವಕಟ್ಟುವ ಮತಿಯು ಮೂಡಿತೆ
ಲಲನೆಯೋ ಹೆಮ್ಮಾರಿಯೋ ಹಾಯೆಂದುದಾ ಪುರವು ॥೪೦॥

ಹಲವು ಪರಿಯಲಿ ಮುಗುಧೆಯರು ನೀ
ನೊಲಿದ ಕಾರ್ಯವಿದೇನು ರಾಮನ
ಹಳುವಕಟ್ಟುವರುಂಟೆ ಭರತಂಗೊಪ್ಪುವುದೆ ಮತ್ತೆ ।।
ಒಲವಿದೇತರದಾಯ್ತು, ಮೋಹದ
ಲಲನೆಗಳುಕಿದನೇಕೆ, ಸಿಲುಕಿದ
ಚೆಲುವೆಗಂಗಳ ಬಲೆಗೆ ದಶರಥನೆಂದು ತೆಗಳಿದರು ॥೪೧॥

ಎಲೆ ಮುಗುಧೆ ಛಲವೇಕೆ ವಂಶವ
ನಳಿಸೆ ಹಾರವಿಸುವೆಯ ರಾಮನು
ಹಳುವಕೈದಲು ನೃಪತಿ-ಕೌಸಲ್ಯೆಯರು ಬದುಕುವರೆ ?।
ಮುಳಿವನಲ್ಲದೆ ಭರತನೊಲಿವನೆ
ಇಳೆಯೊಳಪಕೀರ್ತಿಯಲಿ ಮುಳುಗುವೆ
ಲಲನೆ ಬಿಡು ಛಲವೆಂದರಾ ಸಖಿನಿವಹ ಮರುಗುತ್ತ ॥೪೨॥

ಭಾನುವಿಲ್ಲದ ಹಗಲಿನೊಲು ವರ
ಪ್ರಾಣವಿಲ್ಲದ ದೇಹದೊಲು ಶಶಿ
ಕಾಣದಿಹ ಬಾನಂತೆ ರಘುವರನಿಲ್ಲದೀ ನಗರ ।
ಶೂನ್ಯಮಲ್ಲವೆ ದೇವಿ ನೀ ಲೋ
ಕಾನುಭವವರಿಯದಳೆ ದುಮ್ಮಾನ
ವೇನು ತೋರೆ ಛಲವೆಂದು ಪೇಳಿದರಾ ಸಖೀ ಜನರು ॥೪೩॥

ಮುನಿದು ಪಾಟಿಸಿ ನೂಕಿ ಸಖಿಯರ
ಭಣಿತಿಗಳನವಗಡಿಸಿ ಕೋಪದಿ
ಜಿನುಗುಮತಿ ಮಂಥರೆಯು ನುಡಿಗಳ ನೆನೆದು ಮನದಲ್ಲಿ ।
ವನಿತೆಯರಿಗುತ್ತರವನೀಯದ -
ಜನಿಸಿ ಮೊಗದಿರುಹಿದಳು ಮಾನಿನಿ
ವಿನಯವಾರಿತು ಹಸಿದ ಕೇಸರಿಯಂತೆ ನೋಡಿದಳು ॥೪೪॥

ಸವಿನುಡಿಯ ಪೊಳ್ಗಳಿವೆ ನಿನಗಿ
ನ್ನವನಿಯಲಿ ತಾವಿಲ್ಲ ರಘುವಂ
ಶವನು ಸುಡುವೆಯಿದೇಕೆ ನಾವಿನ್ನಡವಿ ಸಾರುವೆವು ।
ಇವಳ ಪರಿ ನಮಗೇಕೆ ಸೀತಾ
ಧವನ ಚಿಂತೆಯೆ ಸಾಕು ನಮಗೇ
ಕಿವಳ ಗೊಡವೆಯೆನುತ್ತ ಸರ್ವರು ಬಿಟ್ಟು ತೊಲಗಿದರು ॥೪೫॥

ಪಿತನ ಮೌನವ ಕಂಡು ವನಕಾ
ಣತಿಯೆ ಮೌನವೆನುತ್ತ ಮನದೊಳು-
ಚಿತವ ನೆನೆಯುತ ನಡೆದ ಮಾತೆಯ ಕಾಣುವಾತುರದಿ ।
ಪಿತೃವಚನಮಂ ತಳೆದು, ತೊರೆದು
ಕ್ಷಿತಿಯನಾಳುವ ಬಯಕೆ ರಾಘವ
ನತಿಶಯದಿ ನಡೆತಂದ ವರಕೌಸಲ್ಯೆಯರಮನೆಗೆ ॥೪೬॥

## ವಿಶ್ರಾಮ ೫

ಸೂ॥ ಜನನಿಗೆರಗಿದ ರಾಘವನ ಮತ
ವನು ಧರಾತ್ಮಜೆ ತಿಳಿದು ಬೇಡಲು
ವನಕೆ ಬಾರೆಂದೊಲಿದ ಸೀತಾರಮಣಗಾ ರಾಮ

ಧರೆಯನಾಳುವ ಬಂಧನವ ಪರಿ
ಹರಿಸಿ ವನವಾಸದಲಿ ತೊಳಲುವ
ಹರುಷವಿಮ್ಮಡಿಯಾಯ್ತು ಋಷಿಗಳ ಸೇವೆ ಸಿಲುಕಿರಲು ।
ಪರಮಪುರುಷಂ ಮಾತೆಯಡಿಗಳಿ
ಗೆರಗಿ ಕಾಣಿಕೆಯಿತ್ತು, ವಸ್ತ್ರಾ
ಭರಣಗಳ ತಂದಿತ್ತು ಕೋಸಲೆ ಮಗನ ಹರಸಿದಳು ॥೧॥

ರಾಮ ಬಾ ರಘುವೀರ ಬಾ ಗುಣ
ಧಾಮ ಬಾ ಬಾರೆಂದು ಮುದ್ದಿಸಿ
ಪ್ರೇಮರಸ ಪಯವುಕ್ಕೆ ಮನದನುರಾಗ ಚಿಮ್ಮಿದುದು ।
ಭೂಮಿಗರಸಾಗೆಂದು ಹರಸುತ
ರೋಮ ಪುಳಕಿತಗಾತ್ರೆ ಸೀತಾ
ರಾಮನಂ ನೋಡಿದಳು ಕೊಂಡಾಡಿದಳು ಮನದಣಿಯೆ ॥೨॥

ತನಯ ನಿನ್ನಂ ಪಡೆಯುತೆನ್ನೀ
ಜನುಮ ಸಾರ್ಥಕವಾದುದಾತ್ಮದ
ಗುಣವು ವಿಕಸಿತವಾಯ್ತು ಸೀತಾರಾಮದರ್ಶನದಿ ।
ಮಣಿಖಚಿತ ಸಿಂಹಾಸನದಿ ನೀ
ನಣಿಯರದಿ ಕುಳ್ಳಿರಲು ನೋಡುವ
ಸನುಮುಹೂರ್ತವದೆಂದು ರಘುವರನೆನ್ನುತಪ್ಪಿದಳು ॥೩॥

ಕಂದ ನಡೆ ಪನ್ನೀರ್ಗಳಲಿ ನೀ
ಮಿಂದು ತಿಲಕವ ತಿದ್ದಿ ವಸ್ತ್ರಗ
ಳಿಂದಲಂಕರಿಸುತ್ತ ಮೃಷ್ಟಾನ್ನಗಳ ಭುಂಜಿಸುತ ।
ತಂದೆ ನೀನ್ನೈದೆನ್ನ ಮಹದಾ
ನಂದಮನ್ನೊರೆ ಪಿತಗೆ ನೋಡುವೊ
ಡಿಂದು ಸಾಲವು ಕಣ್ಗಳೆರಡೆಂದಳು ಸರೋಜಮುಖಿ ॥೪॥

ಸುರುತರು ಕುಸುಮದಿಂದೊಸರುತಿಹ
ಪರಮಘನ ಮಧುವಿನೊಲು ಮಾತೆಯ
ಕರುಳು ವಚನವ ಕೇಳ್ದು ರಾಮನ ಮನಕೆ ಹಿತವಾಯ್ತು ।
ಹರಿ ವಿವೇಕವನೊರೆದು ತಾಯಿಯ
ಕರೆದು ನಗೆಮೊಗದಿಂದಲಾತುರ
ಮರರೆ ಬೇಡೌ ರಾಜ್ಯಮೇತರದೆಂದನಾ ರಾಮ ॥೫॥

ಬಿಡು ವಿಕಾರವ ಜನನಿ ನಾನಿ
ನ್ನಡವಿವಾಸವ ವರಿಸಿ ನಡೆವೆನು
ಪೊಡವಿಯೊಡೆತನವಿಂದು ಭರತಂಗಾಯ್ತು ಬೆದರದಿರು ।
ಅಡವಿಯೇ ಸುಖವೆನಗೆ ಯೋಗಿಗ
ಳೊಡನೆ ತತ್ತ್ವ ವಿಚಾರದಿಂದಲಿ
ನಡೆದು ಹದಿನಾಲಕ್ಕು ವರುಷವ ನೂಕಿ ಬಹೆನೆಂದ ॥೬॥

ಎನಗೆ ಪಿತನಾಜ್ಞೆಯಿದು ಚರಿಸುವೆ
ಮುನಿಯೊಲಾಂ ಹದಿನಾಲ್ಕು ವತ್ಸರ
ವನದಿ ನಾರುಡೆಯುಟ್ಟು ಭುಜಿಸುತ ಗೆಡ್ಡೆಗೆಣಸುಗಳ ।
ಜನನಿಯಾಶೀರ್ವದಿಸು ನಿನ್ನೀ
ವನಜಪದಗಳ ಕರುಣವೊಂದಿರ
ಲೆನಗೆ ಭಯಮೇನಿಹುದು ಲೋಕದಿ–ಹರಸುಹರಸೆಂದ ॥೭॥

ಮೊದಲೆ ಬಯಸಿದೆನಿದನು ಮತ್ತೆನ
ಗೊದವಿದುದು ಮೆಚ್ಚಿದುದು ಮನದಲಿ
ಬೆದರದಿರು ಮಜ್ಜನನಿ ಶೀಘ್ರದಿ ಮರಳಿ ಕಾಣುವೆನು ।
ಮುದದಿ ಜನಕನ ನುಡಿಯ ಪಾಲಿಸ
ಲೊದವಿದುದು ವನವಾಸ ಮರುಗದೆ
ಹದುಳವಿಡು ಬಾ ತಾಯೆ ಬಾಗುವೆನೆಂದ ರಘುರಾಮ ॥೮॥

ಸಿಡಿಲೆರಗಿದಂತಾಯ್ತು ಕೌತುಕ
ವಡಗಿ ಹೃದಯದಿ ಶೂಲವಿರಿದಂ
ತುಡುಗಿ ಹೆಮ್ಮೈಸಿದಳು ಧರೆಯಲಿ ಮಗನ ನುಡಿ ಕೇಳ್ದು ।
ನಡುಗಿ ನುಡಿಗಳು ಬಾರದಿರೆ ಬಿಸುಸು
ಯ್ದೊಡ ಲೊಳಲಗಿಕ್ಕಿದೊಲು ನೊಂದಳು
ಪೊಡವಿಯೊಳು ಹೊರಳಿದಳು ದುಃಖದಿ ಬಳಲುತಡಿಗಡಿಗೆ ॥೯॥

ಲಲನೆ ಧೃತಿಗೊಂಡೆದ್ದು ರಾಮನ
ನಳಿನ ಮುಖವನು ನೋಡಿ ಕಂಬನಿ
ಮಳೆಗರೆದು ಹಾ ರಾಮ ರಾಮೆಂದೊರಲಿ ದುಃಖದಲಿ ।
ಬೆಳೆವ ತರುವಂ ಮುರಿವರೇ ರವಿ
ಕುಲಲಲಾಮನೆ ನೃಪತಿ ಮೆಚ್ಚಿಹ
ನೊಲಿದು ನಿನ್ನಯ ಸತ್ಯಧರ್ಮಗಳಿಂದಳಾ ಜನನಿ ॥೧೦॥

ಜನಗಳನುಮತದಿಂದ ರಾಜ್ಯವ
ನಿನಗೆ ಕೊಡಲು ಮುಹೂರ್ತವಿಟ್ಟುದ
ನನಘ ಮರೆತನೆ ವನಕೆ ಹೋಗೆಂದೊರೆದನೇ ನೃಪತಿ ।
ತನಯ ದುಷ್ಕೃತವೇನನೆಸಗಿದೆ
ಮುನಿದನೇಕೆ ನೃಪಾಲ ರವಿಕುಲ
ವನದವಾನಲರಾರು ಹಾಯೆಂದೊರಲಿದಳು ಮಾತೆ ॥೧೧॥

ನೋಡಿ ಮೊಗ ಸನ್ನೆಯಲಿ ಹರಿ ಮಾ
ತಾಡಲರಿಯುತ ಮಂತ್ರಿ ಸುತನ
ಕ್ಕಾಡುತೊರೆದನು ಕೈಕೆ ಸಾರಿದ ಮಂತ್ರವೆಲ್ಲವನು ।
ಬಾಡಿದಳು ಕೌಸಲ್ಯೆ ನೃಪ ಬೆ
ಳ್ಮಾಡಿದನೆ ಮೂರ್ಧಾಭಿಷೇಚನ
ಮಾಡ ಬ್ಗಯಸುತ ಮಾತು ಮುರಿದನೆನುತ್ತ ಹಲುಬಿದಳು ॥೧೨॥

ಮನ ಬರದು ಹೋಗೆನಲು ಹೊಗದಿರೆ
ಜನಪನಾಡಿತಕೆಡರು ಬರುವುದು
ವನದಿ ಚೀರಾಜನವ ಧರಿಸುತ ಕಾಲುನಡಿಗೆಯಲಿ ।
ತನಯ ಚರಿಸುವನೆಂತು ಹಾ ಇ
ನ್ನೆನಗೆ ರಾಘವ-ಭರನರಿರ್ವರು
ತನಯರವರೊಳಗಿಂದು ರಾಮನು ವನಕೆ ಹೋಗುವನೆ ! ॥೧೩॥

ಜನಕನಾಣತಿಯಾಗಲಿನ್ನೇ
ನೆನಗೆ ನೀ ಹೊರಗಾದೆ ತೆರಳೈ
ಜನಕ ವಚನವ ಕಾವುದೇ ನಿಜಧರ್ಮ ಲೋಕದಲಿ ।
ವನವನಾಳುವ ಭರವು ನಿನ್ನದು
ಜನವನಾಳುವ ಭರವು ಭರತಗೆ
ತನಯ ನಿನ್ನೀ ಧರ್ಮವೇ ಕಾಪಾಡುವುದು ನಿನ್ನ ॥೧೪॥

ಜನಕನೇ ವನದೇವ-ದೇವತೆ
ಜನನಿ, ಖಗಮೃಗ ಪರಿಜನಂಗಳು
ವನವಯೋಧ್ಯಾನಗರ ಮುನಿಸಂಕುಲವು ಮಂತ್ರಿಗಳು ।
ಘನ ವಿರಾಗಿ ವಿರಕ್ತ ಸಿಂಹಾ
ಸನದಿ ಮೆರೆಯಲು ಜನಕನೊರೆದಿರೆ
ಜನನಿಯಾಣತಿಯೇಕೆ ಹೋಗೆಂದಳು ಸರೋಜಮುಖಿ ॥೧೫॥

ಆರು ನಿನ್ನಂದದ ಕುಮಾರರು
ಧಾರಿಣಿಯು ಸಿರಿ ಬಿಸುಟು ಕಾನನ
ನಾರಿ ತೊಡೆಯೊಳು ಬೆಳೆವೆ ವನಸತಿ ಪುಣ್ಯಫಲವೆನಿತೊ ?।
ಧಾರಿಣೀಪತಿಯಾನು ವಿಪಿನವ
ಸಾರಿ ತಪದಲಿ ಕಳೆವ ಧರ್ಮವ
ತೂರಿ ಮೊದಲೇ ನಿನ್ನ ಕಳುಹುವೆನೆಂದಳಾ ಮಾತೆ ॥೧೬॥

ತರಳನಾನುಂ ಬರುವನೆಂಬೆನೆ
ಹರಣ ತೊರೆಯುವೆನೆಂಬೆನೇಯೆನ
ಗಿರಲಿ ಯಮುನಾಲಯವು ರಾಮನ ತೊರೆದ ಬಳಿಕಿನ್ನು !
ಮರಣವೇ ಲೇಸೆನಗೆ ಮಗನೇ
ಮರೆಯದಿರು ಮಾತೆಯನು ವನದ
ಲ್ಲಿರಲಿ ನಗರದೊಳಿರಲಿ ಹಾಯೆಂದಳು ಸರೋಜಾಕ್ಷಿ ||೧೭||

ಅಂತ್ಯವಾದುದು ಸುಕೃತಫಲವಿ
ನ್ನಂತ್ಯವಾದುದು ಪುಣ್ಯಕಾಲವು
ಚಿಂತೆ ತಲೆಯೆತ್ತಿದುದು ಸಂತೋಷಗಳ ಹಿಂದಿಕ್ಕಿ |
ಇಂತು ಬಹಳ ವಿಲಾಪದಿಂದ
ತ್ಯಂತ ದುಃಖದಿ ಮುಳುಗಿ ರಾಮನ
ನಂತಮೂರ್ತಿಯನೋಡಿ ಹೊರಳಿದಳಂದು ಪೊಡವಿಯಲಿ ||೧೮||

ಜನನಿಯನು ಮೇಲೆತ್ತಿ ಧೂಳಿಯ
ಕಣಗಳೊರೆಸಿದ ಹಲವು ಪರಿಯಲಿ
ಸನುಮತಿಯನೊರೆಯುತ್ತ ಸಂತವಿಸಿದನು ರಘುರಾಮ |
ಜನನಿ ಜನಕರ ಸೇವೆ ಮಾಡದೆ
ವನದೊಳೆಂತಿಹೆನೆಂಬ ಚಿಂತೆಯು
ಮನಕೆ ಬೇರೊಂದಿಲ್ಲ ನೋಯದಿರೆಂದ ಕೋಸಲೆಗೆ ||೧೯||

ಅರಿಯುತೀ ವಾರ್ತೆಯನು ಜಾನಕಿ
ಹರಿಯ ದರ್ಶನಕಾತುರದಿ ನಡೆ
ತರುತ ಕೋಸಲೆಯಡಿಗೆ ವಂದಿಸಿ ರಾಮಗೆರಗಿದಳು |
ಧರೆಯ ಭರತಂಗಿತ್ತು ವಿಪಿನದಿ
ಚರಿಪ ಸುವ್ರತವೆತ್ತ ನಿನ್ನೊಡ
ನಿರುವೆ ಹಿಂಬಾಲಿಸುವೆನೆಂದಳು ಸೀತೆ ರಾಘವಗೆ ||೨೦||

ಅನಿತರಲಿ ಕೌಸಲ್ಯೆ ನುಡಿದಳು
ತನಯ ಘನವಿದು, ನೀನು ತೆರಳಲು
ವನಕೆ, ಸೀತಾವದನ ದರ್ಶನದಿಂದ ನಿತ್ಯದಲಿ ।
ತನುವ ಹಿಡಿಯುವೆನೆಂಬ ಹವಣಿಕೆ
ಯೆನಗೆ– ಜಾನಕಿ ನಿನ್ನೊಡನೆ ಬಹೆ
ನೆನುವಳಿದಕೇನೆಂಬೆ ಹಾಯೆಂದಳು ಸರೋಜಾಕ್ಷಿ ॥೨೧॥

ಜನಕ ಜನಕನು ತಾಯಿ ಧರೆ ಮಾ
ವನು ದಶರಥನು ನಿನಗೆ ಸತಿ ಮ
ತ್ತೆನಗೆ ಸೊಸೆ ವನಕೆಂತು ಕಳುಹುವೆ ಕಳುಹಿ ಬದುಕುವೆನೆ ! ।
ಎನಗಿವಳೆ ಜೀವಸುತೆ ತೊರೆದೆಂ
ತೆನಗೆ ಬಾಳಿನ್ನಕಟ ಬಿಸುಟೆಯ
ತನಯ ಮಾತೆಯ ಕೊರಳ ಕೊಯ್ದೆಯಯೆಂದಳಿಂದುಮುಖಿ ॥೨೨॥

ಪರಮಸುಂದರಿ ಸಾಧ್ವಿ ಕೋಮಲೆ
ಚರಿಸ ಬಲ್ಲಳೆ ಘೋರವಿಪಿನದಿ
ದುರುಳ ಕೋಲ ಕಿರಾತ ರಾಕ್ಷಸರಿರಲು ಬಾಳುವಳೆ ? ।
ತರಳೆ ಸಿಂಹ ವರಾಹ ಕರಿ ವೃಕ
ಚಿರತೆ ನರಿ ಮೊದಲಾದ ಮೃಗ ತುಂ
ಬಿರುವ ಕಟ್ಟಡವಿಯಲಿ ನೋವಳೆಯೆಂದಳಬುಜಾಕ್ಷಿ ॥೨೩॥

ರಾಮನಿಲ್ಲದಯೋಧ್ಯೆ ಕಾನನ
ಭೂಮಿಜೆಯು ಬಿಡೆನಗರ ಜೀವವಿ
ರಾಮಮಪ್ಪುದು ತೊರೆದು ಸೀತಾರಾಮರಿರ್ವರನು ।
ಭೂಮಿಯೇ ಸಾಗರದಿ ಮುಳುಗದೆ
ರಾಮ ಬಳಲಿಸಬೇಡ ನತಜನ
ಕಾಮನೆಯ ಪಾಲಿಸುವ ಬಿರುದೇನಾಯ್ತು ಹೇಳೆನಲು ॥೨೪॥

ತಾಯೆ ಬಿಡು ದುಃಖಗಳ ನೀನೆ
ನ್ನಾಯತಿಕೆಯರಿತಿರುವೆ ಕಾನನ
ದಾಯಸವ ಲೆಕ್ಕಿಸೆನು ತಂದೆಯ ಹೊಣೆಕೆಯ ಸಲಿಸಿ
ತೋಯರುಹಪದಯುಗಳ ಕಾಂಬೆನು
ನೋಯದಿರು ಹರಸೆನ್ನ ನೀಂ, ರಮ
ಣೀಯ ಗುಣಗಳ ನೆನೆದು ಬಾಳುವೆನೆಂದನಾ ರಾಮ

ಎಂದು ತಾಯಿಯ ಸಂತವಿಸಿ ನಲ
ವಿಂದ ಸೀತೆಯ ನೋಡಿ ಪರಿಪರಿ
ಯಿಂದ ಕಾನನವಾಸ ಗುಣದೋಷಗಳನರುಹಿದನು ।
ಹಿಂದುಮುಂದರಿಯದೆಯೆ ಪೊರಡದಿ
ರಿಂದುಮುಖಿ ಮನವೊಲಿದು ಸೇವಿಸು
ನೊಂದ ತಾಯ್ತಂದೆಯರನೆಂದನು ಸತಿಗೆ ರಘುರಾಮ ॥೨೬॥

ಅತ್ತೆ ಮಾವಂದಿರನು ಸೇವಿಸು
ದುತ್ತಮದ ಕುಲಧರ್ಮ ಭಾಮಿನಿ
ಸತ್ಯವಚನವ ಪಾಲಿಸಲು ಹಳುವದಲಿ ಚರಿಸುವೆನು ।
ಎತ್ತಲೀ ಹದಿನಾಲ್ಕು ವತ್ಸರ
ಮತ್ತೆ ಕಾಣುವೆಯೆನ್ನ ಶೀಘ್ರದಿ
ತತ್ತರಿಸದಿರು ಛಲವ ತೊಡದಿರು ಸೀತೆ ಕೇಳೆಂದ ॥೨೭॥

ಹಳ್ಳಕೊಳ್ಳಗಳೆಲ್ಲಿ, ಕರ್ಕಶ
ವೆಲ್ಲಿ, ಕಂಟಕವೆಲ್ಲಿ, ದುರ್ಘಟ
ವೆಲ್ಲಿ, ವಿಷಮಯ ಹಾವು ಹುಲಿ ಕಾಡಾನೆಯಿರವೆಲ್ಲಿ ?।
ಎಲ್ಲಿ ವೃಕ ಶಾರ್ದೂಲ ಸಿಂಹಗ
ಳೆಲ್ಲಿ ದುರ್ಜನರೆಲ್ಲಿ, ರಾಕ್ಷಸ
ರೆಲಿ ಬನದಲಿ ಹೇಳಲರಿಯೆನು ಸೀತೆ ಕೇಳೆಂದ ॥೨೮॥

ಹಳುವದಲಿ ನೆಲೆ ವಾಸಕೆಲೆವನೆ,
ನೆಲದಿ ಶಯನ, ಸ್ನಾನ ಪಾನಂ
ಗಳಿಗೆ ಗಂಗಾಜಲವು, ತಿನ್ನಲು ಕಂದಮೂಲ ಫಲ ।
ಕೆಲವು ಋತುಗಳೊಳಿಮಗೆ ದೊರೆಯವು
ಫಲಗಳಾಗಳು ನಿರಶನವ್ರತ
ಲಲನೆಯದರಿಂ ವನಕೆ ಬಾರದಿರೆಂದನಾ ರಾಮು ॥೨೯॥

ಅಟನಕಸದಳವಪ್ಪ ಘನ ದು
ರ್ಘಟದ ಕಾರಡವಿಯಲಿ ನೀ ಸಂ
ಕಟದಿ ಬಳಲುತ ಸಂಚರಿಸುವರೆ ಬೇಡ ಬರಬೇಡ ।
ಅಟವಿ ಗಂಹರಗಳಲಿ ಬಳಲುವ
ಜಟಿಲ ಕಾರ್ಯವಿದೇಕೆ ಸತಿ ಪಾ
ಸಟಿಯೆ ನಿನಗಿದು ಪರಮ ಕೋಮಲೆ ಸೀತೆ ಬೇಡೆಂದ ॥೩೦॥

ಕೇಳಿದಳು ಪತಿಯಾಡಿತವ ಕ
ಣ್ಣಾಲಿಗಳು ಮುಚ್ಚಿದುವು ದುಃಖದಿ
ಪಾಲಿಸುವ ಧೊರೆ ವಿಪಿನಕೈದೊಡೆ ಕೇಳ್ವರಾರಿನ್ನು ।
ನಾಲಗೆಗೆ ನುಡಿ ಬರದು, ಪತಿ ವಿಪಿ
ನಾಲಯಕೆ ಬಿಟ್ಟೈದುವನು ನರ
ಪಾಲನಟ್ಟುವನಕಟೆನುತ ಹಂಬಲಿಸಿದಳು ಸೀತೆ ॥೩೧॥

ಎರಗಿದಳು ಕೌಸಲ್ಯೆ ಚರಣಕೆ
ಸುರಿವ ಕಂಬನಿಯಿಂದ ತೊಳೆದಳು
ಕರುಣಿಸೌ ಕ್ಷಮಿಸೆನ್ನ ನೆನೆವೆನೆ ನಿನ್ನೊಳವಿನಯವ ।
ಒರೆದನತಿಹಿತವೆನಗೆ ಪತಿಯಾ
ದರೆಯು ತೆರಳುವ ವಿಪಿನವಾಸಕೆ
ತೊರೆಯುತೆನ್ನನು ವಿರಹಬೇಗೆಯೊಳೆಂದಳಾ ಸೀತೆ ॥೩೨॥

ಪತಿವಿಯೋಗ ವ್ಯಥೆಗೆ ಮಿಾರಿದ
ಸತತ ದುಃಖವು ಬೇರಿಹುದೆ ಮನ
ಕತುಳ ಸಂತಾಪವಿದು ಹದಿಬದೆಗಿದುವೆ ಬಲುಕಷ್ಟ ।
ಪತಿಯೆ ಗತಿಮತಿಯೆಂದರಿದು ಪತಿ
ಪಥವನನುಸರಿಸಲ್ಕೆ ನೀಡಾ
ಣತಿಯ ಕರುಣದಿ ತಾಯೆ ಕಾಪಾಡೆಂದಳಬುಜಾಕ್ಷಿ ॥೩೩॥

ರಾಮ ಕರುಣಾಯತನ ಜಗದಭಿ
ರಾಮ ಲೋಕಪ್ರೇಮಮಯ ಶ್ರೀ
ರಾಮ ಮಂಗಳಧಾಮ ರವಿಕುಲ ಗಗನ ಶಶಿಕೋಟಿ ।
ಪ್ರೇಮರಮಣನ ತೊರೆದು ಬಾಳ್ವೆನೆ
ರಾಮನಿಲ್ಲದ ಸಗ್ಗ ರೌರವ
ರಾಮನಿಲ್ಲದ ಭವನವೇ ಘನಘೋರ ಗಂಹರವು ॥೩೪॥

ಜನನಿ ಜನಕರು ಭಗಿನಿ ಬಂಧುಗ
ಳನುಜರಗ್ರಜ ಸುಹೃದ ಗುರುಜನ
ರನಘ ಸಾಸು ಶ್ವಶುರ ಪರಿಜನ ಮಿತ್ರಪರಿವಾರ ।
ತನುಜ ಸಜ್ಜನ ನಿಕರ ಸೇನಾ
ವನಿತೆಯರ ಸತ್ಸೇವೆ ರುಚಿಸದು
ಇನಿಯನಿಲ್ಲದ ಮೇಲೆ ಕೇಳೆಂದಳು ಸರೋಜಮುಖಿ ॥೩೫॥

ರವಿಕಿರಣ ತಾಪವನು ಮಿಾರಿಸಿ
ನವೆಯಿಸುವುದೀ ವಿರಹತಾಪವು
ಬುವಿಯನಶ್ವರ ಸುಖದೊಳೇಂ ಹದಿಬದೆಗೆ ಪರಿಕಿಸಲು ।
ಅವನಿಯಲಿ ನೆಲೆಯೆಲ್ಲಿ ಯುಸತಿಗೆ
ಪತಿಯ ಹತಿಯೊಲು ಕೇಲಿಸದೆ ಶ್ರೀ
ಧವನ ವಿರಹಾತುರವು ಹೃದಯವನೆಂದಳಾ ಸೀತೆ ॥೩೬॥

ರಮಣನಿಲ್ಲದ ಭೋಗ ರೋಗಕೆ
ಸಮವು ವಸ್ತ್ರಾಭರಣವೇತಕೆ
ಯಮನ ಶಿಕ್ಷೆಗೆ ಸಮವು ಸಂಸಾರಗಳ ಸುಖವೃಂದ |
ರಮಣನೇ ಮತ್ಪ್ರಾಣ ಲೋಕದೊ
ಳಮಿತ ಸುಖದಾಯಕನು ತೊರಯದಿ
ರನುಮ ಬದುಕುವೆನೆಂತು ವಿರಹದೊಳೆಂದಳಾ ಸೀತೆ ||೩೭||

ಜೀವವಿಲ್ಲದ ದೇಹದೊಲು ನಿ
ರ್ಜೀವ, ಜೀವನರಹಿತ ನದಿಯೊಲು,
ಜೀವನಾಥನ ತೊರೆದ ಸತಿ ಶೋಭಿಸಳು ಜಗದಿ |
ಆವಗಂ ನಿನ್ನೊಡನೆ ವಿಹರಿಸಿ
ದೇವ ನಿನ್ನೀ ವದನ ವರಚಂ
ದ್ರಾವಲೋಕನದಿಂದ ಪಡೆವೆ ಸಮಸ್ತ ಸಂಪದವ ||೩೮||

ಪರಿಜನರು ಖಗಮೃಗವು, ವನವೇ
ಪುರವು, ವಲ್ಕಲವೆನಗೆ ಪೀತಾಂ
ಬರವು ಪರ್ಣಕುಟೀರವಮರಾತಿಯು, ನೀನಿರಲು |
ಪರಮಪುರುಷನೆ ನಿನ್ನ ಸನಿಯದೊ
ಳಿರಲು ಗುಡಿಸಲು ಪೊಳೆಯುವಂತಃ
ಪುರವು ಸುಖಗಳ ತವರು ರಾಘವ ನಿನ್ನ ಸಾನ್ನಿಧ್ಯ ||೩೯||

ಪಾವನೇ ವನದೇವ ವರವನ
ದೇವಿಯತ್ತೆಯು ರಾಮ ಪೊರೆಯುವ
ರಾವಗಂ ಮಮತೆಯಲಿ, ಕುಶಕಿಸಲಯದ ಪರ್ಯಂಕ |
ಪಾವನದ ಸಿಂಹಾಸನವು ಚಿಂ
ತಾವಲೋಕನವೇಕೆ ಸಲಹವೆ
ದೇವನಡಿದಾವರೆಗಳೆಂದಳು ಸೀತೆ ನಸುನಗುತ ||೪೦||

ಕಂದ ಫಲ ಮೂಲಗಳೆ ಸುಧೆಯೆನ
ಗಿಂದು ಮೃಷ್ಟಾನ್ನಗಳನೊಲ್ಲೆನು
ತಂದೆ ಕೈಬಿಡದೆನ್ನ ಕೊಂಡೊಯ್ವುದು ಸರಾಗದಲಿ ।
ಸುಂದರ ಪದಾಬ್ಜಗಳ ದರ್ಶನ
ದಿಂದ ಬಾಳುವ ಸೀತೆಯಾದೆನ
ಗಿಂದಯೋಧ್ಯಾನಗರ ಕಾನನವೆಂದಳಾ ಸೀತೆ ॥೪೧॥

ವನದ ನಾನಾ ಪರಿಯ ಕಷ್ಟದ
ಘನತೆಗಳ ಬಣ್ಣಿಸಿದೆಯಾದೊಡೆ
ವನಜಪದ ಸನ್ನಿಧಿಯ ವಿರಹದಿ ಬರುವ ದುಃಖಗಳ ।
ಘನತೆಯೇನೆಂದೊರೆವೆ ನೂರ್ಮಡಿ
ಯನಘ ತೊರೆಯದಿರೆನ್ನ ಬರುವೆನು
ವನಕೆ ಪಡಿನೆಳಲಂತೆ ಬಹೆನೆಂದಳು ಸರೋಜಮುಖಿ ॥೪೨॥

ವರುಷ ಹದಿನಾಲ್ಕಮನು ಬಿಟ್ಟಗ
ಲಿರೆನು ಶರಣಾಗತರ ಪೊರೆಯುವ
ಬಿರುದು ನಿನ್ನದು ಸತಿಯ ತೊರೆವೆಯ ನುಡಿ ತಿರಸ್ಕರಿಸಿ ।
ಧುರವಿಜಯ ಕೇಸರಿಯೆ ನಾರಿಯು
ಪೊರೆವ ಹದನಾವಘನ ವಿಪಿನದಿ
ಚರಣ ಸೇವೆಯ ಕೊಳುವೆನೆಂದಳು ಸೀತೆ ವಿನಯದಲಿ ॥೪೩॥

ಮರದ ನೆಳಲಲಿ ಮಲಗಿರಲು ಸೀ
ಗುರಿಯನಿಕ್ಕುವೆ ಪದಗಳೊತ್ತುವೆ
ನೊರೆಸುವೆನು ಮೆಯ್ಬೆವರ ರಘುಪತಿ ನಿನ್ನ ಸೇವೆಯಲಿ ।
ಚರಿಸುವೆನು ವನವಾಸ ನಿನ್ನಯ
ದರುಶನವೆ ಘನಪುಣ್ಯ ಕರುಣವ
ತೊರೆಯುವರೆ ಕರುಣಾಳು ಸಲಹೆಂದೊರಲಿದಳು ಸೀತೆ ॥೪೪॥

ಬಿರುನುಡಿಯ ಕೇಳಿದರು ಪ್ರಾಣವ
ಧರಿಸಿಹೆನು ಪಾಷಾಣ ಹೃದಯಳು
ಬಿರಿಯದೆದೆ ಹದಿನಾಲ್ಕು ವತ್ಸರ ವನಕೆ ತೆರಳುವೊಡೆ ।
ವಿರಹ ದುಃಖವ ಕೇಳಿ ಮಡಿಯದ
ಶರಿರವೇತಕೆ ರಮಣನರಿಯೆಯ
ವರ ಸತೀಧರ್ಮಗಳನೆಂದಳು ಸೀತೆ ದುಃಖದಲಿ ॥೪೫॥

ನೆನೆದು ಕಣ್ಣೀರ್ಗಳಲಿ ರಾಮನ
ಮನವನೊಲಿಸುವ ಬಗೆಯಕಾಣದೆ
ವನರುಹಾಸನ ಪಿತನ ಹೃದಯವ ಹೊಕ್ಕು ತೋರಿದಳು ।
ಇನಕುಲೋತ್ತಮ ಪರಮ ಕರುಣಾ
ವನಧಿ ಮನಕರಗಿದನು ಜಾನಕಿ
ವನಪಯಣಕನುವಾಗು ಶೀಘ್ರದೊಳೆಂದ ದಾಶರಥಿ ॥೪೬॥

ನೋಡಿದಳು ಕೌಸಲ್ಯೆ ಜಾನಕಿ
ಕಾಡ ಹೊಗುವಳು ಪತಿಯೊಡನೆ ಮಾ
ತಾಡಲರಿಯದೆ ಕಣ್ಣೆರಡು ಕುರುಡಾಯ್ತು ತನಗೆನುತ ।
ಓಡಿ ಸೀತೆಯನಪ್ಪಿ ರಾಮನ
ಬೇಡಿದಳು, ಮುಂಗಾಣದಾದಳು
ಬಾಡಿ ಬೆಂದಳು ನೋಡಿ ಸೀತಾರಾಮರಿರ್ವರನು ॥೪೭॥

ಕಂದ ರಘುಪತಿ ವತ್ಸ ರಾಘವ
ನೆಂದು ಸಂಬೋಧಿಸುತ ತಾನಿ
ನ್ನೆಂದು ಕರೆವೆನು ತಾಯೆ, ಸೀತಾದೇವಿ ತೆರಳುವೆಯ ।
ಎಂದು ತಾನಾಲಿಂಗನವ ಮುದ
ದಿಂದ ಮಾಡುವೆ ತಂದೆ ಕಾಪಾ
ಡೆಂದು ಬಾಗಿದಳಬಲೆ ಬಲು ದುಃಖಾತಿರೇಕದಲಿ ॥೪೮॥

ಪರಮ ವಾತ್ಸಲ್ಯದಲಿ ಧೈರ್ಯವ
ತೊರೆದಳಾ ಕೌಸಲ್ಯೆ ನಾಲಗೆ
ಯೊರೆಯುಲಾರದೆ ದೀವಿ ಹವ್ಮೈಸಿದಳು ಮೂರ್ಛೆಯಲಿ |
ಪರಿಪರಿಯೊಳಾ ರಾಮ ಜನನಿಯ
ಕರೆಯುತುಪಚರಿಸಿದನು ಸವಿನುಡಿ
ಯೊರೆದು ಸಂತವಿಸಿದನು ವರ್ಣಿಸಲಳವೆ ವಚನದಲಿ ||೪೯||

ಅತ್ತೆಯಡಿಗಳಿಗೆರಗಿ ಜಾನಕಿ
ಬಿತ್ತರಿಸಿದಳು ತಾಯೆ ದೈವಾ
ಯತ್ತವಾಯ್ತಿದು ತಾನು ನಿರ್ಭಾಗಿನಿಯು ಲೋಕದಲಿ |
ಇತ್ತುದೇ ಬಹುದುಃಖ ವಿಧಿ ತಾ
ಕಿತ್ತು ಸುಮನೋರಥವ ಸೇವೆಯ
ಮತ್ತೆ ತೊರೆಯಿಸಿ ಸೆಳೆವುದೆನ್ನನು ಕಣ್ಮರೆಯಮಾಡಿ ||೫೦||

ಸೀತೆಯಾಡಿದ ನುಡಿಯನಾಲಿಸು
ತಾ ತಪಸ್ವಿನಿಯಪ್ಪಿದಳು ಸಾ
ಕೇತಕೀ ನುಡಿ ತರಳೆ ಸೀತಾರಾಮರನು ತೊರೆದು |
ಮಾತು ಹಿಂಚಿತು ಮುಂದೆ ದರ್ಶನ
ಕಾತರತೆಯಿಂ ಜೀವಪಿಡಿವೆನು
ಮಾತೆ ಸುಖಿಯಾಗೆಂದು ಹರಸಿದಳಾ ಸರೋಜಾಕ್ಷಿ ||೫೧||

ಇಂತು ನಾನಾ ವಿಧದಿ ಹರಸುತ
ನಂತ ಸುಖಗಳ ಬಗೆದು ಸೀತೆಯ
ನಂತರಂಗದಿ ನಿಲಿಸಿ ಲಕ್ಷ್ಮೀಕಾಂತನಂ ನೆನೆದು |
ಚಿಂತೆಯಿಂ ಮರೆತಿರಲು–ಜಾನಕಿ
ಸಂತಸದಿ ರಘುರಾಮಚಂದ್ರನ
ನಂತಗುಣಗಳ ನೆನೆದು ಹೊರಟಳು ಪಯಣಕನುವಾಗಿ ||೫೨||

# ವಿಶ್ರಾಮ ೬

ಸೂ || ಅನುಜ ಸತಿಸಹಿತೈದಿ ವಂದಿಸಿ
ಜನಕ ಸಾಣತಿಯಿಂದ ಸೇರ್ದನು
ವನವ ರಘುಪತಿ—ಜನರ ವಂಚಿಸಿ ಕಾಡ ಸಾರಿದನು ||

ಇನಕುಲೋತ್ತಮರಾಳ್ದ ಧರ್ಮಾ
ಸನದಿ ಮೆರೆಯುವನಣ್ಣ ರಾಘವ
ನೆನುವ ಮಹದುತ್ಸಹದೊಳಿರೆ ಸೌಮಿತ್ರಿಯೊಸಗೆಯಲಿ |
ಜನಕನಾಣತಿಯಿಂದ ರಾಜ್ಯವ
ನನುಜನೊಳಿರಿಸಿ ಸೀತೆವೆರಸುತ
ವನಕೆ ತೆರಳುವನೆಂಬ ಕರ್ಕಶವಾರ್ತೆ ಪಸರಿಸಿತು ||೧||

ಹಳುವಕೈದುವನಣ್ಣನೆಂಬುದ
ತಿಳಿದು ಮನದಲಿ ನೊಂದು ರಾಮನ
ನಳಿನಪದ ಸನ್ನಿಧಿಗೆ ಬಂದನು ವಾಯುವೇಗದಲಿ |
ತೊಲಗೆ ಧೃತಿ ಕಣ್ಣೀರ ಸುರಿಸುತ
ಜಲಜನಯನಂಗೆರಗಿ ನುಡಿಗಳು
ಸಿಲುಕೆ ಬಾರದೆ ಮಾತು ಮನದಲಿ ವಿಧಿಯ ನಿಂದಿಸಿದ ||೨||

ಸತ್ಯ ಶೌಚಾಚಾರ ಧರ್ಮವಿ
ಪತ್ತ ಪಡೆದುದೆ ಜಗದಿ ನಿತ್ಯಾ
ನಿತ್ಯವರಿಯದ ಗಾವಿಲಗೆ ಸುಕ್ಷೇಮವೇನಕಟ |
ನಿತ್ಯ ದೈವವನಟ್ಟಿ ವಿಪಿನಕೆ
ನಿತ್ಯ ಸುಖಗಳನುಂಬ ಮೂರ್ಖರ
ಪಥ್ಯವಾವುದೊ ತಿಳಿಯೆನೆಂದನು ಲಕ್ಷ್ಮಣನು ಮನದಿ ||೩||

ಧರ್ಮವೇ ಕಾಲ್ದಿಗೆಯೆ ಮುಕ್ತಿಯ
ಕರ್ಮಕೇ ಭ್ರಷ್ಟತ್ವ ಲೋಕವ
ನಿರ್ಮಿಸುವ ಶ್ರೀರಾಮಗೇ ವನವಾಸವಚ್ಚರಿಯು ।
ಕರ್ಮವರಿಯದ ನಿತ್ಯಸುಖದ ವಿ
ಧರ್ಮಿಗಳಿಗಾಧಾರಮೀ ಜಗ
ಮರ್ಮವರಿವವರಾರು ಲೋಕದೊಳೆಂದ ಸೌಮಿತ್ರಿ ॥೪॥

ಜಗದ ದೈವವ ನೂಕಿ ಬದುಕುವ
ಮುಗುಧ ಮಾನವರೊಡನೆ ಬದುಕೇ
ಕಗಣಿತನ ಸನ್ನಿಧಿಯೆ ಸಾಕೆಮಗೆಂದು ನಿಶ್ಚಯಿಸಿ ।
ಜಗದ ಸುಖಗಳ ಬಿಸುಟು ಜಾನಕಿ
ರಘುವರರನನುಸರಿಸೆ ವಿಪಿನಕೆ
ಸೊಗದಿ ಹಾರವಿಸಿದನು ರಾಮನ ದರ್ಶನಾತುರದಿ ॥೫॥

ನೋಡಿ ತಮ್ಮನ ಗುಣಗಳನು ಕೊಂ
ಡಾಡಿದನು ಮನದಭಿಮತವ ತಾ
ನಾಡಿದನು ರಘುರಾಮ ಕರುಣಾದೃಷ್ಟಿಯಲಿ ನೋಡಿ ।
ಕಾಡ ಹೊಗುವ ವಿವೇಕ ಮನದಲಿ
ಮೂಡಿದುದೆ ಸೌಮಿತ್ರಿ ನೀ ಬರ
ಬೇಡ ವಿಪಿನಕೆ ಪುರದಿ ಜನಕನ ಬಳಿಯೊಳಿಹುದೆಂದ ॥೬॥

ಹಿರಿಯರಾಣತಿಯಂತೆ ನಡೆದರೆ
ಪರಮಸುಖವದ ಪಳಿದರಾದೊಡೆ
ಧರೆಯೊಳಾ ಬದುಕೇಕೆ ಲಕ್ಷ್ಮಣ ಮನದೊಳರಿಯಿದನು ।
ಪರಮ ದುಃಖದಿ ನೊಂದ ಜನಕನ
ನಿರುತ ಸೇವಿಸುತಿಹುದು, ತನಯನ
ವಿರಹತಾಪದಿ ನೊಂದ ಮಾತೆಯ ಸಲಹು ನೀನೆಂದ ॥೭॥

ಸತಿಗೆರಡು ವರವಿತ್ತ ಪೂರ್ವದಿ
ಪಿತನದನು ಯಾಚಿಸಲು ಭರತ
ಕ್ಷಿತಿಯನಾಳುವನೆನಗೆ ಹಳುವದ ವಾಸ ವಿಧಿಸಿಹನು |
ಪಿತನ ನುಡಿಗೆರಡುಂಟೆ ವಿಪಿನದಿ
ಸತಿಸಹಿತ ಹದಿನಾಲ್ಕು ವರ್ಷಗ
ಳತಿ ಸುಲಭದಲಿ ಮುಗಿಸಿ ಮರಳುವೆನವಧ ಪುರಕೆಂದ ||೮||

ಪುರವನುಳಿದೊಡೆ ತಮ್ಮ ನಂಬಿಡ
ಪುರದ ನರನಾರಿಯರ ನೇಹದ
ಪರಿಜನರ ದೆಸೆಗಾಣದಿಹ ಪುರವರದ ಗತಿಯೇನು ? |
ವಿರಹತಾಪದಿ ಬೆಂದು ಬಳಲಿದ
ನರಪತಿಗೆ ದಿಕ್ಕಾರು ಮಾತೆಯ
ಸರಿಸದೊಳಿಹುದು ವನಕೆ ಬರದಿರು ವತ್ಸನೀನೆಂದ ||೯||

ಹಲವುಪರಿ ದುಃಖಾತಿರೇಕದಿ
ಸಿಲುಕಿ ಪ್ರಜೆಗಳು ರಾಜಭಕ್ತಿಯ
ನುಳಿದು ಧರ್ಮವಬಿಟ್ಟು ಕರ್ಮವ ಮರೆದು ನಡೆಯುತಿರೆ |
ಪಳಿವು ಜನಕಗೆ ತಪ್ಪದಾಗಳು
ಬಿಳುವ ನರಕದಿ ತಂದೆಯದರಿಂ
ದೊಲಿದು ಪತ್ತನದೊಳಿರು ವತ್ಸ ವಿವಾದ ಬೇಡೆಂದ ||೧೦||

ಶೂಲವಿರಿದಂತಾಯ್ತು ಹೃದಯದಿ,
ಬಾಳುಗೆಟ್ಟೆನು ಭರತರಾಜ್ಯದೊ
ಳಾಳುತನ ತನಗೇಕೆ ದೇವೋತ್ತಮನೆ ತೊಲಗುತಿರೆ
ಬಾಳಿಸಲು ತಮ ಪುರದಿ ದುರಿತ ವಿ
ಕಾಳಿಸಲು ಸಿರಿರಹಿತ ನಗರದಿ
ಬಾಳಲಾಪೆನೆಯೆಂದ ಲಕ್ಷ್ಮಣ ಮರುಗುತಣ್ಣಂಗೆ ||೧೧||

ದೇವ ನೀನೇ ತೊಲಗೆ ಮತ್ತಿ
ನ್ನಾವ ದೇವರ ಕಾಣೆ ಸಲಹುವ
ನಾವನೋ ಸಾಕೇತ ನಗರವ ದುಃಖ ಸಂಚಯದಿ ।
ಸಾವ ಹೊತ್ತಿಗೆ ಮದುವೆಯೇತಕೆ
ಹೇವವುರಿಯದ ನರರ ಹಿಂಡಿನೊ
ಳಾವ ಧರ್ಮದ ನೆಲೆಯೊ ಕೆಟ್ಟಿತು ಕುಲದ ಬಲುಹೆಂದ ॥೧೨॥

ಇಷ್ಟ ದೈವದ ಸನಿಹ ತಪ್ಪಲು
ಭ್ರಷ್ಟನೆನಿಸುವ ಭಕ್ತನದರಿಂ
ದಿಷ್ಟ ದೈವವ ಬಿಡೆನು ಬೆಂಬತ್ತಿಹೆನು ನಿರುತದಲಿ ।
ಇಷ್ಟ ದೈವವ ನೂಕಿ ನೃಪತಿ
ಭ್ರಷ್ಟನಾದನು ದೇವ ತೊರೆಯದಿ
ರೆಷ್ಟು ಕರುಣಾಮಯನೊ ಭಕ್ತರೊಳೆಂದ ಸೌಮಿತ್ರಿ ॥೧೩॥

ಎನಗೆ ನೀನೇ ತಂದೆ-ತಾಯಿಯು
ಎನಗೆ ನೀನೇ ನಾಥನಿತರರ
ಮನದೊಳರಿಯೆನು, ಶಿಶುವ ತೊರೆಯುತ ಹೊಗದಿರಡವಿಯನು ।
ಮನ ವಚನ ಕರ್ಮದಲಿ ನಂಬಿದೆ
ನಿನಕುಲೋತ್ತಮ ನಿನ್ನನೊಬ್ಬನೆ
ನೆನಗೆ ಧರ್ಮದ ನಿಗಳವೇತಕೆ ತಂದೆ ಹೇಳೆಂದ ॥೧೪॥

ಧರ್ಮ ಕರ್ಮ ಸ್ನೇಹ ಭಕ್ತಿಯ
ನಿರ್ಮಿಸುತ ಸರ್ವೋದರದಿ ನೀ
ಪೆರ್ಮೆಯಿಂದರಲಾನು ಸಂತತ ನಿನ್ನೊಳೊಪ್ಪಿರಲು ।
ಧರ್ಮಬಂಧನವಿಲ್ಲ ಲೋಕದ
ಕರ್ಮಗಳ ಸೆರೆಯಿಲ್ಲ ರಘುಪತಿ
ಮರ್ಮವರಿತರೆ ನಿತ್ಯದರ್ಶನವಲ್ಲದಿನ್ನಿಲ್ಲ ॥೧೫॥

ನಿನ್ನ ನಾಮಾಮೃತವ ಸವಿಯುತ
ನಿನ್ನ ಮೂರುತಿಯನ್ನು ನೋಡುತ
ನಿನ್ನ ನಿರ್ಮಾಲ್ಯಗಳನಾಘ್ರಾಣಿಸುತ ನಮಿಸುತಲಿ।
ಧನ್ಯನೆನಿಸಿದೆನಿಷ್ಟಮೂರುತಿ
ನಿನ್ನ ಕಾಣದ ದಿವಸ ಲಕ್ಷ್ಮಣ
ನನ್ನು ಲೋಕವು ಮತ್ತೆ ಕಾಣದು ರಾಮ ಕೇಳೆಂದ ॥೧೬॥

ತಂದೆಯನುಮತದಿಂದ ಮುನಿಯೊಡ
ನಂದು ತೆರಳಲು ಜೊತೆಯೊಳಿರ್ದೆನು
ತಂದೆ ನಾನಾಪರಿಯ ಹಳುವವ ಕಂಡು ಚರಿಸಿಹೆನು।
ಇಂದು ಮುನಿವೇಷದಲಿ ದೀಕ್ಷಾ
ಬಂಧನದಿ ಪೊರಟೆರಲು ಬಾರದಿ
ರೆಂದರಾನೆಂತಿರಲಿ ಕರುಣದಿ ಸಲಹು ನೀನೆಂದ ॥೧೭॥

ಎನಿತು ಕರುಣವೊ ನಿನಗೆ ತಮ್ಮನೊ
ಳೆನಿತು ಮಮತೆಯೊ ರಾಮ ನಾನೇ
ವನದಿ ಚರಿಸುತ ಜನಕನಾಣತಿ ನಡೆಸಿ ಮರುಳುವೆನು।
ಘನಮಹಿಮ ನಿನ್ನಾಜ್ಞೆವೊಂದಿರ
ಲೆನಗೆನಿತರದು ವಿಪಿನ ವಾಸವು
ಮುನಿಯೊಲಾಂ ಹದಿನಾಲ್ಕುವತ್ಸರ ಕಳೆದು ಬಹೆನೆಂದ ॥೧೮॥

ಅನುಜನಾಡಿದ ನುಡಿಗಳಾಲಿಸಿ
ಕಣುಗಳಲಿ ನೀರ್ಗರೆದು ಕರುಣದೊ
ಳನುಜನಂ ತಕ್ಕೈಸುತಾಲಿಂಗಿಸಿದ ರಘುರಾಮ।
ವನಕೆ ಬಾರೆನ್ನೊಡನೆ ಲಕ್ಷ್ಮಣ
ಜನನಿಯಾಣತಿ ಪಡೆದು ಬಾ ಹೋ
ಗೆನಲು ನಡೆತಂದನು ಸುಮಿತ್ರಾದೇವಿಯಿದ್ದೆಡೆಗೆ ॥೧೯॥

ಇಂದುಮುಖಿ ಪದಕೆರಗಿ ಕೋಸಲೆ
ನಂದನಂಗೊದವಿರುವ ವಿಪತಿಯ
ತಂದೆಯಾಣತಿಗಳನು ವಿಸ್ತರಿಸಿದನು ಮಾತೆಯೊಳು |
ಇಂದು ಸೀತಾಸಹಿತ ಮುನಿವರಿ
ಜಿಂದ ತೆರಳುವ ವನಕೆ ದಶರಥ
ನಂದನನ ಹಿಂಬಾಲಿಸಲ್ಕಾಣತಿಯ ನೀಡೆಂದ ||೨೦||

ನೊಂದು ಬಂದಾಪತ್ತ ನೆನೆಯುತ
ಲಿಂದುಮುಖಿ ಪರಮಾದರದಿ ನಿಜ
ನಂದನನ ಬೋಳೈಸಿ ಕೈಕೆಯು ನೆನೆದ ದುಷ್ಕೃತಿಗೆ |
ಕೊಂದಳಕಟಾ ನೃಪನ ರವಿಕುಲ
ಬೆಂದುದಕಟಾ ಕುಲಕೆ ಮಾರಿಯು
ತಂದ ತೆರನಾಯ್ತಿವಳ ಬರವೆಂದಳಲಿದಳು ರಾಣಿ | ||೨೧||

ಹಳುವ ವಾಸವೆ ಮತ್ತೆ ಸೀತಾ
ಲಲನೆ ಹೊಗುವಳೆ ಬನವ ಭರತನು
ನೆಲನ ಕೊಳುವನೆ ವಿಧಿಯ ನಿಯಮವ ಮೀರಲಳವಲ್ಲ |
ಹಳುವವಾಗಲಿ ನಗರವಾಗಲಿ
ಒಲಿದು ದೇವರು ನಡೆವ ಹಾದಿಯೊ
ಳಿಳಿವುದೇ ನಿಜಧರ್ಮ ಕೇಳೆಂದಳು ಸರೋಜಮುಖಿ ||೨೨||

ರಾಮನೆಲ್ಲಿಹನಲ್ಲಿ ನೀನಿರು
ಭೂಮಿಜೆಯು ನಡೆವಲ್ಲಿ ನೀನಡೆ
ರಾಮನೇ ಪಿತ ಸೀತೆ ಮಾತೆಯು ವನವಯೋಧ್ಯಪುರ |
ರಾಮನಿಲ್ಲದ ನೆಲದೊಳೇನಾ
ರಾಮನೇ ಸರ್ವಸ್ವವೆಂದರಿ
ರಾಮನಾಮವ ನೆನೆದು ಸುಖಿಯಾಗೆಂದು ಹರಸಿದಳು ||೨೩||

ಕಲುಷವೆಳ್ಳನಿತಿಲ್ಲ-ಲೋಕದ
ಗೆಳೆಯ ಭಕ್ತರ ಬಂಧು ನೆನೆದರ
ಸಲಹುವಾತುರವೊಂದು ಕರುಣಾಘನ ನಿರಾಮಯನು ।
ಒಲಿದರಿಂಗೊಲಿಯುವನು ಜೀವರ
ಸಲಹುವನು ನಿತ್ಯಾತುಮನು ನಿನ
ಗೊಲಿದ ಲಕ್ಷ್ಮಣ ಧನ್ಯ ನಡೆಯೆಂದಳು ವಿಶಾಲಾಕ್ಷಿ ||೨೪||

ಪರಮ ಪುಣ್ಯಶ್ಲೋಕ ರಾಮನ
ಚರಣ ಸೇವೆಯೊಳಿಹುದೆ ಪಾವನ
ಸರಸಿಜಾಕ್ಷನ ಡಿಂಗರಿಗನೆನಿಸುತ್ತ ನಡೆವನಕೆ ।
ಹರಿಯೆ ಜನನೀ ಜನಕ ಸೋದರ
ವರರು ನಿನಗೆಲೆ ತನಯ, ರಾಘವ
ಚರಿಸುವನು ಕಾಡಿನಲಿ ನಿನಗಾಗೆಂದಳಿಂದುಮುಖಿ ||೨೫||

ಆರು ಸಂತತ ಭಜಿಸಿ ರಾಮ ಪ
ದಾರ ವಿಂದದಿ ಭಕ್ತಿಗೈವರೊ
ಆ ರಮಣಿಯರೆ ಸಾಧ್ವಿ ರಮಣಿಯರೆನಲು ಸಂಶಯವೆ !।
ಶ್ರೀ ರಮಣ ವಿಮುಖರನು ಪೆತ್ತು ಶ
ರೀರ ವೇದನೆ ಸಹಿಸುವುದಕಿಂ
ನಾರಿ ಪುತ್ರ ವಿಹೀನೆಯಪ್ಪುದೆ ಮಿಗಿಲು ಲೋಕದಲಿ ||೨೬||

ರಾಗ ಮೋಹ ದ್ವೇಷ ರೋಷಾ
ವೇಗ ಮಾತ್ಸರ್ಯಾದಿಗಳಿಗೊಳ
ಗಾಗದಿರು ಕನಸಿನೊಳು ನಂಬದಿರೀ ಗುಣಂಗಳನು ।
ನೀಗಿ ಸಕಲ ವಿಕಾರ ಮನದನು
ರಾಗದಲಿ ಮನ-ವಚನ-ಕರ್ಮಾದಿ
ರಾಘವನ ಭಜಿಸುತಿರು ಲಕ್ಷ್ಮಣನೆಂದಳಿಂದು ಮುಖಿ ||೨೭||

ತಂದೆತಾಯ್ಗಳು ರಾಮಸೀತೆಯ
ರೊಂದಿಗಿರೆ ನಡೆದಲ್ಲಿ ಪರಮಾ
ನಂದವುಪ್ಪುದು, ಕಂದ, ದೊರೆತುದು ಪರಮ ಭಾಗ್ಯವಿದು ।
ಮುಂದೆ ಸೀತಾರಾಮರಿರ್ವರ
ನಂದದಿಂದೆಡ ಬಿಡದೆ ನೋಡುತಿ
ರೆಂದು ಸನ್ಮತಿವೊರೆದು ಕಂಬನಿದುಂಬಿದಳು ರಾಜ್ಞಿ ॥೨೮॥

ಸಂತತಂ ಸೀತಾಪತಿಯ ಪದ
ಚಿಂತೆಯಿಂ ಕಾಲವನು ನೂಕುತ–
ನಂತ ಸುಖಗಳ ಪಡೆಯೆನುತ ಹರಸಿದಳು ಮಗನನ್ನು ।
ಸಂತಸದಿ ತಾಯ್ಗೆರಗಿ ರಾಮನ–
ನಂತನಾಮವ ನೆನೆದು ಮಾತೆಯ
ಸಂತವಿಸಿ ಧಾವಿಸಿದ ಸಿರಿರಘುರಾಮ ಸನ್ನಿಧಿಗೆ ॥೨೯॥

ಬಂದು ಸೀತಾರಾಮರಿರ್ವರ
ವಂದಿಸಲು ಪಿಡಿದೆತ್ತಿ ದಶರಥ-
ನಂದನಂ ಹರಸಿದನು ಬಾರೆಂದವನನಪ್ಪಿದನು ।
ಮುಂದೆ ರಾಘವ– ನಡುವೆ ಜಾನಕಿ,
ಹಿಂದೆ ಲಕ್ಷ್ಮಣನಿಂತು ದಶರಥ
ಮಂದಿರಕೆ ಸಾರಿದರು ನೃಪನಾಣತಿಯ ಪಡೆಯಲ್ಕೆ ॥೩೦॥

ತೊರೆವನೇ ಪುರವನ್ನು ಭಕ್ತರ
ಮರೆವನೇ ರಘುರಾಮ–ದಶರಥ
ನಿರಿಡನೇ ಕೌಸಲ್ಯೆ ಹೃದಯುವ–ಪುರವ ದಹಿಸಿದನೆ ।
ಪರಿಹರಿಸುವಳೆ ಕೈಕೆ ದುಃಖವ
ಪುರಕೆ ಬಂದುದೆ ಹೊತ್ತು ಹರಿಹರಿ
ಪರಮದಾರುಣವೆಂದು ಬಳಲಿತು ನರರ ಸಂದಣಿಯು ॥೩೧॥

ಬರಲು ರಾಮಂಗಿದಿರುವಂದರು
ಚರಣಕೆರಗಿ ವಿಷಾದಗೊಂಡರೆ
ಬೆರಳ ಸನ್ನೆಯಲ್ಲವರ ಸಂತವಿಸುತಲಿ ನಡೆತಂದು ।
ಅರಮನೆಯ ಹೊಗಲೊಡನೆ ನೃಪತಿಯ
ಕರೆಯುತೆಚ್ಚರಿಸಿದ ಸುಮಂತ್ರನು
ಪರಮದುಃಖದಿ ಮುಳುಗಿದನು ತನಯರನು ಕಂಡು ॥೩೨॥

ಉಕ್ಕಿಬಹ ಕಡುಶೋಕವನು ಮುಂ
ದಿಕ್ಕಿ ಕಂಬನಿಗರೆಯೆ ಹರಿ ವೈ
ಯಿಕ್ಕಿ ಸಂತವಿಸಿದನು ಜನಕನ ಸೂಕ್ತಿ ಸುಧೆಗಳಲಿ ।
ಅಕ್ಕರದ ಬಲೆಯೊಳಗೆ ಸಿಲ್ಕಿದ
ಕೊಕ್ಕರಿಸಿ ಸುತನಿರವ ಕಾಣದೆ
ಕಕ್ಕುಲಿತೆಯಲಿ ಮಾರುವೋದನು ಮಗನ ಮೋಹದಲಿ ॥೩೩॥

ಬೇಯುತಿರೆ ದುಃಖಾಗ್ನಿ ಹೃದಯದಿ
ಬಾಯಿ ಬಾರದು ನುಡಿಯೆ ಶೋಕದೊ
ಳಾಯತಿಕೆಯಂ ನೀಗಿ ನೊಂದಿಹನೆಂದು ತಿಳಿಯುತ್ತ ।
ತೋಯಜಾಂಬಕ ರಾಮ ದಶರಥ
ರಾಯನಡಿಗಳ್ಗೆರಗಿ ಪೊಡಲು
ರಾಯಸವ ಬೇಡಿದನು ಜನಕನ ಪರಮಭಕ್ತಿಯಲಿ ॥೩೪॥

ತಂದೆ ನೀನಾಶೀರ್ವದಿಸುತಾ
ನಂದಮುಖದಿಂ ಕಳುಹು ಭರತಂ
ಗಿಂದೆ ಸುದ್ದಿಯ ತಿಳುಹು, ಬಹೆನೆಂಟಾರು ವರ್ಷದಲಿ ।
ಇಂದಿದೇತರ ಕಷ್ಟ ಲೋಕದ
ಬಂಧನವ ಬದಿಗಿಟ್ಟು ವಿಶ್ವದ
ತಂದೆಯಡಿಗಳ ನೆನೆದು ಸುಖದಿಂದಿರುವೆ ತಿಳಿಯೆಂದ ॥೩೫॥

ಎದ್ದು ಮೆಲ್ಲನೆ ತೆರೆದು ಕಣ್ಗಳ
ನದ್ದಿ ಕಂಬನಿ ಸರದಿ ರಾಮನ
ಬಿದ್ದು ಹೊರಳಿದ ಮಗನೆ ವಿಪಿನವನಾನು ಸೇರುವೆನು ।
ಉದ್ದುಕುಟುತನದಿಂದ ಪಡೆದಳು
ಗದ್ದುಗೆಯನೀ ಕೈಕೆ ನಿನ್ನೊಡ
ನಿದ್ದು ಬಾಳುವೆ ವನದಿ ಸುಖದಿಂದೆಂದನಾ ನೃಪತಿ ॥೩೬॥

ಅರಿದೆನ್ನೈ ಹರಿಯೆಂದು ಕರುಣಾ
ವರನೆ ಲೋಕದ ಶಿಕ್ಷೆ ರಕ್ಷೆಗೆ
ಪರಮಗುರು ನೀನೆಂದು ಸಚರಾಚರದೊಳಿಹೆಯೆಂದು ।
ಚರಿಸಲಶುಭಾ ಶುಭದ ಕರ್ಮವ
ನರಿತು ಫಲಗಳ ಕೊಡುವ ದೇವನು
ಪರಮಪುರುಷನು ನೀನೆನುತ ಗುರು ಮುನಿಗಳೊರೆದಿಹರು ॥೩೭॥

ಶಿಕ್ಷೆ ಯೇನಪರಾಧಮಿಲ್ಲದೆ
ಶಿಕ್ಷಕನು ಹದಿನಾಲ್ಕು ಲೋಕಕೆ
ಪಕ್ಷಿವಾಹನನೆಂಬ ಬಿರುದಿನ ವಾರಿಜೋದರನು ।
ರಕ್ಷಿಸೈ ಪರಮಾತ್ಮ ಮೌನಿಯು
ದೀಕ್ಷೆಯಂ ತಾಳದಿರು ಪಿತನ ಪ
ರೀಕ್ಷೆಸದಿರೈ ತಂದೆ ರಘುಪತಿಯೆಂದು ಬೇಡಿದನು ॥೩೮॥

ವಿಪಿನ ವಿಮುಖನ ಮಾಡೆ ರಾಮನ
ನೃಪತಿಯೊರೆದನು ಹಲವು ಪರಿಯಲಿ
ವಿಫಲವಾಗಲು ಪರಮ ದುಃಖವ ತಾಳ್ದು ಮನದಲ್ಲಿ ।
ವಿಪಿನಕೈದುವ ಜಾನಕಿಯು ಕರೆ
ದುಪಚರಿಸಿ ಹೊಗದಿರು ಮಗಳಿಂ
ದಪರಿಮಿತ ದುಃಖವನು ತಾರದಿರೆಂದನಾ ನೃಪತಿ ॥೩೯॥

ಪತಿಚರಣ ಮಹಿಮೆಯಲಿ ತನಗುಪ
ಹತಿಯು ತೋರದು ಹೆಜ್ಜೆ ಹೆಜ್ಜೆಗೆ
ಪತಿಯ ನಾಮಸ್ಮರಣೆ ಮಾಡುತ ನಡೆಯೆ ಭಯಮುಂಟೆ ।
ಪಿತನ ಮಾತಿಂ ನಡೆವ ರಘುಪತಿ
ಪತಿಯ ಮಾರ್ಗವನನುಸರಿಪುದೇ
ಸತಿಗೆ ನೀತಿ ನೃಪಾಲನೆಂದಳು ಸೀತೆ ವಿನಯದಲಿ ॥೪೦॥

ಅನಿತರಲಿ ನಾರುಡೆಯ ತಂದಳು
ಜನಕಜೆಗೆ ಲಕ್ಷ್ಮಣಗೆ ರಾಮಂ
ಗೆನುತ ಕೊಟ್ಟಳು ಕೈಕೆ ಮೂವರು ತೊಟ್ಟರವುಗಳನು ।
ಮನ ಮರುಗದಿರೆ ಸತಿಗೆ ಕಂಡಾ
ಜನಪ ಮೂರ್ಛೆಗೆ ಸಂದ ನೋಡು
ತ್ತ ಣಕವಾಡಿದಳಬಲೆ ರಾಮಂಗವಸರವನಿತ್ತು ॥೪೧॥

ಧರಿಸಿ ಮುನಿವಲ್ಕಲವ ಜಟೆಯನು
ಹಿರಿಯರಿಂಗಭಿನಮಿಸಿ ಪೊರಟನು
ಪರಮಪುರುಷನು ವನಕೆ ಸೀತಾಲಕ್ಷ್ಮಣರ್ವೆರಸಿ ।
ಕರ ಕಪೋಲದೊಳಿರಿಸಿ ಕಂಬನಿ
ಗರೆದರಾ ಪುರಜನರು ವಿಪಿನಕೆ
ಹರಿಯ ಹಿಂಬಾಲಿಸಲು ಮನಮಾಡಿದರು ಭಕ್ತಿಯಲಿ ॥೪೨॥

ಗುರು ವಸಿಷ್ಠನ ಕಂಡು ನಮಿಸುತ
ಪರಿಜನರ ಭೃತ್ಯಾವಳಿಯ ಗುರು
ಚರಣಕರ್ಪಿಸುತಿವರ ಸಲುಹುವುದಾನು ಬಹತನಕ ।
ಕರಗಿ ಕಂದಿದ ಜನನಿ ಜನಕರ
ಪೊರೆವ ಭಾರವು ನಿನ್ನ ಸೇರ್ದುದು
ಹರಸು ಹರಸೆಂದೆರಗಿ ಕಾನನ ಪಯಣಕನುವಾದ ॥೪೩॥

ಪರಿಜನಕೆ ಮಿತ್ರರಿಗೆ ವಿಪ್ರ ನಿ
ಕರಕೆ ವರ್ಷಾಶನವನಿತ್ತನು
ಕರೆದು ಯಾಚಕವೃಂದಕಿತ್ತನು ಕೇಳ್ದ ವಸ್ತುಗಳ ।
ಪುರಜನರ ನೋಡುತ್ತಲಕಟಾ
ಇಟಿಕೆವಡೆದಾ ಜನನಿ ದುಃಖದಿ
ಕೊರಗುತಿರುವಳು ಮರುಗದಂದದಿ ಸಲಹಿ ನೀವೆಂದ ॥೪೪॥

ತುಂಬಿದುದು ಬಹುದುಃಖ ಹರಿದುದು
ಕಂಬನಿಯ ಪರಿವಾಹ ಭಯವೇ
ತುಂಬಿದುಧು ಸೀತಾರಮಣ ವನವಾಸಕ್ಕೈದಲ್ಕೆ ।
ಕುಂಭಕರ್ಣಾಗ್ರಜನ ರಾಜ್ಯದೊ
ಳಿಂಬುಗೊಂಡುದಮಂಗಳ ಧ್ವನಿ
ತುಂಬಿದುದು ಸುಖದುಃಖವೆರಡಾ ದೇವನಗರಿಯಲಿ ॥೪೫॥

ನರಪನುದ್ವೇಗದಲಿ ಕಣ್ಣಾರೆ
ದೆರೆದು ನೋಡಿದನಕಟ ವಿಪಿನಕೆ
ತೆರಳಿದನೆ ಸುಕುಮಾರ ಹಾ ಹಾ ರಾಮ ಹಾರಾಮ ।
ಮುರಿದಳೇ ರವಿಕುಲವ ರಕ್ಕಸಿ
ಯಿರಿದಳೇ ಹೃದಯವನು ವರ್ಧಿಪ
ತರಳನನ್ನಟ್ಟಿದಳೆ ಕಾನನಕೆಂಧು ಮರುಗಿದನು ॥೪೬॥

ಇದಕಧಿಕ ಕಡುಶೋಕಮಾವುದು
ಹೃದಯ ವಜ್ರದೊಲಿಹುದು ಮರ್ಥುರೇ
ವಿಧಿಯ ಕೈ ಮೇಲಾಯ್ತು ರಾಮಂಗಡವಿ ನೆರೆಯಾಯ್ತು ।
ಹೆದುಳವಿಡು ಬಾ ಮಂತ್ರಿ ಶೀಘ್ರದಿ
ಕುದುರೆ ರಥ ಸಹಿತೈದಿ ಮೂವರ
ಪುದಿದ ಕಾನನಕೊಯ್ದು ಮಾರ್ಗವ ತಿಳುಹಿ ಬಾಯೆಂದ ॥೪೭॥

ನಡೆವರೇ ಹಾದಿಯನು ನೀನಡೆ
ದಡವಿ ಮಾರ್ಗಗಳೊರೆದು ಬಾ ಸುಖ
ದೊಡಲು ದಣಿವುದು ಮೂವರನು ರಥದಲ್ಲಿ ಕಳುಹುವುದು ।
ಪೊಡವಿಸುತೆ ಸುಕುಮಾರಿ ಭಯದಲಿ
ನಡುಗುವಳು ಮತಿಯೊರೆದು ಕರೆತರ
ಲೊಡಲ ಹಿಡಿವೆನು ಸೀತೆ ಬಂದೊಡೆ ಹೋಗು ನೀನೆಂದ ॥೪೮॥

ನೆನೆದು ರಘುಪುಂಗವನ ನರಪತಿ
ಭಣಿತೆಯರಿಯದೆ ರಾಮರಾಮೆಂ
ದೆನುತಲೊರಗಿದ ಮೂರ್ಛೆಯಲಿ ಸೆರೆಬಿಗಿದು ಬರುತಿರಲು ।
ಜನಪನಿರವನು ಕಂಡು ಮಂತ್ರಿಯು
ನೆನೆದು ಕಂಬನಿ ಜಲದಿ ಮರುಗಿದ
ವಿನಯದಿಂದುಪಚರಿಸಿ ಬಿಜ್ಜಣವಿಕ್ಕಿ ಸೇವಿಸಿದ ॥೪೯॥

ರಾಮ ರಾಮಧ್ವನಿಯೆ ಮೊಳಗಿತು
ಭೂಮಿಯೊಳಗೆಲ್ಲೆಲ್ಲು-ಬಳಲುತ
ಭೂಮಿಪತಿಯೆಳ್ಚೆತ್ತು ದೈನ್ಯದಿ ನೋಡಿ ಮಂತ್ರಿಯನು ।
ರಾಮನಂ ತೋರ್ಯೆ ಸುಮಂತ್ರನೆ
ಭೂಮಿಜೆಯ ಕರೆತಾರಕಟಕಟ-
ರಾಮ-ರಾಘವ ಬಾರೆನುತ ಹಲುಬಿದನು ಭೂಪಾಲ ॥೫೦॥

ಪಡೆಯುತಾಣತಿ ಮಂತ್ರಿ ನಮಿಸುತ
ನಡೆದ ರಥವನು ತರಿಸಿ ವಾಘೆಯ
ಹಿಡಿದು ಬಂದನು ಬೇಗ ರಾಮನು ತಂಗಿದ ಸ್ಥಳಕೆ ।
ತಡೆದು ಪುರಬಾಹೆಯಲಿ ದೇಹವ
ಕೆಡೆದು ರಘುಪತಿಪಾದಕಮಲದಿ
ನುಡಿಯದಾದನು ಮನದ ದುಃಖದ ಬೇಗೆಯಲಿ ಬೆಂದು ॥೫೧॥

ಜನಪಸನಾಜ್ಞೆಯನೊರೆಯೆ ರಘುವರ
ವಿನಯದಿಂದಭಿನಮಿಸಿ ರಥವ
ನ್ನನುಜ ಸತಿಸಹಿತೇರ್ದು ಮುಂದಣ ಪಯಣ ಬೆಳೆಸಿದನು ।
ಇನಕುಲೋತ್ತಮರಾಳ್ದಯೋಧ್ಯೆಯ
ನೆನೆದು ಕಣ್ಣೀರ್ಗರೆದು ವಂದಿಸಿ
ವನಕೆ ಸಾರ್ದನು ರಾಮು ತಂದೆಯು ವಚನ ಪಾಲಿಸಲು ॥೫೨॥

ಹರಿಯೊಡನಯೋಧ್ಯಾ ಪುರದ ಜನ
ಬರುತಿರಲು ನರನಾರಿಯರು ವೃದ್ಧರು
ತರುಣ ಬಾಲರು ರಾಮನೇ ಗತಿಯೆಂದು ಸಂದಣಿಸಿ ।
ಪುರದೊಳೆಮಗೇನಿಹುದು ಸರ್ವೋ
ದರನು ಸೇರಲು ವನವ ರಾಮನ
ಚರಣ ಸನ್ನಿಧಿಯುವುರ ನಗರಿಯು-ಹರಿಯು ವೈಕುಂಠ

ಎಂದು ದಶರಥನಂದನನ ಬಲ
ವಂದು ಸರ್ವರು ಬರಲು ಪರಿಪರಿ
ಯಿಂದ ಸಂತವಿಸುತಲಿ ಪೇಳ್ದನು ಪುರವ ಸೇರಲ್ಕೆ ।
ತಂದೆತಾಯ್ಗಳ ತೊರೆದು ಬಾಳುವ
ಹಂದೆಗಳು ನಾವಲ್ಲ ಲೋಕದ
ತಂದೆತಾಯ್ಗಳು ನಿಮ್ಮ ತೊರೆದಿನ್ನೆಲ್ಲಿ ಹೋಗುವೆವು ॥೫೪॥

ತರಣಿ ಮುಳುಗಲು ಪಶ್ಚಿಮದಿ ಹರಿ
ಚರಣಯುಗಳವ ನೆನೆದು ಸರ್ವರು
ಮರೆತು ದೇಹವ ಮಲಗಿದರು ನಿದ್ರೆಯಲಿ ಪರವಶದಿ ।
ಎರಡು ಯಾಮವ ಕಳೆದು ಮಂತ್ರಿಯ
ಕರೆದು ರಘುಪತಿ ತೊಳಲಿ ಬಳಲಿದ
ಛರರೆ ಪುರಜನರಿವರು ಮಧಳಲಿ ಬ್ಬೇಗ ಪುರಕೆಂದ ॥೫೫॥

ನಿದ್ದೆಯಲಿ ಮೈಮರೆತು ಮಲಗಿಹ
ರೆದ್ದರಾದೊಡೆ ಬಿಡರು, ತೇರನು
ಸದ್ದುಮಾಡದೆ ನಡೆಸು ಹೊಗುವೆವು ಶೀಘ್ರದಲಿ ವನವ ।
ಉದ್ದುರುಟುತನಮಲ್ಲ ಹಳುವದೊ
ಳಿದ್ದು ಬದುಕುವರಲ್ಲ ನಗರದೊ
ಳಿದ್ದರಾದೊಡೆ ಮತ್ತೆ ಕಾಂಬೆನು ನಡೆಸು ರಥವೆಂದ ||೫೬||

ಮೂವರೇರಲು ರಥವ ಹೆರಿಸಿದ
ಸಾವಧಾನದಿ ಮಂತ್ರಿ ಜನ ನಿ
ದ್ರಾವಶದಿ ಮಲಗಿರಲು ಚಕ್ರದ ಜಾಡು ತಿಳಿಯದೊಲು ।
ದೇವ ಮರಳಿದನೆಂಬ ಬಗೆಯಲಿ
ಧಾವಿಸುತ ಪುರಕೆದುರು ಮತ್ತಾ
ಪಾವನನ ಕೊಂಡೊಯ್ದು ವನಕೆ ಸುಮಂತ್ರ ಗುಪ್ತದಲಿ ||೫೭||

ಬೆಳಗೆ ರವಿ ಪೂರ್ವದಲಿ ಕಣ್ದೆರೆ
ದಲಘುಮತಿ ರಘುಪತಿಯು ಕಾಣದೆ
ಕಳವಳಿಸಿ ರಥಮಾರ್ಗವನು ನೋಡುತ ಪುರವ ಸೇರಿದರು ।
ಅಳಲುತಲಿ ಕಂಗೆಟ್ಟು ತೊಳಲುತ
ಬಳಲಿ ನಿದ್ರೆಯ ಬೈದು ರಘುಪತಿ
ಹಳುವಕೈದಿದ ತೊರೆದು ಸರ್ವರನೆಂದು ಮರುಗಿದರು ||೫೮||

ಮುಂದೆ ಬದುಕಿರಲೆಮಗೆ ದಶರಥ
ನಂದನನು ದರುಶನವನೀಯುವ
ನಿಂದು ಮರಣವನೈದೆ ದರ್ಶನಲಾಭ ಸಂದಪುದೆ ?।
ತಂದೆ ಸಿಂಹಾಸನದಿ ಮೆರೆವುದ
ನಿಂದು ನೋಡುವ ಸುಕೃತ ಬರಲೆಮ
ಗೆಂದು ಜೀವವ ಹಿಡಿದರಾ ಭಕ್ತೋತ್ತಮರು ಕೊರಗಿ ||೫೯||

ಧಾಮದರ್ಶನ ಬಯಕೆಯಿಂ ವ್ರತ
ಹೋಮ ನಿಯಮೋಪಾಸನಂಗಳ
ಪ್ರೇಮದಲಿ ನರನಾರಿಯರು ಭಕ್ತಿಯಲಿ ಚರಿಸುವರು ।
ಶ್ರೀಮನೋಹರ ವಿರಹ ದುಃಖದಿ
ಭೂಮಿಯೇ ಕೊರಗುತಿರೆ ಸರ್ವರು
ರಾಮನಾಮಾಮೃತವ ಸವಿಯುತಲಿಹರು ಸಂತತವು ॥೬೦॥

## ವಿಶ್ರಾಮ ೭

ಸೂ॥ ಒಲಿದು ಗುಹನೊಡಗೂಡಿ ರಾತ್ರಿಯ
ಕಳೆದು ರಘುಪತಿ, ಪುರಕೆ ಮಂತ್ರಿಯ
ಕಳುಹಿ, ಮೂವರು ಮುದದಿ ಗಂಗಾನದಿಯ ದಾಟಿದರು

ತುಂಗ ವಿಕ್ರಮರಿರ್ವ ಸೋದರ
ರಂಗನಾಮಣಿ ಮಂತ್ರಿವೆರಸುತ
ಶೃಂಗಬೇರಪುರವನು ಸೇರ್ದರು ರಥದ ಪಯಣದಲಿ ।
ಸಿಂಗರದಿ ಹರಿಯುತಿಹ ಪಾವನ
ಗಂಗೆಗಭಿನಮಿಸಿದರು ನಾಲ್ವರು
ಮಂಗಳೆಯ ಕಥನಪ್ರಸಂಗವನೊರೆದ ರಘುರಾಮ ॥೧॥

ಮಿಂದು ತೀರ್ಥವ ಸವಿದು ಕುಸುಮಗ
ಳಿಂದ ಪೂಜಿಸಿ ನೆನೆದು ಶ್ರುತಿ
ವೃಂದವಂ ಹೊಗಳುತ್ತ ಮಾರ್ಗಾಯಾಸ ಕಳೆಯುತ್ತ ।
ಅಂದು ವಿಶ್ರಮಿಸಿಕೊಳುತಿರಲರ
ವಿಂದಮುಖ ಬಂದಿಹುದನರಿಯುತ
ಲಂದದಿಂ ನಡೆತಂದ ಶಬರನೃಪಾಲ ಗುಹನೊಲಿದು ॥೨॥

ಬಂದು ಕಾಣಿಕೆಯಿತ್ತು ಚರಣ
ದ್ವಂದ್ವಗಳ ಪಿಡಿಯುತ್ತ ದರ್ಶನ
ದಿಂದ ಹೊಂಪುಳಿಯೋದ, ಪರಿಜನಸಹಿತ ಹೊಗಳುತಲಿ |
ಬಂದ ಗುಹನಂ ಮನ್ನಿಸುತಲರ
ವಿಂದನಾಭನು ಕುಶಲವೇ ಸಖ
ನಿಂದು ನಿನ್ನನು ನೋಡಿ ಸಂತಸವಡೆದೆ ತಾನೆಂದ ||೩||

ಚರಣ ದರ್ಶನ ಮಾತ್ರದಲಿ ಸುಖ
ದೊರೆತುದೈ ತವ ಕರುಣವೊಂದಿರೆ
ಧರೆಯೊಳಾವುದು ಕಷ್ಟ ಸಕಲವು ಕರತಳಾಮಲಕ |
ಚರಣ ಭೃತ್ಯರು ನಾವು, ನಮ್ಮಾ
ಧರಣಿ ಸಂಪದ ನಿನ್ನದೈ ಸ್ವೀ
ಕರಿಸಿ ಕೃಪೆಮಾಡೆಂದು ಹಣೆಚಾಚಿದನು ಹರಿಪದದಿ ||೪||

ಅನಘ, ನಗರವ ಹೊಕ್ಕು ಪಾವನ
ವೆನಿಸು, ಸಿಂಹಾಸನವು ನಿನ್ನದು
ವನಜ ಪದಗಳ ಸೇವೆಯೊಂದೇ ಸಾಕು ತನಗೆನಲು |
ಜನಕನಾಣತಿಯಿಂದ ವನದಲಿ
ಮುನಿಯೊಲಾಂ ಹದಿನಾಲ್ಕು ವತ್ಸರ
ಅನುಜಸತಿವೆರಸುತ್ತಲಿರುವೆನು ಬಾರೆನಾಂ ಪುರಕೆ ||೫||

ಹರಿಯ ಮಾತಿಗೆ ಮರುಗಿದನು ಗುಹ
ಪುರವ ಹೊಗದ ವ್ರತವ ತೊಟ್ಟರೆ
ಮರುನುಡಿಯನಾಡದೆಯೆ ರಚಿಸಿದನೆಲೆವನೆಯನೊಂದ |
ಎರಗಿ ಪದಕಮಲದಲಿ ಕಾಣಿಕೆ
ಸುರಿದು, ಫಲಮೂಲಗಳನರ್ಪಿಸಿ
ತೆರಳಿದರು ಪುರಜನರು ರಾಮನ ಗುಣವ ಹೊಗಳುತ್ತ ||೬||

ಎಳೆಯ ಮಕ್ಕಳನಿವರ ಹಳುವಕೆ
ಕಳುಹಲೆಂತೊಡಬಟ್ಟರೋ ಮನ
ವೊಲಿದು ತಾಯ್ತಂದೆವಿರ ಹೊಗಳಲೆಯೆಂದಳೊರ್ವ ಸಖಿ ।
ಕಳುಹಿ ವನವಾಸಕ್ಕೆ ದಶರಥ
ನೊಳಿತಗೈದನು ದೈವದರ್ಶನ
ಸುಲಭವೇನಘಟಿತವಲಾ ಕೇಳೆಂದಳೊರ್ವಸಖಿ ॥೭॥

ಮಾಡಿ ಕುಶಕಿಸಲಯದ ಹಾಸಿಗೆ
ಕಾಡವಮೌನವ ಸೀಳಿ ಬೇಡರು
ಹಾಡಿದರು ರಘುಪತಿಯ ಗುಣಗಾನವನು ಮಾಡುತ್ತ ।
ಮಾಡಿ ಸಂಧ್ಯಾವಂದನವ ಹರಿ
ನೋಡಿ ಸಂತಸದಿಂದಲವರೊಡ
ಗೂಡಿ ಫಲಮೂಲಗಳ ತಿಂದನು ಸಾನುರಾಗದಲಿ ॥೮॥

ಪವಡಿಸಲು ಹರಿಯಂದು ಲಕ್ಷ್ಮಣ
ನವನಡಿಗಳೊತ್ತಿದನು ಪಯಣದ
ಬವಣೆಗಳ ಪರಿಹರಿಸಿ ಭಕುತಿಯ ಸೇವೆಯನ್ನೆಸಗಿ ।
ಅವನಿಜಾಪತಿ ನಿದ್ರಿಸಿದ, ನೀ
ಪವಡಿಸೆಂದನು ಮಂತ್ರಿಯನು ಮಾ
ಧವನ ರಕ್ಷೆಗೆ ತರಳ ವೀರಾಸನದಿ ಮಂಡಿಸಿದ ॥೯॥

ಕರೆಸಿ ಸುಭಟರನಿರಿಸಿ ಸುತ್ತಲು
ಭರದೊಳಾ ರಾಘವನ ರಕ್ಷೆಗೆ
ಶರಧನುವ ಪಿಡಿಯುತ್ತ ಲಕ್ಷ್ಮಣನೆಡೆಗೆ ಗುಹ ಬಂದ ।
ಅರರೆ ಮೃದು ತಲ್ಪದಲಿ ನಿದ್ರಿಪ
ಪರಮಪುರುಷಂಗೀ ವಿಧಿಯಕಟ
ಅರಮನೆಯ ಸೌಭಾಗ್ಯ ಮರೆತನೆಯೆಂದನಾ ಗುಹನು ॥೧೦॥

ಶ್ರೀಪತಿಯು ಮಾಯವಿದು, ದಶರಥ
ಭೂಪತಿಗೆ ಮಗನಾಗಿ ಲೋಕದ
ತಾಪಗಳನನುಭವಿಸೆ ವೈರಾಗ್ಯೋಪದೇಶದಲಿ ।
ತಾಪಸರ ಪರಿಜಿಂದ ಲೋಕದ
ಲೋಪಗಳನೊರೆಸಲ್ಕೆ ಮೃದು ಸ
ಲ್ಲಾಪ ತೃಪ್ತನು ಬಂದನೇ ಕರುಣಿಸಿದನೇ ನಮ್ಮ ॥೧೧॥

ಧರೆಯ ಸೃಷ್ಟಿಸಿ ಸಲಹುತುಪಸಂ
ಹರಿಪ ಸೀತಾಮಾತೆ ನಮ್ಮನು
ಕರುಣದಿಂದಲಿ ನೋಡಲಿಲ್ಲಿಗೆ ನಡೆದು ಬಂದಿಹಳಿ ।
ಸಿರಿಗೆ ಸಿರಿ ಬೇಡಾಯ್ತು ಕಾಡಿನ
ಸಿರಿಯು ಮೆಚ್ಚಿದಳೇಕೆ ದೇವಿಯು
ಕರುಣವೆನಿತೋ ತನ್ನ ಭಕ್ತರೊಳೆಂದನಾ ಭೂಪ ॥೧೨॥

ಮಂದಮತಿಯಾ ಕೇಕಯಾತ್ಮಜೆ
ಸಂದುದೇ ವರಗಳ ಫಲಂಗಳು
ಬಂಧುಕೃತ್ಯದ ಮಾತು ಭರತಂಗೊಪ್ಪಿತೇನಕಟ ।
ಇಂದು ಕಾಡಿಗೆ ಕಳುಹಿ ರಘುಕುಲ
ನಂದನರ ತಾಂ ಮೆರೆವಳೇ ಸತಿ
ಯೆಂದನಾ ಗುಹ ಮನದ ದುಃಖದಿ ಬೆಂದು ಲಕ್ಷ್ಮಣಗೆ ॥೧೩॥

ಇದುವೆ ಬಯಲ ಭ್ರಾಂತಿ ಕನಸಿನೊ
ಳದುಭುತವ ಕಾಣುತ್ತ ಶಕ್ರನ
ಪದವಿಯನು ಪಡೆವಂತೆ ತಿರುಕನು ನಿದ್ರೆಮರೆಯಲ್ಕೆ ।
ಪದವು ಹೋಯ್ತೆಂದಳಲುವನೆ ಮನ
ವದಕೆ ಬೇಸರವಡದು ಸುಖದುಃ
ಖದಲಿ ಸೆಳೆವುದು ಕರ್ಮಮಿಥ್ಯಮಿದೆಂದ ಸೌಮಿತ್ರಿ ॥೧೪॥

ಒಡನೆ ನಿದ್ರಿಸುತಿರಲು ಸರ್ವರು,
ಪಡೆಯೆ ಪರಮಾರ್ಥವನು ಯೋಗಿಯು
ಜಡನೆನಿಸಿ ಸುಜ್ಞಾನಿ ಜಾಗ್ರತನಾಗಿಹನು ಸತತ ।
ಪೊಡವಿಯುದರದೊಳಿಟ್ಟ ದೇವಂ
ಗಡವಿಯೊಡೆತನವೆಂಬ ದುಃಖವ
ಬಿಡು ಮನೋವ್ಯಥೆಯಿವನ ಲೀಲಾನಾಟಕವಿದೆಂದ ॥೧೫॥

ಸ್ಮರಿಸಲಿವನಂಘ್ರಿಗಳನರ್ಚಿಸಿ
ಭರದಿ ಸೇವಿಸೆ ಮೋಹವಳಿವುದು
ಹರಿಯು ಮುಕ್ತರ ಮಾಡಿ ಸೇವಾಸಕ್ತರಂ ಪೊರೆವ ।
ಪರಮ ಘನವೀ ಚರಿತೆ ಹೃದಯದೊ
ಳರಿದು ಲೋಕಭ್ರಮೆಯನರಿವುದು
ಚರಣ ಕಮಲವನಂಬಿ ರಾಮನ ಭಜಿಸು ನೀನೆಂದ ॥೧೬॥

ಕಳೆದರಾ ನಿಶಿ ರಾಮಕಥನದಿ
ಬೆಳಕು ಹರಿದುದು ಮಂಗಳಪ್ರದ
ನೊಲಿದು ಕಣ್ದೆರೆದೆದ್ದ ಪೂರ್ವದಿ ನೇಸರುದಯಿಸಲು ।
ತೊಳೆದು ಮುಖಪದ್ಮವನು ಗಂಗೆಯೊ
ಳಿಳಿದು ಮಿಂದನು ನಿತ್ಯ ಕರ್ಮವ
ನಳವಡಿಸುತಿಷ್ಟಾರ್ಚನೆಯ ಮುಗಿಸಿದ ರಾಮಚಂದ್ರಮನು ॥೧೭॥

ವಟತರು ಕ್ಷೀರವನು ತರಿಸುತ
ಜಟೆಯ ರಚಿಸುತ ಲಕ್ಷ್ಮಣಗೆ
ಜಟೆಯ ಕಟ್ಟಿದ ಕೈಕೆಗಿತ್ತಿಹ ನುಡಿಯ ಪಾಲಿಸಲು ।
ಲಟಕಟಿಸಿದನು ಮಂತ್ರಿ ಮನದೊಳ
ಘಟಿತವಿದಕಟ ಸಾರ್ವಭೌಮಗೆ
ಜಟೆಯೆ ವಲ್ಕಲ ವಸನವೇ ಸುಡು ವಿಧಿಯ ಕೃತಿಯೆಂದ ॥೧೮॥

ಮುಗಿದು ಕರಗಳನೆಲೆ ರಘೂತ್ತಮ
ಹೇಳುವಕಟ್ಟೆದನೆನ್ನ ಭೂಪತಿ
ತಿಲಕ ನಿಮ್ಮನು ರಥದೊಳೇರಿಸಿಕೊಂಡು ಬಾಯೆಂದು |
ಹಲವು ಪರಿ ನುಡಿದಿಹನು ಗಂಗಾ
ಜಲದಿ ಮಜ್ಜನಮಾಡಿ ಬರಲೆ
ನ್ನಿಳೆಗೆ ಸುತರೆಂದೊರೆದ ಕೃಪೆಮಾಡೆಂದನಾ ಸಚಿವ ||೧೯||

ಮರಳು ನೀ ಪುರಕಿನ್ನು ತಾತನು
ಪರಮ ದುಃಖದೆ ನವೆವನವನಂ
ಪೊರೆವುದೈ ಪಿತೃ ವಚನ ಪಾಲಿಸಲೆನಗೆ ನೇಮವಿರೆ |
ಪುರವ ಸೇರುವುದೆಂತು ಕೈಕೆಯೊ
ಳೊರೆದುದೇಂ ಹದಿನಾಲ್ಕು ವತ್ಸರ
ಚರಿಸುವೆನು ವನವಾಸವೆಂದೊರೆದೀಗ ದೂರುವೆನೆ ||೨೦||

ತಾತನಾಶೀರ್ವಾದ ತಾಯಿಯ
ಪ್ರೀತಿ ಕೈಕೆಯ ವಚನ ಸುಜನ
ವ್ರಾತದಂತಃಕರಣ ಹಳುವದೊಳೆಮ್ಮ ಕಾಯುತಿರೆ |
ಭೀತಿ ಬೇಡಿನ್ನೇನು ಮರಳೈ
ನೀತಿಯೊರೆದಾ ನೃಪಗೆ-ಮಕ್ಕಳು
ಸೋತುದಿಲ್ಲೈ ಸುಖದೊಳಿಹರೆಂದೊರೆದು ಸಂತವಿಸು ||೨೧||

ಧರುಮ ಸತ್ಯಕೆ ಶಿಬಿದಧೀಚಿಯು
ವರ ಹರಿಶ್ಚಂದ್ರ ನೃಪ ನಾನಾ
ಪರಿಯ ದುಃಖಕ್ಲೇಶಗಳನನುಭವಿಸಿದರು ಜಗದಿ |
ಪರಮ ಭಕ್ತನು ರಂತಿದೇವನು
ಸುರವಿರೋಧಿಯು ಬಲಿಯು ನಾನಾ
ಪರಿಯ ಸಂಕಟಗಳನು ಹಾಯ್ದರು ಸತ್ಯವೊಂದುಳುಹೆ ||೨೨||

ಸತ್ಯದೊಲು ಸದ್ಧರ್ಮ ವಾವುದು
ನಿತ್ಯ ನಿಗಮಾಗಮ ಪುರಾಣ
ಸ್ತುತ್ಯಮಾಗಿರೆ ಸುಲಭದಿಂದದ ಸಾಧಿಸುವೆನಾನು ।
ಸತ್ಯಮಂ ಬಿಡಲಾರೆ ಲೋಕ್ಕದೊ
ಅತ್ಯಧಿಕ ದುರ್ಯಶವು ಕಾಡುತ
ನಿತ್ಯನರಕದೊಳಿಳಿವುದೆನ್ನನು ಮಂತ್ರಿ ಕೇಳೆಂದ ॥೨೩॥

ಜನಕನಂ ಸಂತವಿಸು ದುಃಖದಿ
ತನಯಗೋಸುಗ ಹಲುಬದೊಲು ನೀ
ನನಘ ನಿರ್ಮಲ ಚರಿತೆವೊರೆವುತ ಸಲಹು–ಮರಳುವೆನು ।
ಜನನಿಗಿತ್ತಿಹ ನುಡಿಯು ಪಾಲಿಸಿ
ಜನಕನಡಿಗಳ ಸೇವೆ ಶೀಘ್ರದಿ
ವಿನುತ ನೀ ನಡೆಯೆನಲು ತಲೆಬಾಗಿದನು ಮಂತ್ರೀಶ ॥೨೪॥

ತಿಳುಹುವುದು ಜಾನಕಿಗೆ, ರಘುಪತಿ,
ಲಲನೆ ಮರಳಲಿ ಪುರಕೆ ಜನಪತಿ
ಯೊಲವಿನಿಂ ಸೇವಿಸಲಿ ಪಾಲಿಸು ಭೂಪನಾಣತಿಯ ।
ಜಲಜಮುಖಿ ಬಾರದಿರೆ ಜೀವವ
ಕಳೆವನಾ ಭೂಪಾಲ ನಗರಕೆ
ಕಳುಹು ಸೀತೆಯ ಸಲಹು ಮಾತಾಪಿತರ ನೀನೆಂದ ॥೨೫॥

ಪರಮ ಕರುಣಾಮಯ ವಿವೇಕಿಯೆ
ನೆರಳು ತನುವಂ ತೊರೆಯಲರಿವುದೆ
ತೊರೆಯ ಬಲ್ಲುದೆ ಕಾಂತಿ ಸೂರ್ಯನ ತಿಳಿದು ಪೇಳೆನಗೆ ।
ಉಡುವ ಬೆಳ್ದಿಂಗಳು ಶಶಾಂಕನ
ತೊರೆಯೆ ಶಕ್ಯವೆ ಹೂವ ಪರಿಮಳ
ತೊರೆಯಲಾಪುದೆ ಪತಿಯ ತೊರೆವೆನೆಯೆಂದಳಾ ಸೀತೆ ॥೨೬॥

ಮನ್ನಿಸೆನ್ನನು ಮಂತ್ರಿ ರಾಮನ
ಸನ್ನಿಧಿಯೆ ಸುಖನೆಲೆಯು ಮಿಕ್ಕಿನ
ಬನ್ನಣೆಯ ರಾಜ್ಯದಲಿ ಬಾಳುವ ಬಗೆಯೆ ನಾನರಿಯೆ ।
ಎನ್ನ ಜನಕನ ನಿಲಯ ಮೇಣೆನ
ಗಿನ್ನು ಮಾವನ ನಿಲಯ ಪತಿ ಸಂ
ಪನ್ನನಿಲ್ಲದ ಮೇಲೆ ನಾರಕವೆಂದಳಾ ಸೀತೆ ॥೧೭॥

ಮಾವನರಮನೆ ಸಗ್ಗಕಿಂ ಮಿಗಿ
ಲಾ ವಿದೇಹನ ಭವನ ಭುವನದೊ
ಳಾವಗುಂ ದೊರೆಯದಿರೆ ದೊರೆಯಿತ್ತೆನ್ನ ಪುಣ್ಯದಲಿ ।
ಶ್ರೀವರನ ರಘುರಾಮಚಂದ್ರನ
ಪಾವನಾಂಘ್ರಿ ಸರೋಜ ಸನ್ನಿಧಿ
ಗಾವ ಜಗ ಮಿಗಿಲಹುದು ಪೇಳೆಂದಳು ವಿಶಾಲಾಕ್ಷಿ ॥೧೮॥

ಲೋಕರಕ್ಷಕನೆನ್ನ ರಮಣನ
ನೇಕ ಭುವನವನುದುರದೊಳಿಡುತ
ಸಾಕುವೀ ಪ್ರಭುಪಾದ ಮೂಲವ ತೊರೆದು ಬಹೆನೆಂತು ।
ಮೂಕರಾದೆವುಗೀತನೇ ಗತಿ ಭಯ
ಮೇಕೆ ಮೈದುನನಂಗ ರಕ್ಷಣೆ
ಸಾಕು ನೀ ನಡೆ ಮರುಗಬೇಡೆಂದಳು ಸರೋಜಾಕ್ಷಿ ॥೧೯॥

ಅತ್ತ ದಶರಥನಿತ್ತ ರಘುಪತಿ
ಚಿತ್ತವನು ಸೆಳೆಯುತಿರೆ ವರ ಸಚಿ
ವೋತ್ತಮನು ಬೆರಳಿನಲಿ ದೃಗುಜಲ ಮಿಡಿದು ನಿಂದಿರಲು ।
ಸತ್ಯಕೋಸುಗ ಕೆಲವು ದಿನಗಳ
ನಿತ್ತ ಕಳೆವೊಡೆ ದುಃಖವೇತಕೆ
ಚಿತ್ತ ಕೊಂಕಿಸದಿನ್ನು ನೀ ತೆರಳೆಂದ ದಾಶರಥಿ ॥೨೦॥

ತಳುವಿದೊಡೆ ನೃಪನಸುವ ತೊರೆವನೊ
ಹಳುವಕಟ್ಟಿದೆನೆಂದು ಮುನಿವನೊ
ಲಲನೆ ಗೆದ್ದಳೆ ನೃಪನ ಸಿಂಹಾಸನವ ಬಯಸುತಲಿ ।
ತಿಳಿವೆನಿವ ಹದಿನಾಲ್ಕು ಭುವನಗ
ಳೊಲಿದು ಸೃಷ್ಟಿಸಿ ಪೊರೆದು ನುಂಗುವ
ಜಲಜನಾಭನ ಮಾಯೆ ದುಃಖವನೊಡ್ಡಿತೆನಗೆಂದ ॥೩೧॥

ರಾಮನಂ ನೋಡುತ್ತ ಕುದುರೆಗ
ಳಾ ಮಹಾತ್ಮನ ತೆಗೆದು ಪುಳುಕದಿ
ರಾಮನಿಲ್ಲದ ರಥವನೆಳೆಯಲು ಬಾರದಿರೆ ಕಂಡು ।
ರಾಮು ಕರುಣದಿ ಚಪ್ಪರಿಸೆ ಹೊರ
ಟಾ ಮಹೀಪತಿ ಪುರವ ಸಾರಿದು
ವೀ ಮೃಗಾದಿಯ ಭಕ್ತಿಯೆನಿತೋ ದೇವನಂಘ್ರಿಯಲಿ ॥೩೨॥

ಮುಂದೆ ಗಂಗಾನದಿಯ ದಾಟಲು
ತಂದು ನಿಲಿಸಿದ ನಾವೆಯಂ ಗುಹ
ನಂದು, ಭಕ್ತಿಯ ಮನದೊಳಂಬಿಗ ನೋಡಿ ರಘುವರನ ।
ತಂದೆ ನೀನನುಪಮಿತ ಮಹಿಮನು
ಹಿಂದೆ ಮೂರಡಿ ನೆಲನನಳೆಯುತ
ಲೊಂದು ಪಾದದಿ ಕೊಂಡೆ ಭುವನವನೆಲ್ಲ ನೀನೆಂದ ॥೩೩॥

ಪದರಜವ ಸೋಕುತಲಿ ಕಲ್ಲನು
ಸುದತಿಯೆಸಗಿದ ದೇವ ನಿನ್ನೀ
ಪದವು ಸೋಂಕಿದೊಡೆನ್ನ ನಾವೆಯು ಪರಿಯದೇನಹುದೊ ।
ಮೊದಲು ಪದರಜವೊರೆಸಿ ಜಲದಲಿ
ಮುದದೊಳೇರಿಸಿ ನಿನ್ನನೊಯ್ವೆನು
ಪದುಮನಾಭನೆ ಕರುಣಿಸೆನ್ನಲು ಮೆಚ್ಚಿದನು ರಾಮು ॥೩೪॥

ತಂದು ಗಂಗಾಜಲವ ಹರುಷದ
ಲಂದು ಹರಿಪದಪದ್ಮ ತೊಳೆದಾ
ನಂದಲಹರಿಯೊಳಂಬಿಗನು ಕುಣಿಕುಣಿದ ಭಕ್ತಿಯಲಿ ।
ಬಂದುದುಂಗುಟದಿಂದ ಸುರನದಿ
ಯಿಂದು ರಾಮನ ಸೇವೆಗಾಯ್ತಿದು
ತಂದೆ ರಕ್ಷಿಸು ರಕ್ಷಿಸೆಂದನು ಹರಿಯ ಪದಕೆರಗಿ ॥೩೫॥

ಭವ ಸಮುದ್ರವ ದಾಟಿಸುವ ಹರಿ
ದಿವಿಜನದಿಯನು ನೌಕೆಯಲಿ ದಾ
ಟುವನು ಗಡ ಪಾದದೊಳು ಗಂಗೆಯು ಪೆತ್ತ ಪಾವನನು ।
ಅವರನೊಯ್ದಂಬಿಗನು ದಾಟಿಸು
ತವನಿಜಾಪತಿಯಂಘ್ರಿಗೆರಗ
ಲ್ಕವನೆ ಸೀತಾಕರದ ಮುದ್ರಿಕೆಯಿತ್ತ ಮುದದಿಂದ ॥೩೬॥

ನಿನ್ನ ನೋಡಿದೆನೆನ್ನ ಪುಣ್ಯದಿ
ನಿನ್ನ ಸೇವೆಯು ಲಭಿಸೆ ಕೊಳ್ವೆನೆ
ಸನ್ನುತ ಶ್ರೀಮೂರ್ತಿಯಿಂ ಬಾಡಿಗೆಯ ಧನವಿನ್ನು ।
ನಿನ್ನ ನಾಮಸ್ಮರಣೆ ಸಂತತ
ನಿನ್ನ ಚರಣ ಸರೋಜ ಪೂಜೆಗ
ಳೆನ್ನು ಕರುಣಿಸು ತಂದೆಯೆಂದೆರಗಿದನು ಹರಿಪದಕೆ ॥೩೭॥

ಪರಮ ಭಕ್ತನು ನೀನು ಮೆಚ್ಚಿದೆ
ಸುರನದಿಯ ದಾಟಿಸುತ ಬಳಲಿದೆ
ಚರಣಯುಗಳವ ತೊಳೆದು ಮಹಿಮೆಯು ಕೊಂಡೆ ನಿವಿಸದಲಿ ।
ಹರಸಿದೆನು–ಹೋಗೆಂದು ಕಳುಹಿದ
ಪರಿಪರಿಯೊಳಾ ನದಿಯು ಹೊಗಳುತ
ಲಿರುವ ಸೀತಾರಾಮಚಂದ್ರನು ಸಂತಸದ ಮನದಿ ॥೩೮॥

# ವಿಶ್ರಾಮ ೮

ಸೂ|| ಕೆಡೆದು ಭಾರದ್ವಾಜ ಋಷಿವರ
ನಡಿಗಳಲಿ ವಾಲ್ಮೀಕಿ ಮುನಿಪತಿ
ಯೆಡೆಯ ಸೇರುತ ಚಿತ್ರಕೂಟಾಚಲಕೆ ಹರಿಬಂದ ||

ಮಾಡಿ ಗಂಗಾಸ್ನಾನ ಪೂಜೆಯ
ಮಾಡಿ ಮೂವರು ಮಂಗಳವ ನೀ
ನೀಡೆನುತ ವರ ಬೇಡಿದರು ಸುರನದಿಯ ಕೈಮುಗಿದು |
ನೋಡದೆಮ್ಮಯ ಹೆಚ್ಚುಕುಂದನು
ನೀಡು ತಾಯೆ ಮನೋರಥಂಗಳ
ಬೇಡುವೆನು ಹರಸೆಂದು ಹರಕೆಯ ಪಡೆದಳಾ ಸೀತೆ ||೧||

ಮುಂದೆ ರಾಮನು ನಡೆವ ಪಯಣದೊ
ಳೆಂದು ಗುಹ ಕರಮುಗಿದು ಭಕ್ತಿಯೊ
ಳೆಂದ ಕರುಣಾನಂದಮಯ ರಘುರಾಮ ನಿಸ್ಸೀಮ |
ಇಂದು ತೊರೆಯದಿರೆನ್ನ ಜೊತೆಯಲಿ
ಬಂದು ಸೇವೆಯ ಸಲ್ಲಿಸುವೆ ಚೆಲು
ವಿಂದ ಪರ್ಣಕುಟೀರ ಕಟ್ಟುವೆ ನೀನಿರುವ ವನದಿ ||೨||

ತೋರಿ ವನಮಾರ್ಗಗಳನಾಯಸ
ವಾರಿಸುವೆನಸುರಾರಿ ಭುಜದೊಳ
ಗೇರಿಸುತಲೊಯ್ಯುವೆನು ಮೂವರ ವನದಿ ತಾನೆಂದ |
ಆರು ನಿನ್ನಂದದಲಿ ಸಖರೆಮ
ಗಾರು ಬಂಧುಗಳಾದೊಡೆಲೆ ಗುಹ
ಬಾರದಿರು ನಮ್ಮೊಡನೆ ರಾಜ್ಯವನಾಳು ನೀನೆಂದ ||೩||

ಭರತ ಲಕ್ಷ್ಮಣ ಶತ್ರುಸೂದನ
ರೆರಕ ನಿನ್ನಲಿ ಮೂಡಿದುದು ಗುಹ
ತೊರೆಯಲಾರೆನು ನಿನ್ನನಧರಿಂದೆನ್ನೊಡನೆ ಬಾರ ।
ಇರುತ ದಿನಗಳು ನಾಲ್ಕು ಸವೆಯಲು
ಮರಳು ನಿನ್ನಯ ಪುರಕೆ ರಾಜ್ಯವ
ಪೊರೆವುದೇ ಸದ್ಧರ್ಮ ನೀತಿಯ ಮರೆಯ ಬೇಡೆಂದ ॥೪॥

ಕಳೆದರಲ್ಲಿಯೆ ರಾತ್ರಿ ಹರುಷದಿ
ಮರುದಿವಸ ಪೊರಮಟ್ಟು ಪಯಣದಿ
ಚರಿಸಿ ಸೇರಿದರು ಪ್ರಯಾಗವ ತೀರ್ಥರಾಜನನು ।
ಪರಮ ಘನ ಸುಕ್ಷೇತ್ರ ಮಹಿಮೆಗ
ಳಿರವ ಮೂವರಿಗೊರೆದು ರಘುಪತಿ
ವರ ಭರದ್ವಾಜಾಶ್ರಮಕೆ ನಡೆತಂದ ವಹಿಲದಲಿ ॥೫॥

ಘನತೆಗಳ ಬದಿಗಿಟ್ಟು ನೊಸಲನು
ಮುನಿಪದದಿ ಚಾಚಿದನು ಪದರಜ
ಪಣೆಯೊಳಿಟ್ಟನು ಸುರರುಘೇಯೆನೆ ಹೊಗಳುತಾಗಸದಿ ।
ಮನದ ಹರುಷದಿ ನಗುತಲುಬ್ಬುತ
ಕುಣಿದ ಭಾರದ್ವಾಜ ರಾಮನ
ಕಣುಗಳಿಂ ಸೆಳೆಯುತ್ತ ಹೃದಯದಿ ಬಂಧಿಸಿದ ಬಿಗಿದು ॥೬॥

ಬಂದ ಭಕ್ತರ ಬಂಧು ಹರಿ ತಾ
ನಿಂದೊಲಿದು ಕರುಣಾಸ್ಪದನು ನಲ
ವಿಂದ ಶರಣರ ಬಯಕೆ ಸಲಿಸಲು ಬಂದ ನಡೆನಡೆದು ।
ಅಂದಹಲ್ಯಾದೇವಿಯೆಡೆಗೈ
ತಂದು ಸಲಹಿದ ದೇವನೀ ಪರಿ
ಜಿಂದ ಬಂದ ವಿಚಿತ್ರನಾಟಕವೆಂದನಾ ಮುನಿಪ ॥೭॥

ಎರಗಿ ಸತಿ ಸೌಮಿತ್ರಿ ಗುಹನೃಪ
ವೆರಸಿ ರಘುಪತಿ ಹೊಗಳಿದನು ರಘು
ವರನ ಸದ್ಗುಣಧಾಮ ಲೋಕಾಧಾರ ನೀನೆನುತ ।
ಕರದೊಳೆತ್ತುತ ಹರಸಿ ನಾಲ್ವರ
ದರುಶನದಿ ಮುದವಾಂತು ಭಕ್ತರ
ಕುರುಹುದೋರಲು ಬಂದ ಕರುಣಾಮೂರ್ತಿ ಶರಣೆಂದ ॥೮॥

ರಾಮ ಬಂದಿಹನೆಂದು ತಿಳಿದೊಡ
ನಾ ಮಹಾಮಹಿಮನನು ನೋಡಲು
ಕಾಮಿಸುತ ನೆರೆದು ಪ್ರಯಾಗ ನಿವಾಸಿಗಳು ಭರದಿ ।
ಪ್ರೇಮದಿಂ ತಾಪಸರು ಸಿದ್ಧರು
ಶ್ರೀ ಮನೋಹರ ಮೂರ್ತಿ ದರ್ಶನ
ಕಾಮನೆಯೊಳೈತಂದು ನಿಂದರು ಮುನಿಪನಾಶ್ರಮದಿ ॥೯॥

ಬಂದ ಭಕ್ತರ ಮನ್ನಿಸುತಲೊಲ
ವಿಂದ ನುಡಿಸಿದನನಿಬರನು ಮುದ
ದಿಂದ ವಂದಿಸಿ ಕಾಣಿಕೆಯ ಕೈಕೊಂಡು ಹೊಗಳಿದನು ।
ಅಂದಿನಾ ರಾತ್ರಿಯನು ಕಳೆಯುತ
ತಂದೆಯುದಯಿಸಲೆದ್ದು ಮುನಿಪನ
ವಂದಿಸುತ ತೋರೆಮಗೆ ಮುಂದಿನ ಮಾರ್ಗ ನೀನೆಂದ ॥೧೦॥

ಲೋಕಗಳ ಸೃಷ್ಟಿಸುವ ನಿನಗೀ
ಲೋಕದಲಿ ತಿಳಿಯದಿಹ ಮಾರ್ಗವ
ಕಾಕು ಮಾನವರರಿವರೇ ಸಾಕೇತರಾಟವಿದು ।
ಮೂಕಮಾನವರಂತೆ ನಿನಗಿದ
ನೇಕ ವೇಷಗಳಾಯ್ತು ವೇದಾ
ನೀಕವರಿಯದ ನಿನ್ನ ನಿಜವೆಂತರಿವೆ ನಾನೆಂದ ॥೧೧॥

ಕರೆಸಿ ಶಿಷ್ಯರ ನಾಲ್ವರನು ರಘು
ವರಗೆ ಹಳುವದಿ ಮಾರ್ಗದೋರಲು
ಭರದಿ ಕಳುಹಲು ಪೂರ್ವಜನ್ಮದ ಸುಕೃತವೆಂದೆನುತ ।
ಹರಿಯ ಪದಕಮಲಾರ್ಚನೆಯ ಗೈ
ದೆರಗಿ ಹೊಗಳುತ ಸುಲಭ ಹಾದಿಗ
ಳರಿದು ತೋರುತ ಬರಲು ನಗುಮೊಗದಿಂದ ನೋಡುವನು ॥೧೨॥

ಗ್ರಾಮನಿಕಟಕೆ ಬರಲು ನೆರೆದು
ಪ್ರೇಮದಿಂ ನರನಾರಿಯರು ಸಿರಿ
ರಾಮ ದರುಶನಮಾಡಿ ಜನ್ಮವು ಸಫಲಮಾಯ್ತೆಂದು ।
ಭೂಮಿಯೊಳಗುದಯಿಸಲು ದೊರಕಿತು
ರಾಮ ದರ್ಶನಲಾಭ ಸತ್ಫಲ
ರಾಮನಾಮಾಕೃತಿಯ ಕಂಡೆವೆನುತ್ತ ಹೊಗಳಿದರು ॥೧೩॥

ನಡೆದು ಯಮುನಾತೀರಕೈದುತ
ಲೊಡನೆ ಮುನಿವಟುಗಳನು ಮನ್ನಿಸಿ
ನಡೆದು ನೊಂದಿರಿ ಮರಳಿ ಆಶ್ರಮಕೆಂದು ಕಳುಹಿದನು ।
ಮಡದಿ ಸಹಿತಾರಾಮ ಮಿಂದನು
ಕಡುಮಮತೆಯಲಿ ಹೊಗಳಿ ಯಮುನಾ
ಮಡುವ ನಿಜತನು ವರ್ಣದಿಂ ಶೋಭಿಸುವ ವಾರಿಯನು ॥೧೪॥

ತಿಳಿದು ಯಮುನಾತೀರ ವಾಸಿಗ
ಳೊಲಿದು ಬಂದರು ಬಿಟ್ಟುಕಾರ್ಯವ
ಸುಲಭ ನಡೆತಂದಿರಲು ಹರುಷದ ಮನದೊಳಾತುರದಿ ।
ನಲಿದು ಸೀತಾರಾಮ ಲಕ್ಷ್ಮಣ
ರೆಳೆ ಮೊಗವ ಕಾಣುತ್ತಲುಬ್ಬುತ
ಲಿಳೆಯ ಭಾರವ ಕಳೆವ ಹರಿಯಿವನೆಂದು ಹೊಗಳಿದರು ॥೧೫॥

ಕರೆದು ಗುಹನಂ ಮರುಗ ಬೇಡೈ
ಪುರಕೆ ಮರಳಿನ್ನೇನು ಹಳುವದಿ
ತೆರಳುವೆವು ಪಿತನಾಜ್ಞೆಯೆಮಗಿರೆ ಧರ್ಮಮಾರ್ಗದಲಿ |
ಪರಮ ಸದ್ಗುಣಿ ತೆರಳು ಪುನರಪಿ
ಬರುವ ಮಾರ್ಗದಿ ನಿನ್ನ ನೋಡುವೆ
ಪೊರಮಡೆನಲು ಹಸಾದವೆನ್ನುತ ಪುರವ ಸಾರಿದನು ||೧೬||

ಪಥಿಕರನು ನುಡಿಸುತ್ತ ಪಾಂಥರ
ತುತಿಗೆ ತಲೆವಾಗುತ್ತ ಚರಣಾ
ನತರ ಕೃಪೆಯಲಿ ಮನ್ನಿಸುತ ನಗೆಮೊಗದಿ ಬೀಳ್ಕೊಳುತ |
ಪಥವ ಗವಿ ಗುಹೆ ಗಹ್ವರಂಗಳ
ಶ್ರುತಿ ಶಿರೋಮಣಿ ಪುಣ್ಯವೆನಿಸಿದ
ಪತಿತಪಾವನ ಪಾದವೂರುತ ನಡೆಯುತಲ್ಲಲ್ಲಿ ||೧೭||

ಅಡವಿಯಲಿ ನಡೆನಡೆದು ಮುಳ್ಗಳ
ಲಡಿಯಿಡುತ ಸೋರುತಿರೆ ನೆತ್ತರು
ಮಡದಿ ನೊಂದಿಹಳೆಂದು ಮರದಡಿಗಳಲಿ ವಿಶ್ರಮಿಸಿ |
ಒಡಲಿನಾಯಾಸಗಳ ಗಣಿಸದೆ
ನುಡಿದು ಹಾಸ್ಯೋಕ್ತಿಗಳ ಸುಲಭದಿ
ನಡೆವ ಮೂವರ ಕಂಡು ಪಾಂಥರು ಹಿಗ್ಗುವರು ನಲಿದು ||೧೮||

ಬಂದ ನಾರಾಯಣನು ಭಕ್ತರ
ಬಂಧು ಸಿರಿಯೊಡನೆಮಗೊಲಿದು ನಲ
ವಿಂದ ಚೀರ ಜಟಾಮುಕುಟಗಳ ಧರಿಸಿ ನಡೆ ನಡೆದು |
ಬಂದ ಭೃತ್ಯರ ನೆನೆದು ನಿಜರೂ
ಪಿಂದ ಹೃದಯವ ಸೂರೆಗೊಂಡಾ
ನಂದವಿತ್ತ ಮಹಾಮಹಿಮ ರಘುರಾಮ ನಿಸ್ಸೀಮ ||೧೯||

ಎಂದು ಪರಿಪರಿಯಿಂದ ಮಹದಾ
ನಂದದಿಂ ಹೊಗಳುತ್ತ ಪದಕಭಿ
ವಂದಿಸುತ ಮನದಣಿಯೆ ನೋಡುತ ಮೂವರನು ತುತಿಸೆ |
ವಂದನೆಯ ಕೈಗೊಳುತ ನಾರೀ
ವೃಂದವನು ಮನ್ನಿಸುತ ನಗುತರ
ವಿಂದನಾಭನು ಮುಗುಳುನಗೆಯಿಂದೊಲಿದ ಸರ್ವರಿಗೆ ||೨೦||

ಒರೆದನವರಿಗೆ ಲಕ್ಷ್ಮಣನು ರಘು
ವರನ ಮಹಿಮಾತಿಶಯಗಳ ಮ
ತ್ತೊರೆದ ಸೀತೆಯ ದಿವ್ಯ ಚರಿತೆಯ ಮಂದಹಾಸದಲಿ |
ಧರೆಯ ಮಾತಾಪಿತರು ವನ ಸಂ
ಚರಿಸಿ ನೋಯುವರೆಂದು ಮರುಗುತ
ಪರಮಭಕ್ತಿಯೊಳವರು ನಡೆದರು ರಾಘವನ ಹಿಂದೆ ||೨೧||

ಸುಲಭ ಮಾರ್ಗಗಳರಿದು ಕಾಡಿನ
ಸುಳಿವುಗಳ ತಿಳಿಯುತ್ತ ಸವಿನುಡಿ
ಗಳಲಿ ಕಳುಹಿದನವರ ಲಕ್ಷ್ಮಣ ರಾಮನಾಜ್ಞೆಯಲಿ |
ಅಳಲಿ ವಿಧಿಯನು ಬೈದು ಕಾಲುಗ
ಳೆಳೆದು ಸೀತಾಧವನ ನೆನೆಯುತ
ಬಳಲಿ ಹಿಂದಿರುಗಿದುದು ನಿಜನೆಲೆಗಂದು ಜನನಿಕರ ||೨೨||

ಮಾನವಾಕೃತಿಯಿಂದ ದಶರಥ
ಸೂನುವೆನಿಸಿ ವಿರಾಗಿಯಾಗಿ ನ
ವೀನ ದರ್ಶನವೀವ ಹರಿಗೀ ವಿಧಿಯ ಕಾಣೆವಲಾ |
ಮಾನಿನಿಗೆ ಮನಸೋತು ಭೂಪತಿ
ಸೂನುವನ್ನಟ್ಟಿದನೆ ದುರ್ವಿಧಿ
ಯೇನಗೆಯ್ಯದು ಜಗದೊಳೆಂದರು ಮನದ ದುಃಖದಲಿ ||೨೩||

ಕೆಲರು ಭೂಪನ ಹೊಗಳಿದರು ಜನ
ಕುಲಕೆ ಸೀತಾರಾಮ ದರ್ಶನ
ಸುಲಭದಿಂದಾಯ್ತದರ ಬಗೆಯಿಂ ಮನಕೆ ಹಿತವಾಯ್ತು ।
ಕೆಲರು ಕೈಕೆಯ ಬೈದು ಮಗನಿಗೆ
ನೆಲನ ಬೇಡುವ ನೆವದಿ ದೇವರ
ಬಳಲಿಸುವರೇ ಕೆಟ್ಟಿತೆಂದುದು ಸಕಲ ಜನನಿಕರ ॥೨೪॥

ದನುಜೆಯೊಬ್ಬಳ ಕೊಂದು ಕಾಯ್ದನು
ಮುನಿಯ ಯಾಗವನೊರೆಸಿ ಮಾರೀ
ಚನ ಸುಬಾಹುವನಿವನಹಲ್ಯಾ ಸತಿಯನುದ್ಧರಿಸಿ ।
ಧನುವ ಭಂಗಿಸಿ ಪರಶುರಾಮನ
ಮುನಿಸ ಮುರಿಯುತ ಲೋಕವೆಚ್ಚಲು
ಜನಕಜೆಯ ಕರವಿಡಿದ ಪಾವನನೆಂದು ಹೊಗಳಿದರು ॥೨೫॥

ವನದ ಬೆಡಗನು ನೋಡಿ ನಗುತಿಹ
ಜನಕಜೆಯ ಬಳಲಿಕೆಯನರಿಯುತ
ಮನವೊಲಿದ ಕತೆಯೊರೆದು ತಡೆದಲ್ಲಲ್ಲಿ ವಿಶ್ರಮಿಸಿ ।
ವನದ ಮಿಗ ಹಕ್ಕಿಗಳ ಸೊಬಗಿನ
ದನಿಯನಾಲಿಸಿ ಮತ್ತೆ ನಡೆಯುತ
ತನುವಿನಾಯಾಸಗಳ ಗಣಿಸದೆ ಪಯಣ ಬೆಳೆಸಿದರು ॥೨೬॥

ಚರಿಸಿ ಪಯಣದ ಮೇಲೆ ಪಯಣದಿ
ಪರಮಘನ ರಾಮಾಯಣವ ಹಾಡುವ
ನಿರುಪಮಾನಂದಾತ್ಮ ವರವಾಲ್ಮೀಕಿಯಾಶ್ರಮವ ।
ಭರದೊಳೈತರೆ ಕಾವ್ಯದೇವರು
ಬರುವುದರಿಯುತ ಬಾಷ್ಪವಾರಿಯು
ಗರೆದು ಮುನಿವರನಿದಿರುಗೊಂಡನು ಪರಮ ಭಕ್ತಿಯಲಿ ॥೨೭॥

ಸತಿ ಸಹೋದರ ಸಹಿತ ಸಿರಿರಘು
ಪತಿಯೆರಗಿದೊಡೆ ಹರುಷದಲಿ ಮುನಿ
ಪತಿಯು ಮೂವರನೆತ್ತಿ ಹರಸಿದನುಪಚರಿಸಿ ನಲಿದು ।
ಕ್ಷಿತಿಯ ಮಾಯೆಗೆ ಬಾಗಿ ನಿಗಮ
ಪ್ರತತಿಕಾಣದ ಲೋಕನಾಯಕ–
ನತಿ ಮುದದಿ ನಡೆತಂದನಚ್ಚರಿಯೆಂದು ಮುನಿಯೊರೆದ ॥೨೮॥

ಒರೆವುವಲ್ಲದೆ ವೇದ ಕಾಣವು
ವರುಷ ಸಾವಿರ ತಪಕೆ ನಿಲುಕುದ
ಹರಿಯೆ ನಡೆತಂದೆಮಗೆ ಕಾಣಿಸಿಕೊಂಡೆ ನೀನೊಲಿದು ।
ಧರೆಯ ಸೃಷ್ಟಿಸಿ ಪೊರೆದು ನುಂಗುವ
ಹರಿಗೆ ರಾಜ್ಯವನಿಲ್ಲವೆಂದಳೆ
ಸರಸಿಜಾನನೆ ಹಳುವ ಕಟ್ಟೆದಳರರೆ ಹೇಳೆಂದ ॥೨೯॥

ಕೈಕೆಯರಿಯದೆ ಹೋದೊಡೆಯು ನೃಪ
ಮೂಕನಾದನೆ ಗುರುವಸಿಷ್ಠಂ
ಗೀ ಕಥಾಮೃತವರಿಯದೇ ಹರಿ ನಿನ್ನ ಮಾಯೆಗಳು
ಸಾಕು ರಾಮಾಯಣದ ಕವಿ ವಾ
ಲ್ಮೀಕಿ ಬರೆದಂತೈದಿ ಸಲಹಲು
ಲೋಕಮಂ ಬಂದಿರುವೆ ರಘುಪತಿ ಜಾಣ ನೀನೆಂದ

ಎಂದು ಪರಿಪರಿಯಿಂದ ಹೊಗಳುತ
ಲಂದು ಮೂವರ ನುಪಚರಸಿ ಮುನಿ
ಕಂದ ಫಲ ಮೂಲಗಳನಿತ್ತೊಡೆ ನಗುತ ಕೈಕೊಂಡು ।
ಮುಂದಿಯೊಡನದು ಸವಿದ ಹರಿ ನಲ
ವಿಂದ ಕೊಂಡಾಡುತಿರೆ ಮುನಿಯರ
ವಿಂದನಯನನ ರೂಪನೋಡುತ ಹಿಗ್ಗಿ ಹೊಂಗಿದನು ॥೩೧॥

ಎಲ್ಲೈ ಮುನಿಪ ಹದಿನಾಲ್ಕು ವರುಷವ
ಹಳುವದಲಿ ಕಳೆವ ವ್ರತ ಮೆನಗೆ
ನೆಲವನಾಳುವ ಭಾರ ಭರತಂಗಾಯ್ತು ಪುಣ್ಯದಲ್ಲಿ ।
ಒಲಿದು ತೋರೆನಗೊಂದು ತಾಣವ
ಕಳೆವೆನವಧಿಯನಲ್ಲಿ ಸೀತೆಗೆ
ಫಲ ಕುಸುಮವಿಹ ವನವ ತೋರೆಮಗೆಂದ ದಾಶರಥಿ ॥೩೨॥

ಅಣುವಿನೊಳಗಣುವಾಗಿ ಸೂಕ್ಷ್ಮದಿ
ಘನಕೆ ಘನತರವೆನಿಪ ನಿನ್ನಯ
ಗುಣವನರಿವವರಾರು ನೀನಿರದಿರುವ ಠಾವೆಲ್ಲಿ ।
ವಿನಯವಿದು ನಿನಗುಚಿ-ತ ದಶರಥ
ತನಯ ನಿನಗಿಸ್ನಾವ ಜಗದಲಿ
ಮನೆಯಮಾಡಲಿ ಸ್ಥಳವತೋರಲಿ ತಂದೆ ಹೇಳೆಂದ ॥೩೩॥

ಜಗಕೆ ನಾಟಕವೊಂದು ತೋರಲು
ವಿಗಡವೇಷದಿ ಬಂದೆ ಹರಿ ನಿ
ನ್ನಗಣಿತಾಮಲ ರೂಪವಿನ್ನೆನಿತಿಹುದೊ ತಿಳಿಯೆನಲಾ ।
ಸೊಗಸು ನಿನ್ನೀ ಚರಿತೆ ರಘುಕುಲ
ಗಗನ ಮಣಿ ನಡೆ ಭಕ್ತ ಹೃದಯದಿ
ಮನವರಿತು ನೀ ನೆಲಸು ಸೀತಾಲಕ್ಷ್ಮಣರು ಸಹಿತ ॥೩೪॥

ಗುರು ಸುರದ್ವಿಜ ಸಾಧು ಸಂಪ
ನ್ನರಿಗೆ ವಂದಿಸಿ ನಿನ್ನ ಪದರಜ
ಧರಿಸಿ ತೀರ್ಥವ ಸವಿದು ನಿರ್ಮಲ ಕತೆಯ ಕೇಳುತ್ತ ।
ಹರಿಯೆ ಪರತರವೆಂದು ಜಾನಿಪ
ನರನ ಹೃದಯವೆ ಕುಶಲಮಂದಿರ
ತರಣಿಕುಲ ಸಂಜಾತ ನೀ ನೆಲಸಲ್ಲಿ ಹೋಗೆಂದ ॥೩೫॥

ಮಾಡಿ ತರ್ಪಣ ಯಜ್ಞ ಹೋಮವ
ನೀಡಿ ವೃಷ್ಟ್ಯಾನ್ನವನು ದಾನವ
ರೂಢಿಯಿಂ ಸದ್ಧರ್ಮದಿಂ ನಿಜವಿಧಿಯನನುಸರಿಸಿ ।
ಮಾಡಿ ಗುರುಪದ ಪೂಜೆ ಮಿಗೆ ಕೊಂ
ಡಾಡಿ ರಘುಪತಿನಾಮ ಮಹಿಮೆಯ
ಹಾಡಿ ನಲಿಯುವ ಸಾಧು ಹೃದಯದಿ ನೆಲಸು ಶಾಂತಿಯಲಿ ॥೩೬॥

ಜನನಿ ಪರನಧುವೆಂದು ಸರ್ವರ
ನನುಜರಗ್ರಜರೆಂದು ಭಾವಿಸಿ
ವಿನಯದಲಿ ನಮಿಸುತ್ತ ಹಿರಿಯರ ಗುರುಮುನೀಜನರ ।
ವಿನುತ ತವಪದ ಭಜನೆ ವಂದನೆ
ವನಜಪದ ದರ್ಶನದಿ ಹೊಂಗುವ
ಅನುಪಮನ ಹೃದಯದಲಿ ರಘುವರ ನೆಲಸು ಹೋಗೆಂದ ॥೩೭॥

ನಿನ್ನ ಮಹಿಮೆಗಳರಿತು ಸಂತತ
ನಿನ್ನ ಭಕ್ತಿಯ ಬಲ್ಲ ವರ ಸಂ
ಪನ್ನ ಮತಿ ಹೃದಯದಲಿ ನೀ ಮನೆಮಾಡು ದಾಶರಥಿ ।
ನಿನ್ನ ನಾಮವನಂತವಾಗಿರ
ಲೆನ್ನ ಮತಿ ನಿಲುಕುವುದೆ ನೀ ಬಂ
ದೆನ್ನ ಜನ್ಮವ ಸಫಲಗೊಳಿಸಿದೆ ಕಾರುಣಿಕನೆಂದ ॥೩೮॥

ಎಂದೊರೆದ ಮುನಿವರನ ಮಾತುಗ
ಳಂದಮಂ ನೆನೆಯುತ್ತ ಸಂತಸ
ದಿಂದ ಮೆಚ್ಚಿದ ಮುನಿಯ ಭಕ್ತಿಯ ಬಲೆಗೆ ತಾ ಸಿಲುಕಿ ।
ತಂದೆ ರಘುಪತಿ ಮನುಜ ವೇಷದಿ
ಬಂದೆ ಭಕ್ತರ ಸಲಹೆ ನಿನಗಾ
ನೊಂದು ಪಾವನ ನೆಲೆಯ ತೋರುವೆನೆಂದ ವಾಲ್ಮೀಕಿ ॥೩೯॥

ಚಿತ್ರಕೂಟಾಚಲವು ನೆಲದೆ ಪಿ
ಚಿತ್ರಮಾಗಿರುತಿಹುದು ನಿನಗ
ನ್ಯತ್ರ ದೊರಕದು ಸೌಖ್ಯ ನಿನಗನುಕೂಲಮಾಗಿಹುದು ।
ಕ್ಷತ್ರಿಯರಿಗಾ ಶೈಲ ಪರಮ ಪ
ವಿತ್ರ ಕೇಸರಿ ಕಲಭ ಖಗ ಮೃಗ
ನೇತ್ರ ಸುಂದರವಾಗಿ ವಿಹರಿಪವಲ್ಲಿ ನಡೆಯೆಂದ ॥೪೦॥

ಅತ್ರಿ ಸತಿಯನಸೂಯೆ ತಪದಿ ಪ
ವಿತ್ರ ಸುರನದಿ ಶಾಖೆ ಭವ ತಾ
ಪತ್ರಯವ ಪರಿಹರಿಪ ವರ ಮಂದಾಕಿನೀ ನದಿಯು ।
ಚಿತ್ರಕೂಟಕೆ ತರಿಸಿದಳು ನಿನ
ಗುತ್ತಮದ ನೆಲೆಯಲ್ಲಿ ತಾಪಸ
ರತ್ರಿ ಮೊದಲಾದಮಲ ಮುನಿವರರಿಹರು ಹೋಗೆಂದ ॥೪೧॥

ಆ ಗಿರಿಯ ಮಹಿಮಾತಿಶಯಗಳ
ನಾಗ ವಾಲ್ಮೀಕಿಮುನಿ ವಿವರಿಸೆ
ನಾಗಶಯನನು ಕೇಳಿ ಸೀತಾಲಕ್ಷ್ಮಣರ್ವೆರಸಿ ।
ಬಾಗಿ ಮುನಿಪದಕೆರಗಿ ನಡೆದು ವಿ
ರಾಗಿ ಪಯಣದಿ ಚಿತ್ರಕೂಟಕೆ
ಸಾಗಿ ಮಂದಾಕಿನಿಯ ವಂದಿಸಿ ಮಂದರವರಲ್ಲಿ ॥೪೨॥

ಒಲಿದು ಸುರಮುನಿ ರಕ್ಷಣೆಗೆ ಹರಿ
ಹಳುವಕೈದೊಡೆ ಚಿತ್ರಕೂಟಾ
ಚಲಕೆ ಕೋಲಕಿರಾತ ವೇಷವಧರಿಸಿ ಸುರನಿಕರ ।
ನಲಿದು ಬಂದರು ರಾಮಸೇವೆಗೆ
ಎಲೆವನೆಯ ಕಟ್ಟಿದರು ಸವಿಫ
ಲ್ಗಳನು ತಂದೊಟ್ಟಿದರು ಹಾಡುತ ರಾಮನಾಮವನು ॥೪೩॥

ಸುರರು ಖಚರರು ಸಿದ್ಧ ವಿದ್ಯಾ
ಧರರು ಕಿನ್ನರ ಯಕ್ಷ ನಾಗರು
ನೆರೆದರಾಗಲೆ ಚಿತ್ರಕೂಟದಿ ರಾಮದರ್ಶನಕೆ ।
ಭರದಿ ರಘುಪತಿ ಸರ್ವರಿಗೆ ಕರ
ವೆರಡ ಜೋಡಿಸಿ ವಂದಿಸಲು ಸುರ
ವರರು ನೇತ್ರಾನಂದ ಪೊಂದಿದರಾಗ ನೋಡುತಲಿ ||೪೪||

ಮುನಿನಿಕರ ಸಂದಣಿಸೆ ರಾಘವ
ನನುಪಮಿತ ಮಹಿಮಾವಲಂಬನ
ವೆನಿತೆನುತ ಕೈವಾರಿಸುತಲಿರೆ ನೋಡಿ ಋಷಿವರರ ।
ಜನಕಜಾ ಸೌಮಿತ್ರಿ ಸಹಿತಾ
ಇನಕುಲೋತ್ತಮ ನಮಿಸಿ ಮನ್ನಿಸಿ
ವಿನಯದಿಂ ಸುಕ್ಷೇಮ ಕುಶಲವ ಕೇಳ್ದ ನಲವಿಂದ ||೪೫||

ಮುನಿಗಳಾಲಿಂಗಿಸಲು ರಾಮನು
ಮನದ ಬಯಕೆಯ ಸಲಿಸಿ ಹರಕೆಯ
ವಿನಯದಲಿ ಕೈಕೊಂಡು ಕಳುಹಿದನಾಶ್ರಮಂಗಳಿಗೆ ।
ಕೊನೆಗೆ ಕೋಲ ಕಿರಾತ ವೃಂದದ
ಗುಣಕೆ ಹರ್ಷಿಸಿ ಮನ್ನಿಸಿದನಾ
ವನಜ ಮುಖ ಕಾರುಣ್ಯದಲಿ ಪತಿಕರಿಸಿ ಭಕ್ತರನು ||೪೬||

ಕ್ಷೀರ ವಾರಿಧಿಯನ್ನು ತೊರೆದು ವಿ
ಹಾರ ಸುಂದರ ಪುರವ ನುಳಿಯುತ
ವೀರ ಬಂದನು ಪಿತೃವಚನ ಪರಿಪಾಲನಾರ್ಥದಲಿ ।
ಸೇರಿದನು ಹರಿ ಚಿತ್ರಕೂಟ ವಿ
ಹಾರಿ ಸತಿ ಸೌಮಿತ್ರಿ ವೆರಸುತ
ಭೂರಿ ವಿಭವವ ತೊರೆದು ಬಂದನು ಮಾನಿಸರ ತೆರದಿ ||೪೭||

ಹೇಳಲಸದಳ ಲಕ್ಷ್ಮಣನ ಸ
ಮ್ಮೇಳ ಜೇಷ್ಠನ ಭಕ್ತಿಯನುಪಮ
ಲೀಲೆಯಿಂ ಸೇವಿಸುವ ಸೀತೆಯ ಪಾವನಾಂಘ್ರಿಗಳ ।
ಆಲಯವ ಪಿತೃಮಾತೃ ಬಾಂಧವ
ರಾಳಿಯಂ ತಾ ನೆನೆಯ ರಾಮನ
ಪಾಲನೆಯ ರಕ್ಷೆಯಲಿ ಬಂದಿರೆ ಚಿಂತೆಯೇತರದು ॥೪೮॥

ಪತಿಯ ಸಹವಾಸದಲಿ ಮರೆತಳು
ಕ್ಷಿತಿಜೆ ಲೋಕದ ಸುಖದ ಕಲ್ಪನೆ
ಪತಿಯ ವಿಧುಮುಖ ದರ್ಶನವೆ ಹಿತವಾಯ್ತು ಘನವೆನಿಸಿ ।
ಹಿತವ ಬಿಸುಟಳು ಮುದದಿ ವರಮುನಿ
ಸತಿಯರಾಳೋಚನೆಗೆ ಭೂವಧು
ಸುತೆಗೆ ಕಾಡೇ ಸಗ್ಗವೆನಿಸಿತು ಭರ್ತ್ರರಿರವಿನಲಿ ॥೪೯॥

ಕ್ಷಿತಿಜೆ ಲಕ್ಷ್ಮಣರೊಲಿದು ಕೇಳುವ
ಕಥೆಗಳೊರೆಯುತ ಹರುಷದಲಿ ರಘು
ಪತಿಯು ತಾನಿರ್ವರನು ಕಾಯ್ವಕ್ಷೇಮದಲಿ ನಿಚ್ಚ ।
ಪಿತನಿರವ ನೆನೆಯುತ್ತ ಮರುಗಲು
ಹಿತದಿ ಲಕ್ಷ್ಮಣನಣ್ಣದೇವನ
ಮತಿಗೆ ತಂಪೆರೆಯುತಲಿ ಸೇವಿಪ ಭಕ್ತಿಭಾವದಲಿ ॥೫೦॥

## ವಿಶ್ರಾಮ ೯

ಸೂ॥ ಹಲವು ಪರಿಯಲಿ ನೊಂದು ದಶರಥ
ಬಳಲಿ ವಿರಹಾನಲದಿ ಬೇಯುತ
ಲಿಳೆಯ ತೊರೆದನು ರಾಮಚಂದ್ರಧ್ಯಾನ ಪರವಶದಿ ॥

ರಾಮ ವಿರಹದಿ ನೊಂದು ನೀತಿ ವಿ
ರಾಮವಾದುದು ಗುಹ-ಸುಮಂತ್ರರು
ನಾಮ ಜಪಿಸುತ ರಾಮ ತನ್ಮಯರಾಗಿ ಪಯಣದಲಿ ।
ಭೂಮಿಜಾಪತಿ ಕಳುಹೆ ಬಂದರು
ಭಾಮಿನೀ ಸೌಮಿತ್ರಿಯರ ವರ
ನಾಮಗಳ ನೆನೆಯುತ್ತ ಪಯಣದಿ ಸುರನದಿಯ ದಾಟಿ ॥೧॥

ಜೀವವಿಲ್ಲದ ದೇಹದೊಲು ತಮ
ಗಾವ ನೆಲೆಯೆಂದರಿಯದಾದರು
ತೀವಿರುವ ದುಃಖದಲಿ ಮನನೊಂದು ವ್ಯಾಕುಲರಾಗಿ ।
ಸಾವೆನಿನ್ನೇವೆನೆನುತಳಲುತ
ಲಾ ವಿಭುವ ನೆನೆಯುತ್ತ ದುಃ
ಖಾವನತ ಮುಖನಾಗಿ ನೊಂದ ಸುಮಂತ್ರ ಗುಹನೊಡನೆ ॥೨॥

ಆ ನಿಶಾಧರನಾಥ ಧೈರ್ಯಧೊ
ಳಾ ನರೋತ್ತಮನನ್ನು ನೋಡುತಿ
ದೇನು ಲೋಕಾಯತರ ಪರಿಯಲಿ ದುಃಖವೇಕಕಟ ।
ನೀನು ಪರಮಾರ್ಥಗಳನರಿತವ
ಕೇಣವಂ ಬಿಡು ಘಾಲಲಖಿತಗ
ಳೀ ನವೀನದ ಕಷ್ಟವಿತ್ತುದು ಧೈರ್ಯಗೊಳ್ಳೆಂದ ॥೩॥

ತೇರನೆಳೆಯದೆ ರಥದವಾಜಿಗ
ಳಾ ರಘೋತ್ತಮ ಪಥವ ನಿರುಕಿಸು
ತೋರಣೆಯು ಪ್ರಭುವಿಲ್ಲದಿಹ ರಥವೇಕೆ ತಮಗೆನುತ ।
ವಾರುವಂಗಳ ಶೋಕವರಿತು ರ
ಮಾರಮಣ ಪದ ಜ್ಞಾನದಲಿ ವರ
ಧಾರುಣೀಶನ ನೆನೆದು ನಡೆಸಿದ ರಥವ ಸನ್ಮಂತ್ರಿ ॥೪॥

ಹರಣಗಳೆದ ಶರೀರದೊಲು
ಸಿರಿಯು ನೀಗಿದ ಲೋಭಿಯೊಲು ರಣ
ಧುರದಿ ಹಗೆಯೊಳು ಸೋಲುತೋಡಿದ ವೀರನೊಲು ಮಂತ್ರಿ ।
ಹರಿಯ ಸಾನ್ನಿಧ್ಯವನು ತೊರೆಯುತ
ಬರಿಯ ರಥವನು ತಂದು ನಿಲಿಸಿದ
ಪುರದಿ ವಿಪ್ರ ದ್ರೋಹಿಯೊಲು ಮನದೊಳಗೆ ಬಲು ನೊಂದು

ಏನ ನೊರೆಯಲಿ ನೃಪಗೆ ಕೋಸಲೆ
ಗೇನನೊರೆವೆ ಸುಮಿತ್ರೆ ಕೇಳ
ಲ್ಕೇನನೊರೆಯಲಿ ಹರಹರಾ ಸಂಸಾರವಿದು ಕಷ್ಟ ।
ಮಾನವಿಲ್ಲದೆ ನೋಯದಾ ಖಳ
ಕಾನನದಿ ಕೊಂಡೊಯ್ದು ಬಿಸುಡುತ
ಲಾನು ಮರಳಿದೆನೆಂದು ಪೇಳ್ವೆನೆ ಭಾಪುವಿಧಿಯೆಂದ ॥೬॥

ಮುಂದುಗೆಟ್ಟು ಸುಮಂತ್ರ ದಶರಥ
ನಂದನರ ನೆನೆಯುತ್ತ ಪುರವನು
ಬಂದು ಹೊಕ್ಕನು ರಾಯನರಮನೆ ಕಂದಿದಾನನದಿ ।
ಬಂದು ನಾರೀ ಜನರು ಸಖಿಯರು
ಬಂಧುಗಳು ಬಳಸಿದರು ರಾಘವ
ನಿಂದುಮುಖಿ ಲಕ್ಷ್ಮಣರನೆಲ್ಲಿಹರೆಂದು ಕೇಳಿದರು ॥೭॥

ನಿಲ್ಲದಾದನು ನುಡಿಯೆ ನಾಲಗೆ
ವೊಲ್ಲದಾದುದು ಮುಳುಗಿ ಕಂಬನಿ
ಯಲ್ಲಿ ನೊಂದು ಬ್ರಹ್ಮಹತ್ಯಾ ದೋಷಿಯೊಲು ನಡುಗಿ ।
ಅಳ್ಳೆಯೊಳಗಸಿ ಹೊಗಿಸಿದಂತಾ
ಬಲ್ಲಿದನ ಕಡುದುಃಖವರಿಯುತ
ನಿಲ್ಲದೊಯ್ದರು ಧಾತ್ರಿಯರು ಕೌಸಲ್ಯೆಯರಮನೆಗೆ ॥೮॥

ಮುರಿದ ರೆಕ್ಕೆಯ ಪಕ್ಷಿಯೊಲು ನೃಪ
ವರನು ನಿಸ್ತೇಜದಲಿ ಮಲಗಿರೆ
ಕೊರಳ ಸೆರೆ ಬಿಗಿಯುತಿರೆ ಬಂದನು ಮಂತ್ರಿ ನೃಪನೆಡೆಗೆ !
ಎರಗಿ ಜಯ ಜಯ ಭೂಪ ಜಯ ವೆಂ
ದುರವಣಿಪ ದುಃಖದಲಿ ನಿಂದನು
ಚರಣ ಸೀಮೆಯಲಂದು ಭೂಪತಿಯಿರವ ನೋಡುತ್ತ ||೯||

ತಂದೆ ರಘುಪತಿಯೆಲ್ಲಿ ರವಿಕುಲ
ಕಂದ ಸೀತಾರಾಮನೆಲ್ಲಿಹ
ಸುಂದರಾಂಗ ಸುಮಿತ್ರೆ ಮಗ ಸೀತಾರಮಣಿಯೆಲ್ಲಿ ।
ಹಿಂದುಳಿದು ಕಾರ್ಗಾಡಿನಲಿ ನೀ
ಬಂದೆಯಾ ಬಾರೆಂದು ಕೂರಿಸು
ತಂದು ಸನಿಯದಿ ನೃಪತಿ ನೋಡುವನವನನಡಿಗಡಿಗೆ ||೧೦||

ಕುಶಲವೇ ರಘುಪತಿ ಸುಮಂತ್ರನೆ
ಬಿಸಜಮುಖಿ ಭೂಜಾತೆ ಲಕ್ಷ್ಮಣ
ಕುಶಲರೇ ಪೇಳಾವ ಕರ್ಕಶ ವಿಪಿನದೊಳಗಿಹರು ।
ಒಸೆದು ರಾಜ್ಯವನೀವೆನೆಂದಾ
ಶಿಸುತ ಕೊನೆಗಾನಡವಿಗಟ್ಟಿದೆ
ನೆಸಕವರಿಯದೆ-ವಿಧಿಯ ಮಾಟವನರಿಯೆ ಶಿವಯೆಂದ ||೧೧||

ಎಲೆ ಸುಮಂತ್ರನೆ ರಥವನೆಳೆತಾ
ಹಳುವ ಹೊಗುವೆವು ರಾಮಚಂದ್ರನ
ನಲುನುಡಿಯ ಕೇಳುವೆವು ವಹಿಲದಿ ನಡೆಸು ರಥವನ್ನು ।
ತಳುವದಿರು ಸುಕುಮಾರರೆಡೆಯಲಿ
ಖಳ ಶರೀರಕೆ ಪುಣ್ಯಗಾಣಿಸಿ
ನೆಲದಿ ಬಾಳುವೆನಿಲ್ಲದಿರೆ ಮರಣ ನಿಜ ತನಗೆಂದ ||೧೨||

ಹೆಣ್ಣಿಗೊಲಿಯಲು ಹೇವವುರಿಯದೆ
ಕಣ್ಣು ಕುಕ್ಕಿದಳೀಕೆ ಪುತ್ರಂ
ಗಿನ್ನು ಹೇಳುವವೆ ಶರಣು ಎನ್ನುದರದಲಿ ಬಂದುದಕೆ ।
ಸನ್ನುತನು ಮನಗುಂದಿದನೆ ಸಂ
ಪನ್ನಮತಿಯೇನೆಂದ ಲಕ್ಷ್ಮಣ
ನಣ್ಣ ನೊಂದನೆ ಪಿತನ ಹಳಿದನೆ ತಂದೆ ಹೇಳೆಂದ ||೧೩||

ತಂದು ತೋರ್ರೈ ಸಖನೆ ರಘುಕುಲ
ನಂದನನ ಸೀತಾರಮಣಿಯಂ
ಕಂದ ಲಕ್ಷ್ಮಣನೆಲ್ಲಿ ತೋರ್ರೈ ಮರಳರೇ ಪುರಕೆ ।
ಎಂದು ಮೂರ್ಛೆಗೆ ಸಂದು ತಿಳಿಯುತ
ತಂದೆ ರಾಘವನೆಲ್ಲೆನುತ ಪರಿಪರಿ
ಯಿಂದ ಬಳಲಲು ಮಂತ್ರಿವೊರೆದನು ನೀತಿ ಭೂಪತಿಗೆ ||೧೪||

ಎಲೆ ನೃಪತಿ ನೀ ಜ್ಞಾನಿ ಧೀರನು
ಛಲವ ಬಿಡು ವಿಧಿಗೆಯ್ದ ಹದನಕೆ
ಬಳಲಲೇನಹುದೆಮಗೆ ಭಕ್ತರಿಗೇಕೆ ಮೋಹವಿದು ।
ಅಳಿವುಳಿವು ಸುಖದುಃಖವೆಂಬಿವು
ಸುಳಿವುವೇ ನಮ್ಮಿಷ್ಟದೊಲು ಬಿಡು
ಬಳಲದಿರು ಮನಗುಂದಲೇತಕೆ ಧೃತಿಯ ತಾಳೆಂದ ||೧೫||

ಮಂದಮತಿಗಳು ಸುಖದಿ ಹರ್ಷಿಸಿ
ಬಂದ ದುಃಖದಿ ಕ್ಲೇಶಗೊಂಬರು
ತಂದೆ ಸಾಧುಗಳಿವ್ನನು ಸಮನೆಂದೆಣಿಸಿ ಚಿಂತಿಸರು ।
ಇಂದು ವಂಚಿಸಿ ದೈವ ದಾರುಣ
ಬಂಧನದಿ ಸಿಲ್ಕಿಸಲು ಧೈರ್ಯದೊ
ಳೆಂದು ಸಹಿಪುದು ಧರ್ಮ ಸಮ್ಮತವೆಂದನಾ ಮಂತ್ರಿ ||೧೬||

ಜನಪ ಬಿಡು ದುಃಖವನು ಲೋಕದಿ
ಜನನ ಮರಣ ವಿಷಾದ ಸುಖಗಳು
ಕೊನೆಗೆ ಭೋಗಾಭೋಗ ಲಾಭಾಲಾಭ ಮೊದಲಾದ ।
ಗುಣಗಳಿವು ಕರ್ಮವಶ ವಿಧಿಕೃತಿ
ನೆನೆದು ಮಾಡುವುದೇನು ಧರ್ಮವ
ಮನದೊಳರಿಯುತ ನೀಗು ದುಃಖವನೆಂದನಾ ಮಂತ್ರಿ ॥೧೭॥

ಬಂದ ಸಂತಸದಿಂದ ಹರ್ಷಿಸಿ
ನೊಂದು ದುಃಖದಿ ಕಷ್ಟ ಪಡುವರು
ಮಂದ ಮತಿಗಳು ಸಾಧುವಿದ ಸಮನೆಂದೆಣಿಸಿ ಚಿಂತಿಸೆನು ।
ತಂದೆ ಲೋಕವ ತಿಳಿಯುದನೆ ನೀ
ನಿಂದು ಧೈರ್ಯವ ತಳೆದು ಚರಿಸೈ
ಮುಂದೆ ಕಾಣುವೆ ಸುದಿವಸಂಗಳ ನೋಯಬೇಡೆಂದ ॥೧೮॥

ವಿದಿತಗುಣ ಸಂಪನ್ನ ರಾಮನು
ಮೊದಲನೆಯ ದಿನವಿಳಿದು ತಮಸಾ
ನದಿಯ ತೀರದೊಳೆರಡನೆಯ ದಿನ ಸುರನದಿಯ ಸೇರಿ ।
ಮುದದಿ ವಂದಿಸಿ ಮಿಂದು ಮೂವರು
ನದಿಯ ತೀರದೊಳಿದ್ದು ಜಲಪಾ
ನದಲಿ ಭೋಜನ ಮುಗಿಸಿ ಕಥೆಗಳನೊರೆದು ನಿಶಿಕಳೆದು ॥೧೯॥

ಸೇವೆಮಾಡಲ್ಕಲ್ಲಿ ಶಬರರು
ದೇವನಲ್ಲಿಯೆ ಕಳೆದ ರಾತ್ರಿಯು
ತಾ ವಿನೋದದಿ ಶೃಂಗಬೇರ ಪುರಾಖ್ಯ ನಗರದಲಿ ।
ಓವಿ ಶಾಬರನಾಥ ಗುಹ. ಸಿರಿ
ದೇವನನು ಪೂಜಿಸಿದ ಮರುದಿನ
ಕೋವಿದರು ಜಟೆಧರಿಸಿ ಮುಂದಣ ಪಯಣಕನುವಾಗೆ ॥೨೦॥

ದೇವನಾಣತಿಯಿಂದ ಗುಹಪತಿ
ನಾವೆಯಂ ತರಿಸಿದರೆ ಸೀತಾ
ದೇವಿ ಲಕ್ಷ್ಮಣರೊಡನೆ ರಘುವರ ನೌಕೆಯನ್ನೇರಿ |
ಆವರಿಸೆ ಕಡುದುಃಖ ಮನದಲಿ
ಶ್ರೀವರನು ನೋಡಿದನು ನುಡಿದನು
ಭೂವಧೂವರ ರಾಮವಚನವನೀಗ ಕೇಳೆಂದ ||೨೧||

ಸರಕು ಮಾಡದಿರಿದನು ಜನಕನೆ
ವಿರಹವೇತರದಿದು ವಿಚಾರಿಸೆ
ನಿರುತ ನಿನ್ನಾಶೀರ್ವಚನ ಕಾಪಾಡುತಿರಲೆಮ್ಮ |
ಭರತನೊಳು ನೋಡೆಮ್ಮ ನಿನ್ನಯ
ಕರುಣೆ, ಕೃಪೆ, ಘನಪುಣ್ಯ ಬಲದಿಂ
ದುರುತರದಿ ಸುಕ್ಷೇಮವೊದಗಲು ಚಿಂತೆ ನಿನಗೇಕೆ ||೨೨||

ನಿನ್ನನುಗ್ರಹದಿಂದ ಕಾನನ
ವನ್ನು ಸುಖದಿಂ ಸೇರಿ ವಚನಗ
ಳನ್ನು ಪಾಲಿಸಿ ಮರಳಿ ಬರುವೆನು ನಿನ್ನ ಸನ್ನಿಧಿಗೆ |
ನಿನ್ನ ಮೇಣ್ ಕೌಸಲ್ಯೆ ಪದಯುಗ
ಳನ್ನು ಸೇವಿಸಿ ಧನ್ಯನೆನಿಸುವೆ
ನಿನ್ನು ಬಿಡು ತವ ದುಃಖವೆಂದೊರೆದಿಹನು ಕೇಳೆಂದ ||೨೩||

ಗುರುಗಳಿಗೆ ಸಂದೇಶವೊರೆದಿಹ
ವರ ಪದದೊಳೆರಗುತ್ತ ಜನಕನು
ಪರಿ ಪರಿಯ ದುಃಖದಲಿ ನರಳುತ ನೋಯದಿರುವಂತೆ |
ಒರೆದು ಸುಜ್ಞಾನವನು ಕಾವುದು
ತರಳರಂ ಚಿಂತಿಸದ ತೆರದಲಿ
ಪರಮ ವೈರಾಗ್ಯೋಪದೇಶವ ಮಾಡುವುದು ನಿತ್ಯ ||೨೪||

ಕನಲಿ ಲಕ್ಷ್ಮಣ ನುಡಿಯೆ ರಾಘವ
ನನುಜನಂ ತಡೆಯುತ್ತ ಕೋಪವ
ನನಘ ತಾರದಿರೆಂದು ಸಂತವಿಸಿದನು ಸಾಮದಲಿ ।
ವನಜ ಮುಖಿ ಸೆರೆಬಿಗಿದು ಬರೆ ಮನ
ದನುವನೊರೆಯದೆ ಮೌನತಾಳ್ದಳು
ಜನಪ ಕೇಳೈ ಮತ್ತೆ ಕಣ್ಮರೆಯಾದರವರೆಂದೆ ॥೨೫॥

ಅನಘ ತೆರಳಲು ಮುಂದುಗೆಟ್ಟನು
ಜನಪ ರಾಮನ ಪಯಣ ಗತಿಗಳ
ಕಣುಗಳೆವೆಯಿಕ್ಕದೆಯೆ ನೋಡುತಲಿರಲು ಮರೆಯಾದ ।
ತನುವನೆಳೆತಂದಿಲ್ಲ ಸೇರ್ದನು
ತನಯನಭಿಮತವೊರೆದೆ ನಿನ್ನಯ
ಮನದ ದುಃಖವ ತಡೆದು ನೋಯದಿರೆಂದನಾ ಮಂತ್ರಿ ॥೨೬॥

ಮರೆತು ಹಮ್ಮೈಸಿದನು ಭೂಪತಿ
ಹರಹರಾ ತ್ರೈಲೋಕ್ಯನಾಥನ
ಪರಿಯನರಿಯದೆ ನೂಕಿ ಘಾತಕಿಯಾದೆ ಲೋಕದಲಿ ।
ಸಿರಿಯ ಹೊಗಿಸಿದೆ ವನವನಿನ್ನೇ
ನರಿದು ಪಾಪಿಗೆ ಮಂತ್ರಿ ಖಡ್ಗದೊ
ಳರೆದು ನಾಲಗೆ ಸೀಳು ಬಾಯೆಂದೊರಗಿದನು ಭೂಪ ॥೨೭॥

ನೆನೆದು ರಾಮನ ಸದ್ಗುಣಂಗಳ
ನೆನೆದವನ ಚಿದ್ರೂಪ-ಭಾವವ
ವನಿತೆಯರು ವಿಲಪಿಸುತ ಭೂಪನ ಪರಿಯ ನೋಡುತಲಿ ।
ತನಯಗೋಸುಗ ದೈವ ಹೀನಳು
ಜನಪತಿಯ ಕೊಲ್ಲುವಳೆ ಹರಹರ
ಮನನೆನಿತು ಕರ್ಕಶವೊ ಛೀಯೆಂದುದು ಸಖೀ ನಿವಹ ॥೨೮॥

ಅರಿತು ಋಷಿಶಾಪವನು ಜನಪತಿ
ಮರಣ ತಪ್ಪದೆನುತ್ತ ಕೋಸಲೆ
ಗೊರೆದು ತಾಂಡವ ಮುನಿಯ ಕೊನೆಗಾಲದಲಿ ತನಗಾದ ।
ಹಿರಿಯ ಶಾಪದ ಕತೆಯ ರಾಮನ
ವಿರಹದಲಿ ಬಳಲುತ್ತಲಳಲುತ
ಸರಸಿಜಾಕ್ಷನ ನೆನೆದು ಮೂರ್ಛೆಗೆ ಸಂದ ದಶರಥನು ॥೨೯॥

ನಿನ್ನ ನಂಬಿದ ಪ್ರಜೆಗಳನು ನೀ
ಮನ್ನಿಸದೆ ಸುತ ವಿರಹ ಜಲಧಿಯೊ
ಳಿನ್ನು ಮುಳುಗಿಸಲೇಕೆ ಜನಪತಿ ಧೈರ್ಯವುಂ ತಾಳ್ದು ।
ಕಣ್ದೆರೆದು ನೋಡೆಮ್ಮ ಕಾಪಿಡು
ನಿನ್ನ ಧರ್ಮದ ಸುಕೃತ ರಾಘವ .
ನನ್ನು ತೋರದೆ ಮುಂದೆ ನೋಯ್ದರೆಂದಳಾ ಕುಶಲೆ ॥೩೦॥

ವಿರಹ ವೇದನೆಯಿಮ್ಮಡಿಸೆ ನೃಪ
ಪರಮ ದುಃಖದಿ ಕಳೆದ ರಾತ್ರಿಯ
ಸಿರಿ ರಘೂತ್ತಮನನ್ನು ನೆನೆಯುತ ಬಳಲಿ ಬೆಂಡಾಗಿ ।
ತೊರೆದು ರಾಮನ ಬದುಕ ಬಹುದೇ
ಧರೆಯ ಬಾಳಿನ್ನೇಕೆ ಮಂತ್ರಿಯೆ
ಹರಿಯ ಕರೆತಾ ತೋರು ಸೀತೆಯನೆಂದು ಮರುಗಿದನು ॥೩೧॥

ರಾಮನಿದೊ ರಘುರಾಮ ಕೋಸಲ
ರಾಮ ಜಾನಕಿರಾಮನೆನುತಾ
ಭೂಮಿಪತಿ ಕಣ್ಮುಚ್ಚಿ ನೀಗಿದ ತನುವ ವಿರಹದಲಿ ।
ಭೂಮಿಯುಂ ತೊರೆಯುತ್ತ ದಶರಥ
ರಾಮಚಂದ್ರನ ನೆನೆಯುತಾತ್ಮ
ರಾಮನಲಿ ತಲ್ಲೀನನಾದನು ರಘುಕುಲೋತ್ತಮನು ॥೩೨॥

# ವಿಶ್ರಾಮ ೧೦

ಸೊ॥ ಮರಳಿ ಪುರವರಕೈದಿ ಜನಕನ
ಮರಣ ಸಂಸ್ಕಾರಗಳ ವಿರಚಿಸಿ
ಪುರಕೆ ರಾಮನ ಕರೆತರಲು ನಿಶ್ಚಯಿಸಿದನು ಭರತ ॥

ರಾಮಚಂದ್ರ ಧ್ಯಾನದಲಿ ಸುರ
ಧಾಮಕೈದಲು ನೃಪತಿ ನೋಡುತ
ಕಾಮಿನೀ ನಿಕುರುಂಬ ರೋದಿಸೆ ಮುಳುಗಿ ಶೋಕದಲಿ ।
ಆ ಮಹಾನಗರದಲಿ ಪಸರಿಸಿ
ಭೂಮಿಪತಿ ವಿರಹಾಗ್ನಿ ದಹಿಸಿತು
ಭೂಮಿಯಿಂ ನರನಾರಿಯರ ಹೃದಯಂಬುಜಾಕರವ ॥೧॥

ಮುನಿದಳೀ ರಾಮಂಗೆ ಲೋಭದಿ
ಜನಪತಿಯು ನೀಗಿದಳೀ ವಿಧವಾ
ನನವ ತಾಳ್ದಳೆ ಜಗವ ಕೆಡಹಿದಳಂಧ ಕೂಪದಲಿ ।
ವನಿತೆಯೋ ಹೆಮ್ಮಾರಿಯೋ ವರ
ವನಿತೆಯಿವಳೀ–ಕೈಕೆಗೊಲಿಯುತ
ತನುವನೀಗಿದನರಸನೆಂದುದು ಸಖಿಜನವ್ರಾತ ॥೨॥

ಕುಲವ ಕೇಳುವರಿಲ್ಲ ದಶರಥ
ನಳಿದನಕಟಾ ತೋರಿ ಬೆಳಕ
ನ್ನಿಳೆಯಿ ಸಂತವಿಸಲ್ಕೆ ತಲೆದೋರಿದನು ರವಿ ತೊಳಗಿ ।
ಹಲವು ಪರಿಯಿಂ ನೀತಿವೊರೆಯುತ
ಲಲನೆಯರ ಪರಿಜನರ ಭೃತ್ಯಾ
ವಳಿಯ ಸಂತೈಸಿದನು ವಹಿಲದಿ ಗುರುವಸಿಷ್ಠ ಮುನಿ ॥೩॥

ಇರಿಸಿ ತೈಲದ್ರೋಣಿಯೊಳು ನೃಪ
ವರನ ದೇಹವ ಗುರುವಸಿಷ್ಠನು
ಹರಿಯ ಬಿಟ್ಟನು ಚರರ, ಭರತನ ಪುರಕೆ ಕರೆತರಲು |
ಪರಮ ವೇಗದಿ ನಡೆದು ಕೇಕೆಯ
ಪುರವ ಸಾರ್ದರು ರಾಮ ದಶರಥ
ವಿರಹದುಃಖವ ಭರತ ಸಹಿಸುವನೆಂತೆನುತ ನೆನೆದು ||೪||

ಅತ್ತ ರಘುಪುಂಗವನು ತೊಲಗಲು
ಮೃತ್ಯುಮುಖನಾಗಲ್ಕೆ ದಶರಥ
ನಿತ್ತ ಭರತಂಗಂದಿನಿಂ ಮನಗಂದಿದುದು ಬಳಲಿ |
ಎತ್ತಣದು ದುಶ್ಶಕುನ ನಮ್ಮಾ
ಪತ್ತನಕೆ ಸುಕ್ಷೇಮವಾಗಲಿ
ನಿತ್ಯರಾಗಿರಲೆಮ್ಮ ಜನಕಾದಿಗಳು ಹಾಯೆಂದ ||೫||

ಮೃಷ್ಟ ಭೋಜನದಿಂದ ವಿಪ್ರರ
ತುಷ್ಟಿ ಬಡಿಸಿದ ಭೂರಿದಕ್ಷಿಣೆ
ಇಷ್ಟ ದಾನಗಳಿತ್ತು ನಾನಾ ವ್ರತವ ಮಾಡಿದನು |
ಇಷ್ಟ ದೈವವ ಪೂಜೆಗೈದು ವ
ಸಿಷ್ಟ ಗುರುಪದ ನೆನೆದು ಹರಿಯನು
ನಿಷ್ಠೆಯಿಂ ಸ್ಮರಿಸುತಲಿ ಸರ್ವರ ಸುಖವ ಬಯಸಿದನು ||೬||

ಇಂತು ನಾನಾ ಚಿಂತೆಯಲಿ ವಿ
ಶ್ರಾಂತಿಯಿಲ್ಲದೆ ತಂದೆ ತಾಯ್ಗಳ
ನಂತ ಗುಣಗಳ ನೆನೆದು ರಾಮನ ಚಿಂತಿಸುತ ಮನದಿ |
ಶಾಂತಿಗಾಣದೆ ಮರಳಿ ಪುರವ
ನ್ನೆಂತು ನೋಡುವೆನಕಟ ದುಃಖವ
ನಂತಮಾಗಿರಲೆನಗೆ ಸಹಿಸುವೆದೆಂತು ತಾನೆಂದ ||೭||

ಹೆದರಿದನು ಹೃದಯದಲಿ ವಿಷದುರಿ
ಕೆದರಿದುದು ಹಾ ದುಃಖದಿಂದೊರ
ಗಿದನೆ ಜನಪತಿ–ರಾಮಲಕ್ಷ್ಮಣರೇನು ಪಾವನರೋ ।
ಒದಗಿದರು ಪಿತನಂತ್ಯ ಕಾಲಕೆ
ಮದಮುಖನು ನಾನೈದ ಬಘುದೇ
ಸದಯ ಹೃದಯನ ತೋರದೆ ಹಾಯೊಂದೊರಗಿದನು ನೆಲದಿ ॥೧೬॥

ಸ್ಮೃತಿ ತಿಳಿದು ದೃಗುಜಲವ ಬಿದುರುತ
ಪಿತನು ಯಮುನಾಲಯವ ಸಾರ್ದನೆ
ಸುತರ ತೊರೆದನೆ ರಾಮಲಕ್ಷ್ಮಣರಿದ್ದು ನೋಡಿದರೆ ? ।
ಪಿತಗೆ ಸಾವೇಕಾಯ್ತು ರಾಮಗೆ
ಸುತರನೊಪ್ಪಿಸಿ ಕೊಟ್ಟನೇ ನಿನ
ಗತಿ ವಿಷಾದವನಿತ್ತನೇ ಹಾಯೆಂದು ಹೊರಳಿದನು ॥೧೭॥

ಮಗನೆ ಬಿಡು ದುಃಖವನು ದಶರಥ
ನಗಣಿತಾಮಲ ರಾಜ್ಯವೆಲ್ಲವ
ಸುಗಣೆ ನಿನಗಿತ್ತಿಹನು ನೃಪನೆನಗಿತ್ತ ವರಗಳಲಿ ।
ರಘುವರಗೆ ಹದಿನಾಲ್ಕು ವತ್ಸರ
ಹೊಗಲು ವನವಾಸವನು ನೇಮಿಸೆ
ಸುಗುಣಿ ಸೀತಾಲಕ್ಷ್ಮಣರ್ವೆರಸುತ್ತ ವನಕೆಯ್ದ ॥೧೮॥

ಆ ನುಡಿಗಳಂ ಕೇಳಿ ದುಃಖದೊ
ಳಾನೆ ಸಿಂಹಧ್ವನಿಗೆ ಬೆದರುವೊ
ಲಾ ನೃಪಾಲಕುಮಾರ ಭಯದಲಿ ನೆಲದೊಳೊರಗಿದನು ।
ಮಾನನಿಧಿ ತಿಳಿದೆದ್ದು ನರಪತಿ
ಗೇನ ತಪ್ಪೆಣಿಸಿದನು ರಾಘವ
ನಾ ನೃಪೋತ್ತಮನೇಕೆ ವಿಧಿಸಿದ ಕಠಿನ ಶಿಕ್ಷೆಯನು ॥೧೯॥

ಹಿಂದೆ ದೇವಾಸುರರ ಯುದ್ಧದಿ
ಸಂದೆರಡು ವರಗಳನು ಯಾಚಿಸಿ
ಕಂದ, ರಾಜ್ಯವ ಪಡೆದು ರಾಮನ ವನಕೆ ಕಳುಹಿದೆನು ।
ಎಂದು ಮನದುಮ್ಮಳವ ಬಗೆ ಬಗೆ
ಯಿಂದ ಪರಿಹರಿಸಲ್ಕೆ ನುಡಿಯಲು
ಬೆಂದ ಗಾಯಕೆ ಲವಣವೆರೆದೊಲು ನೊಂದ ದುಃಖದಲಿ ॥೨೦॥

ಎಲೆ ಜನನಿ ಮೋಹದಲಿ ರಾಜ್ಯವ
ನೊಲಿದು ಸಂಪಾದಿಸಿದೆ ರಾಮಗೆ
ಹಳುವ ವಾಸವನಾವ ಸುಖಮಂ ಬಯಸಿ ನಿಯಮಿಸಿದೆ ? ।
ಇಳೆಯನೊಲಿವವನಲ್ಲ ತಂದೆಯ
ಕೊಲೆಗೆ ಕಾರಣನಾದೆ ರಾಮನು
ಕುಲಕೆ ಹಿರಿಯನು ಪರಮ ಪುರುಷೋತ್ತಮನ ಹಗೆಯಾದೆ ॥೨೧॥

ಮರಗಡಿದು ಕೊಂಬೆಗಳ ಬಯಸಿದೆ
ಕೆರೆಯ ನೀರನು ಮೊಗೆದು ಕಾಲುವೆ
ತೆರೆದು ಮೀನ್ಗಳ ಕಾವ ತೆರನಾಯ್ತಿದು ವಿಚಿತ್ರವಲಾ ।
ತರಳನಲಿ ದುರ್ಮೋಹ ಬಳೆಯಿಸಿ
ಹಿರಿಯ ಸೌಮಂಗಲ್ಯ ನೀಗಿದೆ
ಪರಮ ಪುರುಷೋತ್ತಮನ ನೂಕಿದೆ ಘನವನರಿಯದೆಯೆ ॥೨೨॥

ಎನಗೆ ಕಂಟಕನೆಂದು ರಾಮನ
ವನಕೆ ಕಳುಹಿದೆಯಲ್ತೆ ಭರತನ
ಮನವನಿನಿತಿನಿತೆಂದು ಪರಿಕಿಸೆದಾದೆ ಮೊದಲಾಗಿ ।
ಜನಪನಳಿದನು, ರಾಮ ಲಕ್ಷ್ಮಣ
ಜನಕಜಾ ಸಹಿತೈದ ವಿಪಿನಕೆ
ಕೊನೆಗೆ ರಾಜ್ಯವನೊಲ್ಲೆನಾಂ ನಿನ್ನಾಸೆ ನಿಷ್ಫಳವು ॥೨೩॥

ಮಾತು ಹಿಂಚಿತು ಕರುಣೆ ಮೂಡ
ಲ್ಯಾತುರದಿ ನೊಸಲೆತ್ತಿ ಕುಮುದಾ
ರಾತಿ ವಂಶಪವಿತ್ರನಂ ತಕ್ಕವಿಸಿ ಹರಸುತ್ತ ।
ಏತಕೀ ಪರಿ ದುಃಖ ನೀ ಮನ
ಸೋತು ನುಡಿವ್ಯೆ ಮಾಯದಾಟವಿ
ದೇತರದು ಸುಖದುಃಖಗಳು—ಸಹಿಸೆಂದಳಬುಜಾಕ್ಷಿ ॥೩೨॥

ಹುಡುಕದಿರು ದೋಷಗಳ ಪರರಲಿ
ನುಡಿಯಲಿನ್ನೇಕಾತ್ಮ ನಿಂದನೆ
ತಡೆದು ರೋಷವ, ತಾಳು ಶಾಂತಿಯ, ನೀಗು ದುಃಖವನು ।
ಕೆಡಹುವನು ಸುಖದುಃಖದಲಿ ಜಗ
ದೊಡೆಯಗೇನೋ ಹರುಷಮಿದರಿಂ
ತೊಡೆದು ತಾನೇ ಕೊನೆಗೆ ಕೊಡುವನು ಶಾಂತಿ ಕರುಣದಲಿ ॥೩೩॥

ಮನದಿ ಹರ್ಷೋತ್ಸಾಹ ದುಃಖವ
ನೆಣಿಸದೆಯೆ ರಘುವೀರನಾಲಿಸಿ
ಜನಕನಾಣತಿಯಂತೆ ವಸ್ತ್ರಾ ಭರಣಗಳನುರ್ಚಿ ।
ಜನನಿ ಕೈಕಾದೇವಿ ಕೃಪೆಗೈ
ದನಘಗಿತ್ತಳು ನಾರುಮುಡಿಗಳ
ವನದಿ ಸುಖಮಿರಲೆಂದು ಮೂವರ ಹರಸಿ ಕಳುಹಿದಳು ॥೩೪॥

ಪತಿಯೊಡನೆ ಸರಸದಲಿ ಸೀತಾ
ಸತಿಯು ಪೊರಟಳು ನೆನೆದು ಮನದಲಿ
ಪತಿಯ ಸೇವೆಯನೊಂದನೇ, ಬಿಡಲಾರದಾ ಹರಿಯ ।
ಮತಿಯುತನು ಸೌಮಿತ್ರಿ ರಾಮುಂ
ಗತಿವಿದಾರುಣ ಕಷ್ಟವೊದಗಿರೆ
ಹಿತವಚನಗಳ ಲೆಕ್ಕಿಸದೆ ಪೊರವಂಟನವರೊಡನೆ ॥೩೫॥

ಕುಸುಮ ಕೋಮಲೆ ಲೋಕಪಾವನಿ
ಸೊಸೆಯನಟ್ಟದೆ ಬನಕೆ ಮಕ್ಕಳ
ಹಸುಳೆಯರ ನೂಕಿದ್ದೆನು ಘೋರಾಟವಿಗೆ ವಿಧಿವಶದಿ ।
ಅಸುಪಿಡಿದು ಬದುಕಿಹೆನು ಪರಮ ಪು
ರುಷಗೆ ಜನ್ಮವಕೊಟ್ಟು ಕಳುಹಿದೆ
ನಸುರರಾಹಾರಕ್ಕೆ ಬಲಿಯನು-ಹೆತ್ತ ಶಿಶುಗಳನು ||೩೬||

ದುರಿತರಾಶಿಯ ತವರು ತನುವಿದು
ವರ ಸುಪುತ್ರರ ತೊರೆದು ಬದುಕಿತು–
ಮರಣ ಪರಿಯಂತರವು ರಾಮನ ದರುಶನವ ಮಾಡಿ ।
ನರಪನಿನ್ನಿರ ಬಾರದೆನುತಲಿ
ಸುರಪನಗರಿಯ ಸಾರ್ದನರರೇ
ಶರಿರವೆನ್ನನು ಬಿಡದು ಕಲ್ಮನ ಬಿರಿಯದೀ ಹೃದಯ ||೩೭||

ಹಲವು ಪರಿಯಲಿ ಶೋಕಿಸುವ ಕೋ
ಸಲೆಯಡಿಗೆ ನಮಿಸುತ್ತ ತಾಯೇ
ಹಲುಬದಿರು ತಪ್ಪೆನ್ನ ಕಾರಣಕಾಯ್ತು ಶಪಿಸೆಂದ ।
ವಿಲಪಿಸುವ ಸೋದರರನಪ್ಪಿದ
ಳಳುಕಿ ದುಡುಕಿದೆ ಭರತನೊಂದನು
ತಿಳಿಯ ನೊಂದನು ತರಳ ತಪ್ಪಾಯ್ತೆಂದು ಮರುಗಿದಳು ||೩೮||

ಕರಮುಗಿದು ಛಲತೊರೆದು ಭರತನು
ಪರಮ ವಿನಯದಿ ಮಧುರ ವಚನವ
ನೊರೆದ ಮಾತೆಗೆ ಮತ್ತೆ ವಂದಿಸಿ ಶುದ್ಧಮನನಾಗಿ ।
ಅರಿದಳೇ ಎನ್ನ ಮನ ಲೋಕದ
ಸಿರಿಗೆ ವಂಚಿ-ತಳಾಗಿ ದೇವರ
ತೊರೆದು ಪಶ್ಚಾತ್ತಾಪಗೊಂಬಳು ಜನನಿ ಕೇಳೆಂದ ||೩೯||

ರಾಮನೇ ಸುತನೆಂದು ತನಗಾ
ರಾಮನೇ ಹಿತನೆಂದು ಕೈಕೆಯು
ರಾಮರಾಮೆಂದಾವಗಂ ವಿಶ್ವಾಸದಲಿ ನಡೆಯುವಳು ।
ಆ ಮುಹೂರ್ತದಲವಳ ಬುದ್ಧಿ ವಿ
ರಾಮವಾದುದು ಮಾಯಪಾಶದಿ
ಕಾಮಿಸಿದೆ ನಾನಿಲ್ಲ ಕೋಸಲರಾಜ್ಯ ಸಂಪದವ ॥೪೦॥

ಬರಲೆನಗೆ ಪಿತೃಮಾತೃ ಗುರುಹಿರಿ
ಯರ ತರಿದ ಘನಘೋರ ಶಾಪವು
ಧರಣಿಯಮರರ ಪುರವ ಗೋವ್ಗಳ ನೆಲೆಯ ಸುಟ್ಟವನ ।
ದುರಿತವೊದಗಲಿ ಬಾಲವಧಕನ
ತರುಣಿಯರ ಕೊಂದವನ ದೋಷವು
ಬರಲಿ ಭೂಪಗೆ ವಿಷವನಿಕ್ಕಿದ ದುರಿತ ಬರಲೆನಗೆ ॥೪೧॥

ಬಗೆದನಾದೊಡೆ ದೋಷ ರಾಮಗೆ
ಬಗೆದೆನಾದೊಡೆ ರಾಜ್ಯ ಸಂಪದ
ಬಗೆದೆನಾದೊಡೆ ಪಿತನಿಗಳಿವನು–ನಿಮ್ಮ ದುಃಖವನು ।
ಹೋಗುವೆನಗ್ನಿಯ ತಾಯೆ ಕಾಡಲಿ
ಜಗದೊಳಿಹ ಅಘರಾಶಿ ದಹಿಸಲಿ
ಸೊಗದಿ ವಿಧಿಸೌ ತಾಯೆ ಮನ ಬಂದಂತೆ ಶಿಕ್ಷೆಗಳ ॥೪೨॥

ಮರೆತು ಹರಿಹರ ಸೇವೆ ಕಾಣದ
ದುರುಳ ಭೂತಗಳನ್ನು ಸೇವಿಪ
ನರರ ಗತಿ ಬರಲೆನಗೆ, ವೇದವ ಧನಕೆ ಕಲಿಸಿದನ ।
ಪರರ ದೋಷವನೊರೆವ ಕೋಪಿಯ
ದುರಿತವೊದಗಲಿ ಕುಟಿಲ ತಂತ್ರದ
ಪರಧನವ–ಪರಸತಿಯ ಬಯಸಿದ ಪಾಪಿಯಘ ಬರಲಿ ॥೪೩॥

ಆವ ನರ ಸತ್ಸಂಗವೊಲ್ಲನೊ
ಆವ ಮೂರ್ಖನು ಮೋಕ್ಷ ಬಯಸನೊ
ಆವ ಮಾನವ ಮದದಿ ಹರಿಹರಪಾದಪೂಜಿಸನೊ ।
ಆವ ನರ ಸದ್ಧರ್ಮ ಹೀನನೊ
ಆವ ನರ ಸಾಧುಗಳ ಹಳಿವನೊ
ಆ ವಿನಾಶಕನಘವು ಕಾಡಲಿ ಬಯಸೆ ನಾನಿದನು ॥೪೪॥

ವೇದಬಾಹಿರ ಧುಷ್ಟ ಮಾರ್ಗ ವಿ
ನೋದಿ ವಂಚಕ ಕಳ್ಳ ಪಾದರಿ
ಶೂದ್ರಸೇವಕ ವಿಪ್ರರಘವೆನಗಾಗದಿರದಿಹುದೆ ।
ಆ ದಿವಾಕರನಾಣೆ ಮನವಚ
ನಾದಿ ಕರ್ಮಗಳಲ್ಲಿ ರಾಮುನಿ
ಗಾದ ವನವಾಸಗಳ ಕೋರಿದೆನಿಲ್ಲ ತಾನೆಂದ ॥೪೫॥

ಮನ ವಚನ ಕರ್ಮದಲಿ ಕರುಣಾ
ವನಧಿ ರಾಮನ ದಾಸನಾಂ ತಾ
ನನಘ ಹೃದಯದೊಳಿರ್ದ ಎನ್ನೀ ಭಕ್ತಿಯನ್ನರಿವ ।
ಎನಲು ಕಂಬನಿಧಾರೆ ಸುರಿದುದು
ಜನನಿಯುಂಪ್ರಿಯೊಳಿರಗಿದೊಡೆ ವರ
ವನಿತೆಯುಪ್ಪಿದಳವನ ವಿಶ್ವಾಸಗಳ ತಾಮೆಚ್ಚಿ ॥೪೬॥

ಪ್ರಾಣ ಸಖ ನೀ ರಾಮಚಂದ್ರನೆ
ಪ್ರಾಣಕುಂ ಮಿಗಿಲೆಂದು ನಿನ್ನನು
ಕಾಣುವನು ಬಿಡು ದುಃಖ ಬಂದುದ ಮಾರುವರಾರು ।
ಕ್ಷೋಣಿಯೊಳು ಹಿಮು ಬೆಂಕಿಕಾರಲಿ
ಮೇಣು ವಿಭು ವಿಷವನ್ನು ಸುರಿದರು
ಮಾನು ನೀರನು ತೊರೆದರೂ ನೀ ವಿಮುಖನೇ ಹರಿಗೆ ॥೪೭॥

ಪುತ್ರಮೋಹದಲಂಪಿನಿಂ ಎದೆ
ಗೊತ್ತಿದರೆ ಪಯವುಕ್ಕಿದುದು ಶತ
ಪತ್ರಲೋಚನೆ ತಲೆಯನಾಘ್ರಾಣಿಸುತ ತನು ಮರೆಯೆ ।
ಅತ್ತ ಭರತನ ಕೀರ್ತಿ ಬೆಳಕೆನೆ
ಹೆತ್ತುತುದಿಯಾಚಲವ ಲೋಕದ
ಕತ್ತಲೆಯ ಪರಿಹರಿಸಿ ಹೊಳೆದನು ಸೂರ್ಯ ಕಾಂತಿಯಲಿ ॥೪೮॥

ಗುರು ವಸಿಷ್ಠನು ವಾಮದೇವನು
ಕರೆಸಿ ಸಚಿವ ಮಹಾಜನಂಗಳ
ನೆರೆದು ನೀತಿಯನರುಹಿ ನಾನಾ ವಿಧದಿ ಭರತಂಗೆ ।
ಒರೆದು ಪರಮಾರಥದ ಮಾರ್ಗವ
ನೆರೆದು ಧೈರ್ಯೋತ್ಸಾಹ, ವತ್ಸನೆ
ಧರೆಯ ಧರ್ಮವ ಬಿಡದಿರೆಂದರು ಸಕಲವಿಧದಿಂದ ॥೪೯॥

ಮನದೊಳೆಚ್ಚರ ತಾಳ್ದು ಕೌಸಲೆ
ಯನುಮತಿಯ ಪಡೆಯುತ್ತ ಕುಲಗುರು
ಮುನಿ ಸಹಾಯದಿ ಪಿತನ ಸಂಸ್ಕಾರಗಳ ಮುಗಿಸಿ ।
ಜನರ, ರಥ ಗಜ ತುರಗ ಪಶುಗಣ
ಧನದಿ ತಣಿಸಿದ ವಸನ ಭೂಷಣ
ಕನಕ ರತ್ನಾದಿಗಳನಿತ್ತನು ದಣಿಸಿ ಸರ್ವರನು ॥೫೦॥

ಒಂದು ದಿವಸ ವಸಿಷ್ಠ ಮಂತ್ರೀ
ವೃಂದವನು ನೆರೆಯಿಸುತ ಕರೆಸಿದ
ನಂದು ಭರತನ ಸಭೆಗೆ ವಹಿಸಲು ರಾಜ್ಯ ಸೂತ್ರಗಳ ।
ಬಂದುದೀ ವಿಧಿ ಕೈಕೆಯಾಸೆಯ
ದಂದುಗದಿ ನೃಪ ಸತ್ಯವಚನದಿ
ಮುಂದುಗೆಟ್ಟನು ಜೀವದೊರೆದನು ಧರ್ಮಪಥಕಾಗಿ ॥೫೧॥

ದೈವ ಬಲವೇ ಬಲವು ಲೋಕದಿ
ಸಾವು-ಹುಟ್ಟುಗಳಿನ್ನು ವಶವೇ
ನೋವು ಸುಖ ಅಪಕೀರ್ತಿ-ಕೀರ್ತಿಗಳೆಲ್ಲ ದೈವ ವಶ ।
ದೈವದಿದ್ದಿರಲಿ ಪುರುಷಯತ್ನಗ
ಳಾವ ಕಾರ್ಯವ ಗೆಯ್ಯಲಪ್ಪುದು
ಭಾವಿಸದಿರೈ ಕಂದ ದೋಷವನೆಣಿಸಬೇಡಿನ್ನು ॥೫೨॥

ತನ್ನ ಸತ್ಯದ ನುಡಿಗೆ ಸೋಲುತ
ಲುನ್ನತಾಮಲ ಕೀರ್ತಿವಡೆಯುತ
ನಿನ್ನ ಜನಕನು ಸ್ವರ್ಗಧಾಮವ ಸಾರ್ದ ಪುಣ್ಯದಲಿ ।
ಇನ್ನು ದಶರಥನೃಪನ ಹೋಲುವ
ಸನ್ನುತರು ಪುಟ್ಟುವರೆ, ಬಿಡು ಬಿಡು
ನಿನ್ನ ದುಃಖವ ರಾಜ್ಯಭಾರವ ತಳೆದು ಸುಖಿಯಾಗು ॥೫೩॥

ವನಕೆ ಕಳುಹಿದ ರಾಮಚಂದ್ರನ
ತನುವನಿಳುಹಿದ ಸತ್ಯವಚನಕೆ
ಜನಪತಿಗೆ ವಚನ ಪ್ರಧಾನವದೆಂದು ತಾ ತಿಳಿದು ।
ಜನಪನಿತ್ತಿಹೆ ರಾಜ್ಯಕೋಶವ
ನಿನಗೆ ಪಿತೃನುಡಿಯಾಂತು ಮುದದಲಿ
ಜನಪ ಪದವಿಯ ತಾಳ್ದು ಧರ್ಮವನಾಳುಹು ಶೀಘ್ರದಲಿ ॥೫೪॥

ಹಿಂದೆ ಭಾರ್ಗವರಾಮ ಜನನಿಯ
ಕೊಂದ ಪಿತನಾಜ್ಞೆಯಲಿ-ಜವ್ವನ
ತಂದೆಗಿತ್ತನು ಪೂರು ಜರೆಯನು ಕೊಂಡು ಜಸವಡೆದ ।
ಇಂದು ಜನಪತಿಯಾಜ್ಞೆಯಲಿ ನಲ
ವಿಂದ ರಾಜ್ಯವ ತಾಳ್ದು ಪಾಲಿಸು
ತಂದೆಯಾಡಿತ ನೆನೆಯದುಚಿತಾನುಚಿತಗಳನೆಂದ ॥೫೫॥

ಇದುವೆ ರಾಮನ ಮತವು ಜನಕಂ
ಗಿದುವೆ ಸಮ್ಮತ ಕುಶಲಿಯೊಪ್ಪಿದ
ಳಿದನು ಕೈಕೆಯಾಶಯ ಮುನಿಗಳಾಜ್ಞೆಯಿದು ।
ಇದು ನಿಗಮ ಸಮ್ಮತವು ನಿನಗಿಂ
ದೊದವಿರುವ ರಾಜ್ಯಾದಿಗಳ ನೀ
ಪದುಳದಲಿ ಕೈಕೊಂಡು ಪಾಲಿಪುದೆನ್ನ ಮತವೆಂದ ||೫೬||

ನಿನಗೆ ರಾಮನೊಳೆನಿತು ಪ್ರೇಮವೊ
ಅನಿತು ರಾಮಗೆ ಪ್ರೇಮ ನಿನ್ನೊಳು
ಅನಘನಿದ ಜಗವರಿತು ಮನ್ನಿಸಿ ನಿತ್ಯ ಹೊಗಳುತಿದೆ ।
ಜನಪದವ ನೀ ವಹಿಸಿ ರಾಘವ
ವನದಿ ಮರಳಿದ ಬಳಿಕ ರಾಜ್ಯವ
ನನುಮತದೊಳವಗಿತ್ತು ಸೇವೆಯಮಾಡು ಕೇಳೆಂದ ||೫೭||

ಬಂಧು ಮಂತ್ರೀ ಹಿತರು ಸಾಧುಗ
ಳೆಂದು ರಾಜ್ಯವನಾಳು ರಾಮನು
ಬಂದು ಕಳೆವನು ದುಃಖ ವನವಾಸವನು ನೀಗುತ್ತ ।
ಎಂದು ತಿಳುಹಲು ಹಲವು ಪರಿಯಲಿ
ಇಂದುಮುಖಿ ಕೌಸಲ್ಯೆಯೊರೆದಳು
ಕಂದ ದೇಶವನಾಥವಾಗಿರೆ ಸಲಹು ಶೀಘ್ರದಲಿ ||೫೮||

ಎನಗೆ ಕೈಕೆ ಸುಮಿತ್ರೆ ಬಾಂಧವ
ಮುನಿ ಸಚಿವರಿಗೆ ಪರಿಜನಕೆ ಧಾ
ರುಣಿಗೆ ನೀನಾಶ್ರಯನು ಜೀವಾಧಾರ ಮತ್ತೇನು ।
ಮನದ ಕಾತರ ತೊರೆದು ಕಾಲದ
ಘನತೆಯನ್ನರಿಯುತ್ತ ರಘುಕುಲ
ಘನನು ನೀನೆನಿಸಿನ್ನು ಕೇಳೆಂದಳು ಸರೋಜಮುಖಿ ||೫೯||

ಗುರುವಚನ ಸಚಿವರಭಿನಂದನ
ಪರಿಜನರ ನುಡಿ ಬಾಂಧವರ ಕರೆ
ಧರೆಯ ಮೊರೆ ಕೌಸಲ್ಯೆಯಾಣತಿ ಮುನಿಗಳಾಳಾಪ ।
ಸರಳ ಸದ್ವಚನಗಳ ಮಳೆಯಲಿ
ಹರುಷಮಾದುದು ಮನದಿ ಸರ್ವರ
ಪರಮ ವಿಶ್ವಾಸದಲಿ ವಂದಿಸಿ ಭರತ ಮನ್ನಿಸಿದ ॥೬೦॥

ಜನನಿ ನುಡಿಯಂ ನೆನೆದು ಭರತಗೆ
ಮನದಿ ವಿರಹಾತುರವು ಮೂಡಲು
ಕೊನೆಗೆ ಸಭೆಯಲಿ ನೊಂದು ಕಂಬನಿಗರೆಯದವರಿಲ್ಲ ।
ಅನಿತರಲಿ ಧೃತಿವಡೆದು ಕೈಮುಗಿ
ದನಘನೊರೆದನು ವಿಧಿವಿಲಾಸವ
ನೆನೆದುದೇಂ ರಾಘವನ ವಿಪಿನಾಂತರಕೆ ಕೊಂಡೊಯ್ದು ॥೬೧॥

ಜನಕವಚನಮುಲಂಘ್ಯ ಮೇಣೀ
ಜನನಿಯಾಣತಿ ಪ್ರಜೆಗಳಭಿಮತ
ಗುರುಗಳಾಜ್ಞೆಯು ಸಚಿವರೊಪ್ಪಿತಗಳನು ಮುರಿಯುವೆನೆ ।
ನೆನೆಯಲುಚಿತಾನುಚಿತ ಕೃತ್ಯವ
ಮನದೊಳರಿತೆನು ಧರ್ಮ ಸೂಕ್ಷ್ಮವ
ನೆನಗೆ ಹಿತಮಾದುದನೆ ಬಗೆದಿರಿ ಘನತೆಯಲಿ ನೀವು ॥೬೨॥

ಈ ಸಿರಿಗೆ ಮನಸೋತು ಪತಿಯ
ನ್ನಾಸುರದ ಮೋಹದಲಿ ನೀಗುತ
ಮೊಸಲಾದಳು ಮಾತೆ ಜಗದಪಕೀರುತಿಗೆ ಸಿಲುಕಿ ।
ಮೋಸಹೋದನು ಜನಕ ರಘುಪತಿ
ಗೇಸು ಗಂಡಾಂತರವನೊಡ್ಡಿತು
ಘಾಸಿಯಾದೆನು ಬೇಡೆನಗೆ ಸಾಮ್ರಾಜ್ಯ ಸುಖವೆಂದ ॥೬೩॥

ಆ ವಿಭುವು ನಾರುಡೆಯ ಧರಿಸುತ
ದೇವಿಯೊಡನೀ ರಾಜ್ಯದೊರೆಯುತ
ಧಾವಿಸಿರೆ ವಿಪಿನಾಂತರಕೆ ಸಿರಿಗೊಲಿಯುವವನಲ್ಲ ।
ಪಾವನನೆ ಗತಿ ರಾಮಚಂದ್ರನ
ಸೇವೆ, ರಘುಪತಿನಾಮವೊಂದುಂಳಿ
ದಾವ ಮಾರ್ಗವ ಕಾಣೆ ಸೀತಾಪತಿಯೆ ಹಿತನೆಂದ ॥೬೪॥

ಭೂಮಿಜಾ ಸೌಮಿತ್ರಿ ಸಹಿತಾ
ರಾಮನಂ ವನಕಟ್ಟಿ ಪದಯುಗ
ತಾಮರಸ ಧರ್ಶನವನೊಲ್ಲದ ದೋಷರಾಜ್ಯವಿದು ।
ರಾಮನೇ ಸರ್ವಾತ್ಮ ಜಗದಲಿ
ರಾಮನಂ ತೊರೆದೆಂತು ಜೀವಿಪು
ದೀ ಮಹೀತಲದಲ್ಲಿ ನಡೆವೆಣದಂತೆ ಬುದುಕಿಹುದೆ ? ॥೬೫॥

ಮನದೊಳಗೆ ವೈರಾಗ್ಯಮೂಡದ
ತನಗೆ ಬ್ರಹ್ಮವಿಚಾರಮೇತಕೆ
ವನಿತೆ ವಸನವನೊಲ್ಲದಾಭರಣಗಳ ತೊಡುವಂತೆ ।
ತನುವ ತೊರೆಯುಲ್ಕಾತ್ಮ ದೇಹದೆ
ಘನತೆಯುಳಿವೊಲು ರಾಮಚಂದ್ರನ
ವನಜಪದ ಡರ್ಶನವ ಪಡೆಯದೆ ಜೀವಿಸಿಹುದೆಂತು ॥೬೬॥

ಅದರಿನಾ ಶ್ರೀರಾಮಚ-ಂದ್ರನ
ಪದವ ಸೇರುವೆನಿನ್ನು ಕೊಡಿ ನೀ
ವಿದಕೆ ಸಮ್ಮತಿ ಜಗಕೆ ಮಂಗಳಮೆನಗು ಹಿತಮುಹುದು ।
ಇದ ತೊರೆದು ನಶ್ವರದ ರಾಜ್ಯದ
ಪದವಿಗಳನಾನೊಲ್ಲೆ ನಾಲ್ವರ
ಮೊದಲಿಗನು ರಾಮನಿರೆ ಕೋಸಲ ಪಟ್ಟವೇಕೆನಗೆ ॥೬೭॥

ಎನ್ನೊಳಿಹುದೇ ನೃಪತಿ ಲಕ್ಷಣ
ಮೆನ್ನ ಕಾರಣದಿಂದ ರಾಘವ
ನನ್ನು ಜನಪತಿ ವಿಪಿನಕಟ್ಟಿದ ತೊರೆದ ತಾನಸುವ |
ಎನ್ನವೊಲು ಪಾಪಿಗಳ ಕಾಣೆನು
ಎನ್ನ ಭಾರದಿ ಮುಳುಗದೀ ನೆಲ
ವೆನ್ನ ಬಯಸುವಿರೇಕೆ ಜನಪತಿಯೆಸಗದಿರಿಯೆಂದ ||೬೮||

ಜನನಿಯರಿಯದೆ ಬಯಸಿ ರಾಜ್ಯವ
ನೆನಗೆ ದೇವರನಗಲಿ ಲೋಕಕೆ
ಘನತರದ ದುಃಖಗಳ ನೀಡುತ ಪತಿಯ ನೀಗಿದಳು |
ವನಜಪೀಠನ ಕುಟಿಲವಿಧಿಕಾ
ಜನನಿ ಬಲಿಯಿಕ್ಕಿದಳು ಹೃದಯವ
ತನಯಗೋಸುಗವೆಂದು, ತಪ್ಪಾಯ್ತೆನ್ನ ಕಾರಣದಿ ||೬೯||

ಲೋಕದಲಿ ಸೌಮಿತ್ರಿ ಮಾನ್ಯನು
ನೂಕುತರಮನೆ ಸುಖವ ರಘುವರ
ನೇಕ ಭಕ್ತಿಯೊಳೊಲಿದು ನಡೆದನು ಹರಿಯ ಬಳಿವಿಡಿದು |
ಕಾಕಲಾ ಎನಗೇನು ವೈಭವ
ಮೇಕೆ ರಾಮನ ಪಾದಧೂಳಿಯೆ
ಸಾಕು ಮಿಥ್ಯಾ ಪ್ರೇಮಿಯಾದೆನೆ ದೈವದೂರನಲಾ ||೭೦||

ತಿಳಿಯೆನನ್ಯೋಪಾಯಗಳ ಮನ
ದಳಲನಡಗಿಸೆ ರಾಮ ಭಕ್ತರಿ
ಗೊಲಿದಡಲ್ಲದೆ ಬದುಕಬಹುದೇ ಜೀವಮಿನ್ನೇಕೆ |
ಹೊಳೆಯೆ ಸೂರ್ಯನು ನಾಳೆ ರಾಮನ
ಬಳಿಯ ಸೇರುವೆವಾವು ಶೀಘ್ರದಿ
ಸುಲಭನಡಿಗಳ ದರ್ಶನದಿ ಸಂತೋಷಗೊಳ್ಳುವೆವು ||೭೧||

ಸರಲಗುಣ ಸುಸ್ನೇಹ ಸದನನು
ಪರಮ ಕರುಣಾವರನು ರಘುಪತಿ
ಪರಮ ಶತ್ರುವನಾದೊಡೆಯು ರಕ್ಷಿಸುವನೆಣಿಸದೆಯೆ ।
ತರಳನಿವನೆಂದೆನ್ನ ಸಲಹುವ
ಕಿರಿಯನಿವನೆಂದೆನ್ನ ತಪ್ಪುಗ
ಳೊರೆವನೇ ಮನ್ನಿಸುವ ಸೋದರನೆಂದನಾ ಭರತ ॥೭೨॥

ಭರತನಾ ನುಡಿಗೇಳಿ ಸಕಲರು
ಹರಿಯನೇ ನೆನೆಯುತ್ತ ಭರತನ
ಹರಸಿ ವಿರಹಾಗ್ನಿಯಲಿ ನೊಂದರು ಜೀವದೊರೆದಂತೆ ।
ಸರುವರೊಪ್ಪಿದರಾ ವಿರಾಗಿಯ
ಪರಮ ನೇಹಕೆ ಸೋತು ರಾಮನ
ಕರೆತರಲು ಪತ್ತನಕೆ ಭರತಂಗಾಣತಿಯನಿತ್ತು ॥೭೩॥

ಮರೆದು ಕಳೆ ದುಃಖಗಳ ನಾವಿ
ನ್ನರಸಿ ರಾಮನ ಬೇಡಿ ಪುನರಪಿ
ಧರೆಯ ಕೊಡುವೆವು ನಿನ್ನ ಹೃದಯಕೆ ತಂಪನೆರೆಯುವೆವು ।
ಭರತ ತಪ್ಪೆಣಿಸುವರೆ ನಿನ್ನಲಿ
ಪರಮ ಸದ್ಗುಣ ಶೀಲ ರಾಮನ
ಚರಣಕಾಣುವ ನಾಳೆಯೆಂದ ವಸಿಷ್ಠಮುನಿರಾಯ ॥೭೪॥

ಮರುದಿವಸ ಹರಿಸನ್ನಿಧಿಗೆ ಮುನಿ
ವರರು ಜನನೀ ಪರಿಜನಂಗಳು
ಪೊರಮಡಲ್ಕಾತುರದಿ ಭರತನು ಪಯಣಕಣಿಮಾಡಿ ।
ಇರಿಸಿ ರಾಮನ ಪಟ್ಟವಣೆಯಲಿ
ಚರಿಸುವೆನು ವನವಾಸ ತಾನೆಂ
ದುರುತರದ ಚಿಂತೆಯಲಿ ರಾಮಧ್ಯಾನಪರನಾದ ॥೭೫॥

# ವಿಶ್ರಾಮ ೧೧

ಸೂ॥ ನಡೆದು ಪರಿಜನ ಸಹಿತ ಹೆಳುವದಿ
ಕಡು ತವಸಿ ರಾಘವನ ಕಂಡನು
ನುಡಿಸಿ ಭಕ್ತರ ಭರತ ನೋಡಿದ ಚಿತ್ರಕೂಟವನು ॥

ಮರುದಿವಸ ಸೂರ್ಯಪ್ರಭಾತದಿ
ಪೊರಮಡಲು ರಾಘವನ ಸನಿಯಕೆ
ಪುರಜನರು ನಿಜವಸ್ತುವಾಹನ ಸಿದ್ಧಮಾಡಿದರು ।
ಭರತನರಮನೆಗೈದಿ ರಥಗಜ
ತುರಗ ಭಾಂಡಾಗಾರವೆಲ್ಲವ
ಪೊರೆವುದೆಚ್ಚರವೆಂದು ನಚ್ಚಿನ ಭಟರ ಕಳುಹಿದನು ॥೧॥

ಅಡವಿಯಲಿ ರಾಜ್ಯಾಭಿಷೇಕವ
ನಡೆಸಬೇಹುದು ರಾಮಚಂದ್ರಗೆ
ಪೊಡವಿಯುವನದು ನಾವು ಭೃತ್ಯರು ರಾಮಸೇವಕರು ।
ನಡೆದು ದೇವರ ನೋಡಬೇಹುದು
ನಡೆಯಿರೆನುತವೆ ತರಿಸಿ ಭಂಡಿಗ
ಳೊಡನಿರಿಸಿ ಸಂಭಾರಗಳ ವನಪಯಣಕನುವಾದ ॥೨॥

ತರತರದ ಪಲ್ಲಕ್ಕಿಯೇರುತ
ತರುಣಿಯರು ನೃಪಸತಿಯರೆಲ್ಲರು
ಹರಿಯ ದರ್ಶನಕಾಗಿ ಪೊರಟರು ಪರಮದುತ್ಸಹದಿ ।
ಪುರಜನರು ವಾಹನಗಳೇರುತ
ಪೊರಟಿಹರು ರಘುರಾಮನಿರುತಿಹ
ಪರಮ ಮಂಗಳ ಚಿತ್ರಕೂಟಾದ್ರಿಯನು ನೆನೆಯುತಲಿ ॥೩॥

ಬಲು ಬಳಲಿ ಬಾಯಾರಿ ಗಜಪಡೆ
ಜಲವರಸಿ ನಡೆವಂತೆ ಸರ್ವರು
ಹಳುವಮಂ ಸಾರಿದರು ರಾಮನ ಕಾಣುವಾತುರದಿ |
ಸುಳಿವ ಚೀರಾಜಿನದಿ ಹರಿಯಂ
ಬಳಲಿನಿಂ ಶತ್ರುಘ್ನವೆರಸುತ
ಹಳುವದಲಿ ಬರಿಗಾಲಿನಲಿ ನಡೆತಂದ ಪಯಣದಲಿ ||೪||

ನಡೆದು ಬರುತಿರೆ ಭರತ ಸರ್ವರು
ಬಿಡುತವಾಹನ ಗಜರಥವ ಕಾ
ಲ್ನಡಿಗೆಯಲಿ ನಡೆತರುತ ರಾಮಧ್ಯಾನಪರರಾಗಿ |
ನುಡಿಯಲಂಜುತಲಿಂಗಿತದಿ ರಥ
ವಡರೆ ಸೂಚಿಸುವಂತೆ ತವೊ್ಮಳು
ನುಡಿವುತಿರೆ ಕೌಸಲ್ಯೆ ವಚನದಿ ರಥವನೇರಿದನು ||೫||

ಸೇರಿ ತಮಸಾನದಿಯ ಮೊದಲಿರು
ಳಾರಲೆರಡನೆ ದಿನಕೆ ಗೋಮತಿ
ತೀರ ಕಂಡು ಸಯಿಾನದಿಯ ದಾಟಿದರು ಮರುದಿವಸ |
ಮಾರನೆಯದಿನ ಶೃಂಗಬೇರವ
ಸೇರೆ ಮುಟ್ಟಿತು ವಾರ್ತೆ ಗುಹಗೆ ವಿ
ಚಾರಿಸಿದ ಗೂಢಪ್ರಚಾರರ ಕಳುಹಿ ದೆಸೆದೆಸೆಗೆ ||೬||

ಬಂದನೇ ಕುಟಿಲದಲಿ ರಾಮನ
ಕೊಂದು ರಾಜ್ಯವ ನುಂಗಲೋಸುಗ
ತಂದನಿಲ್ಲವೆ ಸೈನ್ಯ ಭರತಂಗೇಕೆ ಕಪಟವಿದು |
ಎಂದು ನಾವೆಯ ತಡೆದು ಮಾರ್ಗವ
ಬಂಧಿಸುತ ಹಗೆಯಾದೊಡಿವನನು
ಕೊಂದು ಗೆಲುವೆವು, ಮಿತ್ರನಾದೊಡೆ ಹಬ್ಬವಾಯ್ತೆಮಗೆ ||೭||

ಇಂದು ರಾಜ್ಯವ ರಾಮಗೊಪ್ಪಿಸ
ಬಂದನೋ, ಹಗೆಯಾಗಿ ರಾಮನ
ಕೊಂದು ಕಂಟಕ ನೀಗ ಬಗೆವನೊ ಮಂದಮತಿಯಾಗಿ ।
ಕಂದನಿವ ಕುಂದರಿಯ ಯುಕ್ತಿಯೊ
ಳಿಂದು ತಥ್ಯವನರಿದೊಡನೆ ಬಹು
ದೆಂದೊರೆದು ಕಳುಹಿದನು ದೂತರ ವಹಿಲದಲಿ ಗುಹನು ॥೮॥

ಆವ ಕಾರಣ ಬಂದ ಭರತನಿ
ಗಾವ ದುರ್ಮತಿಮೂಡಿ ಮನಸಿನೊ
ಳಾವುದಾಸೆಯೊ ಅಮಮ ಸಿರಿಯಿನ್ನೇಸು ನಿರ್ದಯಳೊ ।
ದೇವನೊಳು ಹಗೆಯೆಣಿಸುವನೆ ಸೈ
ನ್ಯಾವಳಿಯ ಕರೆತಂದನೇಕೆ ನಿ
ರಾವಲಂಬನ ಕೊಲಿಸಬಂದನೆ ಭರತ ತಾನೆಂದ ॥೯॥

ನೆಲ್ಲಕೊಡೆಯ ತಾನಾಗಿ, ರಾಘವ
ಹಳುವ ಹೊಕ್ಕುದು ಸಾಲದೇ ವಿಷ
ಜಲವೆರೆದು ಸೋದರರ ಕೊನೆಗಾಣಿಸುವ ಹಂಬಲವೆ ।
ಒಲಿದರೊಳ್ಳಿತು ಮುನಿದನಾದೊಡೆ
ಬಲಿದು ಮಾರ್ಗವ ಕಟ್ಟಿ ಶಬರರ
ಬಲವ ತೋರ್ಪುದು ಗಾಯಗಾಣಿಸಿ ಹಿಂದಕಟ್ಟುವುದು ॥೧೦॥

ಬದುಕುವನೆ ಹಗೆಯಾಗಿ ರಾಮಗೆ,
ಸದರವಾದುದೆ ನರಿಗೆ ಮೃಗಪತಿ
ಯುದಿಪ ಸೂರ್ಯಂಗೆಣೆಯ ಕತ್ತಲೆ ನೀಗೆ ಕೆಸರಿದಿರೆ ।
ಅದೊ ವಸಿಷ್ಠರ್ವೆರಸಿ ಬರುವನು
ಹುದದಿ ನಡೆದೊಡೆ ಗೆಳೆಯನಪ್ಪನು
ಹೃದಯ ವಿಷಮಯವಾಗೆ ಭರತ ಸಮಾಧಿಯಾಯ್ತೆಂದ ॥೧೧॥

ನಡೆಯುತಾಪ್ತರ್ ವೆರಸಿ ದೂರದಿ
ಕಡುತವಸಿಯಂ ಕಂಡು ನಮಿಸಲು
ಕೆಡೆದ ಗುಹನನ್ನೆತ್ತಿ ಹೆರಸಿ ವಸಿಷ್ಠಮುನಿ ಹೊಗಳಿ ।
ನುಡಿಯಲರಿವೆನೆ ಗುಹನ ಗುಣಗಳ
ನೆಡಬಿಡದೆ ರಾಘವನ ಭಜಿಸುವ
ನೊಡೆದು ಮೂಡಿದ ಕಾಂತಿ ನೋಡಾ ಭರತ ನೀನೆಂದ ||೧೨||

ಇಳಿದು ರಥದಿಂ ಭರತ ಗುಹನ
ನ್ನೊಲಿದು ಮನ್ನಿಸಿ ಗೌರೆವಿಸಿದೊಡೆ
ಸಲಿಸಿ ಕಾಣ್ಕೆಯ ಪಾದಕೆರಗಲು ಗುಹನನಪ್ಪಿದನು ।
ಗೆಳೆಯರಿರ್ವರ ಗುಣಹೊಗಳಿ ಹೊ
ಮಳೆಗರೆದು ನೀಚೋನ್ನತಿಯ ಪರಿ
ಯಳಿಸುತೊಲಿದಾ ಭರತನಂ ಸ್ತುತಿಸಿದುದು ಸುರನಿಚಯ ||೧೩||

ಒಲಿದ ರಾಘವ ಗುಹಗೆ ಕರುಣದೊ
ಳಳಿಸಿ ಜಾತಿಯಕಟ್ಟು ಸೋದರ
ನೊಲುಮೆಯಿಂ ಬೆರೆದಿರಲುಮೆನಗೀ ಗುಹಸಹೋದರನು ।
ತಿಳಿಯದಾ ವಾಲ್ಮೀಕಿ 'ಮರ'ವೆಂ
ದುಲಿಯೆ ರಘುಪತಿನಾಮ ಮಹಿಮಾ
ಬಲದಿ ಬೇಡ ಬ್ರಹ್ಮ ಋಷಿಯೆನಿಸಿದನು ಲೋಕದಲಿ ||೧೪||

ಎಂದು ರಾಮನ ನೇಹಿಗನ ಮುದ
ದಿಂದ ಕುಶಲವ ಕೇಳೆ ಗುಹ ನಲ
ವಿಂದ ಸಂಭಾವಿಸಿದ ಭರತನ ಹರಿಯ ಕಂಡಂತೆ ।
ತಂದೆ ನಿನ್ನಂ ಕಂಡು ಪರಮಾ
ನಂದ ಪೊಂದಿದೆ ಸಿಗುವರೇ ನಿ
ನ್ನಂದದಿಂ ಘನಪುಣ್ಯ ಮಾನುಷರೆಂದನಾ ಗುಹನು ||೧೫||

ಹೋದ ಜನ್ಮದ ಸುಕೃತಫಲದಿಂ
ಮಾಧವನ ಮೇಣ್ ನಿನ್ನ ಸದಮಲ
ಪಾದ ದರುಶನವಾಯ್ತು ನಿಮ್ಮಿಂದಾನು ಘನಸಾದೆ ।
ಮಾದು ಕಳೆದುದು ಪಾಪ ಸಂಚಿತ
ಸಾಧುವಾದುದು ಬಂದ ಕುಲ ಶ್ರೀ
ಪಾದ ಮಹಿಮೆಯೊಳಿಂದು ಬೆಳಗಿತು ಹೇಳಲೇನೆಂದ ॥೧೬॥

ಅಪ್ಪಿದನು ಗುಹನನ್ನು ಶತ್ರುಹ
ನೊಪ್ಪಿ ಮಾತಾಡಿಸಿದ ರಘುವರ
ನಪ್ಪಿ ದೀ ತನು ದುಃಖ ಶಮನವ ಮಾಡುತಿದೆಯೆಂದು ।
ಒಪ್ಪಿದರು ನರನಾರಿಯರು ತಂ
ದೊಪ್ಪಿಸುತ ಕಾಣಿಕೆಯ ನಿಜ ಕ
ಣ್ಗೊಪ್ಪುವೊಲು ನೋಡಿದರು ರಾಮಾನುಜರ ಮನವೊಲಿದು ॥೧೭॥

ತಿಳುಹೆ ಮೊಗ ಸನ್ನೆಯ್ಯಲಿ ದೂತರು
ನಿಲಯುಗಳ ಕಟ್ಟಿದರು ಶೀಘ್ರದಿ
ನಿಳಲ ತಾಣದಿ ಪರ್ಣಶಾಲೆಯ ಸುಖವಸತಿಗಳನು ।
ತಳಿರ ಪಲ್ಲಂಗಗಳ ರಚಿಸಿದ
ರೊಲಿದು ಫಲಮೂಲಾದಿ ಪಣ್ಗಳ
ನಿಳುಹಿದರು ತಂದಲ್ಲಿ ಸೇವಾತುರರು ಮೈಮರೆದು ॥೧೮॥

ಪುರವನೀಕ್ಷಿಸಿ ಗುಹನೊಡನೆ ವರ
ಸುರನದಿಯ ಸೇರಿದನು ಭಕ್ತಿಯೊ
ಳೆರಗೆ ರಾಮನು ನಿಂದ ತಾಣವನೋಡಿ ವಿನಯದಲಿ ।
ಹಿರಿಯನಂ ಕಂಡಂತೆ ಹರುಷದೊ
ಳೆರಗಿ ರಘುಪತಿ ಪಾದಧೂಳಿಯ
ಶಿರದೊಳಾಂತನು ನೆನೆಯುತಣ್ಣನ ಚರಣ ಮಹಿಮೆಗಳ ॥೧೯॥

ಇಳಿದು ಸಕಲರ್ವೆರಸಿ ಮಿಂದನು
ಜಲಜಮಿತ್ರಂಗರ್ಘ್ಯವೀಯುತ
ಲೊಲಿದು ಗಂಗೆಯ ಭಜಿಸಿ ಪೂಜಿಸಿದನು ವಿರಾಗದಲಿ ।
ಕಳುಹಿ ಸರ್ವರ ಗುಹನನೆಕ್ಕಟಿ
ಸೆಳೆಯುತುಕ್ಕುವ ಪ್ರೇಮದಿಂ ದೃಗು
ಜಲವ ಸಂವರಿಸುತ್ತ ನಡೆದನು ಕರದಿ ಕರವಿರಿಸಿ ॥೨೦॥

ಎಲ್ಲಿ ರಾಘವ ತಂಗಿದನು ಮ
ತ್ತೆಲ್ಲಿ ಜಾನಕಿ ಮಲಗಿದಳು ಮೇ
ಣೆಲ್ಲಿ ಲಕ್ಷ್ಮಣನಿರ್ದ ಬಂದೀ ಪುರದಿ ಪಯಣದಲಿ ।
ಎಲ್ಲವನು ಬಿತ್ತರಿಸು ರಾಮನ
ನೆಲ್ಲಿ ನೋಡಿದೆ ಮೊದಲು ಗುಹನೀ
ನೆಲ್ಲಿ ನಿಲಿಸಿದೆ ಪೂಜ್ಯಪಾದನ ಬೇಗ ಹೇಳೆಂದ ॥೨೧॥

ಮರುಗಿ ಭರತನ ನುಡಿಗೆ ಸರ್ವರು
ಹರಿಯ ನೆನೆಯುತ ಗುಹನ ನೋಡುತ
ಲಿರಲು ತೋರಿದ ರಾಮಲಕ್ಷ್ಮಣ ಸೀತೆಯಿರ್ದಿರವ ।
ಹಿರಿಯಗಾಶ್ರಯವಿತ್ತ ಶಿಂಶುಪ
ಮರದ ಸಯ್ಪಿನ್ನೆನಿತೋ ಹರಹರ
ಹರಿಯು ಮಲಗಿದ ಕುಶಕಿಸಲಯದ ಪುಣ್ಯವಿನ್ನೆನಿತೊ ॥೨೨॥

ವಂದು ಕುಶಪಲ್ಲಂಗವನು ಬಲ
ವಂದು ರಾಮಪದಾಬ್ಜ ರೇಖೆಗ
ಳಂದಮಾಗಿರೆ ನೆಲದಿ ಕಣ್ಗೊತ್ತಿದನು ಪೊಡವಂಟು ।
ಅಂದು ಸೀತೆಯ ಕೊರಳ ಚಿನ್ನದ
ಬಿಂದು ಚೆಲ್ಲಿಹುದೆಂದು ಭೂಮಿಾ
ನಂದನೆಯ ಕಂಡಂತೆ ಹಿಗ್ಗಿದ ಶಿರದೊಳಿರಿಸುತ್ತ ॥೨೩॥

ಆ ವಿದೇಹನೆ ತಂದೆ ಸೀತೆಗೆ
ಮಾವ ರವಿಕುಲಭಾನು ಸುರರಮ
ರಾವತಿಯ ಪಾಲಕನು ದಶರಥನಮಲ ಕೀರ್ತಿಯುತ ।
ದೇವಿಗಾ ರಘುನಾಥ ನಾಥನು
ಭೂವಧೂಮಣಿ ತಾಯಿಯಿಂಥಾ
ದೇವಿಗೀ ವಟ ಛಾಯೆಯುರಮನೆ ತಳಿರ ಪಲ್ಲಂಗ ॥೨೪॥

ಹಿಂದು ಮುಂದಿಂದಿಲ್ಲ ಲಕ್ಷ್ಮಣ
ನಂದದ ಸಹೋದರರು ಜನಕಾ
ನಂದರೂಪನು ಬಾಲಲಾಲನ ಯೋಗ್ಯನದ್ಭುತನು ।
ತಂದೆತಾಯ್ಗಳ ಮೆಚ್ಚು ರಾಮನಿ
ಗೊಂದೆ ದೇಹನು ಕಾಣೆಸಿನ್ನಿವ
ನಂದದ ಸಹೋದರರ ಧರೆಯೊಳಗೆಂದನಾ ಭರತ ॥೨೫॥

ಅರಿವನೇ ರಘುರಾಮ ಕಾನನ
ದಿರವ, ಜನಕನು ಜೀವ ವೃಕ್ಷವ
ಪೊರೆದ ನಿಚ್ಚಂ ಬಿಡದೆ, ಜನನಿಯರಿವನ ಮೋಹದಲಿ ।
ಇರುಳು ಹಗಲೊಳು ಕಣ್ಣನೆವೆಗಳು
ಪೊರೆಯುವಂದದಿ ರಕ್ಷಿಸಿದರಾ
ಪರಮ ಪುರುಷನನೆಂದು ಹಲುಬಿದ ಭರತ ನೆನೆನೆನೆದು ॥೨೬॥

ಇಂದವಗೆ ವನದಲ್ಲಿ ವಾಸವೆ
ಕಂದ ಫಲಮೂಲಗಳು ಭೋಜ್ಯವೆ
ತಂದೆ ಕೋಮಲ ತನುವ ಪೊರೆಯುವನೆಂತು ಕಾಡೊಳಗೆ ।
ತಂದಳೀ ಪರಿ ಕೈಕೆ ದುಃಖವ
ಕಂದಗೆಂದೀ ರಾಜ್ಯಸಂಪದ
ದಿಂದ ದುರ್ಯಶ ಪೊಂದಿ ನೊಂದಳು ಹರಿಗೆ ಹಗೆಯಾಗಿ ॥೨೭॥

ಸುಡಲಿ ನನ್ನೀ ಜನ್ಮ ಪಾತಕ
ಜಡಧಿ ಮತ್ತುತ್ಪಾತ ಕಾರಣ
ಕೆಡೆಯನಿತ್ತುದು ಪಾಪತನುವಿದಕಿರಲಿ ಧಿಕ್ಕಾರ ।
ಪೊಡವಿಯಲಿ ವಿಧಿ ಕುಲಕಳಂಕನಿ
ಗೆಡೆಯ ಕೊಟ್ಟನದೇಕೆ ಜನಿಸ
ಲ್ಕೊಡನೆ ಜೀವವ ಕೊಳ್ಳದಾದನೆ ಪಾಪಿ ತಾನೆಂದ ॥೨೮॥

ಭರತನಾ ಬಸನವನು ಗುಹ ತಿಳಿ
ದೊರೆದ ವಿನಯದಿ ನಾಥ ಬಿಡು ಬಿಡು
ಬರಿಯ ದುಃಖವಿದೇಕೆ ಹೃದಯದ ಚಿಂತೆಗಳ ಬಿಸುಡು ।
ಹರಿಯ ಹೊರೆಗೈದುತ್ತಿಹೆ ಕರುಣಾ
ವರನ ಮರೆಹೊಕ್ಕರಿಗೆ ಭಯವೇ
ತರದು ದೋಷಗಳಿಲ್ಲ ದೈವಾಯತ್ತವರಿಯೆಂದ ॥೨೯॥

ಇಲ್ಲಿ ಮಲಗಿದ ರಾಮ ನಿನ್ನಯ
ಸಲ್ಲಲಿತ ಗುಣಗಾನ ಮಾಡುತ
ಮೆಲ್ಲನಿರುಳನು ಕಳೆದೆವಾವ್ ಸಖ ನಿನ್ನ ಕಥೆಗಳಲಿ ।
ಎಲ್ಲಿರಲಿ ಹರಿ ತನ್ನವರ ವಃಸ
ದಲ್ಲಿ ನೆಲಸುವನೊಲಿದವರ ಸುಖ
ದಲ್ಲಿ ಮೂಡುವನಿಂದವಗೆ ವನವಾಸ ನಾಟಕವು ॥೩೦॥

ಒಳಹೊರಗೆ ತಾನಿಪ್ಪನಣುಗಣು
ವಿಲಯ-ಪಾಲನ ಸೃಷ್ಟಿ ಚತುರನು
ಸುಲಭ ಸುಂದರ ಘನಕೆ ಘನತರವಹನು ನಿತ್ಯಾತ್ಮ ।
ಒಲಿದರಿಯುತೀ ನೀತಿ ಶಾಂತಿಯು
ತಳೆದು ನಡೆ ಬೀಡಾರಕೀಗಳೆ
ತಳುವ ಬೇಡೆನೆ ಗುಹನು ಸಂತಸದಂದನಾ ಭರತ ॥೩೧॥

ಕಳೆದುದಾ ನಿಶಿ ರಾಮ ಕಥೆಯಲಿ
ಹೊಳೆದ ಪೂರ್ವಾದ್ರಿಯಲಿ ರವಿ ನಡೆ
ದಿಳೆಯನೊಪ್ಪಿಸಲಣ್ಣದೇವಗೆ ಭರತ ಹೊರವಂಟ ।
ಸಲಿಸಿ ಸನ್ಮಾನಗಳ ಗುಹನಂ
ಸೆಳೆದು ನಾವೆಯನೇರಿ ಗಂಗೆಯ
ಕಳೆದು ಪರಿಜನರೊಡನೆ ಭಜಿಸಿದನಮರ ನದಿಯನ್ನು ॥೩೨॥

ಸುರನದಿಗೆ ನಮಿಸುತ್ತ ಮನದಲಿ
ಭರತ ಸೀತಾ ರಾಮಲಕ್ಷ್ಮಣ
ವರರ ನೆನೆಯುತ ರಥವನೊಲ್ಲದೆ ನಡೆದ ಹಾದಿಯನು ।
ಹರಿ ನಡೆದ ಪಾವನದ ನೆಲವಿದು
ಶಿರದಿ ನಡೆವುದೆ ಕೀರ್ತಿ ಸೇವಕ
ಧರುಮವೇ ಬಲುಕಷ್ಟ ಲೋಕದೊಳೆಂದನಾ ಭರತ ॥೩೩॥

ಮೂರು ಝಾಮಕೆ ಸುಪ್ರಯಾಗವ
ಸೇರಿ ಸೀತಾರಾಮರಂದದ
ವಾರಿ ಧವಳ ಶ್ಯಾಮ ಸಂಗಮ ದರ್ಶನದಿ ಸುಖಿಸಿ ।
ನಾರಿಯರು ಬಹುದಾನ ವಿಸ್ತರ
ಪಾರ ಮಹಿಮನ ದರ್ಶನಾತುರ
ಸೂರಿಗಳು ಬೇಡಿದರು ಪೂಜೆಗಳಿಂದಲೊಲಿಸುತಲಿ ॥೩೪॥

ಶ್ಯಾಮಸಿತ ವಾರಿ ತ್ರಿವೇಣೀ
ಧಾಮವೀ ವಿಮಲ ಪ್ರಯಾಗ ವಿ
ರಾಮ ಪಾಪಗಳಿಲ್ಲಿ, ನಿಂದೊಡೆ ವಾಂಛಿತವ ಪಡೆದು ।
ಈ ಮಹಾಧನು ಭರತ ಬೇಡುವ
ರಾಮಭಕ್ತಿಯನೊಂದ ಮತ್ತೀ
ಭೂಮಿ ಭೋಗಗಳೊಲ್ಲೆನೆಂದನು ಲಕ್ಷ್ಮಣಾಗ್ರಜನು ॥೩೫॥

ಜಲಧರನು ಮಳೆಗರೆಯದಾಗಲಿ
ಇಳೆಯು ಬತ್ತಲಿ ನೀರ ಬೇಡದೆ
ಛಲದೊಳೊಂದೇ ಮನದಿ ಚಾತಕ ದಾಹನೆಣಿಸದೆಯೆ ।
ಬಿಳಲಿ ಹಿಮಗಡ್ಡೆಗಳು ಮೇಲಿನ
ಮಳೆಗೆ ಬಾಯೊಡ್ಡಿರುವ ಚಾದಗೆ
ಯೊಲ್ಲು ರಘೂತ್ತಮ ನಾಮರಸವೊಂದಿರಲಿ ತನಗೆಂದ ॥೩೬॥

ಮೊಳಗಿದುದು ಮೃದುವಾಣಿ ಸಂಗಮ
ವೊಲಿದು ಪೇಳ್ದುದು ಭರತ ದುಃಖವ
ನುಳಿದು ಮುನ್ನಡೆ ರಾಮಕಾದಿಹ ನಿನ್ನ ನೋಡಲ್ಕೆ ।
ಒಲಿವ ಹರಿಗಾರಿಹರು ಪ್ರಿಯತಮ
ರಿಳೆಯೊಳಗೆ ನಿನ್ನಂತೆ ರಘುಪತಿ
ಸುಲಭ ನೀನೇ ಧನ್ಯ ಮಾನ್ಯ ನಿಧಾನವಿದು ಜಗದಿ ॥೩೭॥

ಆ ತ್ರಿವೇಣಿಯ ವಾಣಿಯಿಂದ ಪ
ವಿತ್ರನಾದಾ ಭರತ ಶಿರದೊಳ
ಗಾ ತ್ರಿದಿವರಾಗಸದಿ ನೆರೆಯುತ ಸುಮವ ಸೂಸಿದರು ।
ಮಿತ್ರವಂಶಾಗಸದ ರವಿ ಶತ
ಪತ್ರನಯನನ ಮೆಚ್ಚು ಸನ್ನುತಿ
ಪಾತ್ರ ರಾಮಂಗಲ್ಲದಾರಿಗೆ ತಮ್ಮನಿವನಹನು ॥೩೮॥

ಎಂದು ಯತಿಮುನಿ ಸಮಿತಿ ಹೊಗಳುತ
ಬಂದು ಭಾರದ್ವಾಜ ಮುನಿಪದ
ಸಂದು ವಂದಿಸಿ ನಡೆದ ವೃತ್ತಾಂತಗಳ ತಿಳುಹಿದರು ।
ತಂದೆ ಬಾರೈ ರಾಮಸೋದರ
ಬಂದೆಯಾ ಬಾ ಲಕ್ಷ್ಮಣಾಗ್ರಜ
ಬಂದೆಯಾ ಬಾರೆನ್ನುತಪ್ಪಿದ ಮುನಿಪನೊಲವಿಂದ ॥೩೯॥

ಶೋಕವೇಕೆಲೆ ಕಂದನಿವುಗಳ
ಕೈಕೆ ಬಯಸಿದಳಿಲ್ಲ ಘಟಿಸಿತು
ಲೋಕ ಕಲ್ಯಾಣಗಳನೆಸಗಲು ವಿಧಿಯುಮಾಟವಿದು ।
ಬಾ ಕುಮಾರನೆ ಕುಳ್ಳಿರೈ ಚಿಂ
ತಾಕುಲತೆಯುಲಿ ಜನನಿ ನೋವಳು
ಸಾಕು ಸಂಕಟವೇಕೆ ನಿಜವರಿ ಮನದಿ ನೀನೆಂದ ॥೪೦॥

ಅಲ್ಲ ನೀನಪರಾಧಿ ರಾಘವ
ಬಲ್ಲನೀ ಕೃತಿಗಳನು ರಾಜ್ಯವ
ನೊಲ್ಲದಡವಿಯು ಸೀಮೆಗೈತಂದಿಹನು ತಾನೊಲಿದು ।
ಇಲ್ಲ ಕೈಕೆಯದೋಷ ವಿಧಿ ತಾ
ಬಲ್ಲ ಕೈತವದಿಂದ ನಾಲಗೆ
ಯಲ್ಲಿ ದೋಷವ ನುಡಿಸಿ ಸೆಳೆದನು ರಘುವರನ ವನಕೆ ॥೪೧॥

ಬಂದುದೊಳ್ಳಿತು ವಿಹಿತಮಿದು ನಿ
ನ್ನಂದದ ಸಹೋದರರ ಕಾಣೆನು
ಕಂದ ಲೋಕದ ದುಃಖ ಬಾಡಲಿ ನಿನ್ನ ಕೃತಿಗಳಲಿ ।
ತಂದೆ ನಿನ್ನನೆ ನೆನೆವ ಪರಿಪರಿ
ಯಿಂದ ಹೊಗಳುವ ನಿನ್ನ ಸದ್ಗುಣ
ವೃಂದರಾಮುಗೆ ನಿನ್ನ ಮಾತೇ ಮಾತು ಬೇರಿಲ್ಲ ॥೪೨॥

ನಿನಗೆ ಬಂದ ಕಳಂಕ ಲೋಕದಿ
ಕೊನೆಗೆ ಮಂಗಳವಪ್ಪುದದರಿಂ
ವಿನಯಮತಿ ಚಿಂತಿಸದೆ ಬಂದುದ ಸಹಿಸು ಸಮಯದಲಿ ।
ತನಗೊಲಿದ ಭಕ್ತರಲಿ ತಾನಿರು
ವನು ರಘೂತ್ತಮನವರ ಹೃದಯದಿ
ಮನೆಯುಮಾಡುವ ನಿತ್ಯಮೂಡುವ ಜ್ಞಾನ ಶಿಖರದಲಿ ॥೪೩॥

ರಾಮ ಭಕ್ತಿ ಪಿಯೂಷ ಪಾನದೊ
ಳೀ ಮಹಾ ಕಂಟಕವ ಸುಲಭದಿ
ಕೋಮಲಾಂಗನೆ ಕಳಗಿಸಿದೆ ಪಾವನನು ನೀನಾದೆ ।
ಆ ಮಹಾತ್ಮ ಭಗೀರಥಂಗೊಲಿ
ದೀ ಮಹಾನದಿ ಗಂಗೆಯಿಳಿದಳು
ರಾಮಪಿತನವನಿಂಗೆ ಮಿಗಿಲಹ ತನ್ನ ಗುಣಗಳಲಿ ॥೪೪॥

ಸ್ನೇಹ ಸಿಲ್ಕಿ ಪ್ರೇಮದಲಿ ವರ
ದೇಹವಡೆಯುತ ಮನುಜರೂಪದಿ
ರೂಹುಗೊಂಡಿಹ ದಶರಥಗೆ ಸುತನಾದನಿಂದಿನಲಿ ।
ಶ್ರೀ ಹರಿಯ ಘನರೂಪವೀಕ್ಷಿಪ
ದಾಹದಿಂದೆಡಬಿಡದೆ ನೋಡುವ
ನಾ ಹರನು ರಘುರಾಮಲೀಲಾ ಪ್ರೇಮಜಲಧಿಯಲಿ ॥೪೫॥

ಮಡಿಯೆನಾ ಮಿಥ್ಯವನು ಬನದಲಿ
ಜಡತವಸಿಯಾಗಿರುವೆ ಲೋಕದ
ಬಡತನವ ಸಿರಿತನವನರಿಯೆನು ಎನಗರಿಗಳಿಲ್ಲ ।
ಅಡವಿಯೊಳುದಾಸೀನನೆನಿಸುತೆ
ಕಡುತಪದ ಸಾಧನೆಗೆ ದೊರಕಿತು
ಕಡೆಗೆ ಸತ್ಫಲವೆನಗೆ ರಘುಪತಿದರ್ಶನದ ಲಾಭ ॥೪೬॥

ಅದರ ಫಲದಿಂ ನಿನ್ನ ನೋಡಿದೆ
ನೊದಗಿದುದು ಸೌಖ್ಯ ಪ್ರಯಾಗದ
ಬುಧಜನಕೆ ಮೇಣೆನಗೆ ಜಗದೊಳು ಧನ್ಯರೆನಿಸಿದೆವು ।
ಚದುರಮತಿ ನೀ ಧನ್ಯ ರಾಮನ
ವಿದಿತಘನ ಮಾರ್ಗದಲಿ ನಡೆಯುತ
ಪಡೆದು ಬೆಳಗಿದೆ ಜಗವ ನಿನ್ನೀ ಕೀರ್ತಿ ರವಿಯಿಂದ ॥೪೭॥

ಮುನಿಪ ಭಾರದ್ವಾಜನಿಂತೆನೆ
ನನೆಗಳೆಸೆದರು ಸುರರು ಪುಳಕಿತ
ತನುವಿನಿಂದೆರಗಿದನು ಮೌನಿಗೆ ಭರತ ಭಕ್ತಿಯಲಿ |
ಗುಣಘನನು ಸರ್ವಜ್ಞ ಸಂಪೂ
ರಣನು ರಾಮನು ತನ್ನೊಳರಿಯುನೆ
ಅನುಜನಿಂತಿಹನೆಂದು ಗುಣಸಂಪನ್ನ ಹೇಳೆಂದ ||೪೮||

ಪುಣ್ಯ ಪುರುಷನ ಪೆತ್ತು ದಶರಥ
ಪುಣ್ಯಲೋಕವ ಸಾರ್ದ ಸರಿಯಾ
ರಿನ್ನವಗೆ ಜಗದಲ್ಲಿ ನೋಯೆನು ಪಿತನ ಮರಣದಲಿ |
ಪುಣ್ಯಲೋಕಗಳೆನ್ನ ಕೈಬಿಡೆ
ಗಣ್ಯಮಾಡೆನು ಕಾಲು ನಡೆಯಲಿ
ವನ್ಯ ಮಿಗದೊಲು ಚರಿಸೆ ಮೂವರು ಶೋಕಕಾಡುವುದು ||೪೯||

ಮಲಗಿ ತರುಮೂಲದಲಿ ಪರ್ಣಾ
ಯ್ಗಳನು ಮೆಲ್ಲುತ ಧರಿಸಿ ನಾರುಡೆ
ಹಳುವ ರಾಜ್ಯದಿ ಚರಿಪನಾ ರಘುನಾಥನೆನಗಾಗಿ |
ಒಲಿದಳಿದಕೆನಗಾಗಿ ಕೈಕೆಯು
ಕುಲದಮಾನವ ಕಳೆದೆ ರಘುವರ
ನೆಲವನೊಲ್ಲನೆ ಮತ್ತೆ ಬಾರನೆ ಪುರಕೆ ಹೇಳೆಂದ ||೫೦||

ಎನಲು ಭರತನ ದೃಢವ ಮೆಚ್ಚಿದ
ತನಯ ತೊರೆ ಚಿಂತೆಯನು ರಾಮನ
ಘನ ಪದಾಂಬುಜ ಕಾಣ್ಬೆ ನೀನಿಂದಡವಿಯೊಳು ನಡೆದು |
ಅನಘ ದುಃಖವ ಕಳೆವನೆನುತಾ
ಮುನಿಪ ಭರತಗೆ ಸರ್ವರಿಗೆ ಔ
ತಣವಮಾಡಿಸಿ ನಲಿದ ತಣಿಸುತ ರಾಜಪುರಜನರ ||೫೧||

ಸಿದ್ಧಿಗಳು ನರರೂಪದಲಿ ನೆರೆ
ದಿರ್ದು ಸೇವಾದಿಗಳ ಮಾಡಲು
ಬರ್ದಿಲರು ಸುರಧೇನುವೊಡನೈತಂದು ಪಾಕಗಳ
ಸಿದ್ಧಮಾಡಲು ಸವಿದು ಸುಖದಿಂ
ದಿರ್ದು ದಣಿದರು ಮುನಿಯ ಪುಣ್ಯದೊ
ಳಿರ್ದ ಮಹಿಮೆಯ ಹೊಗಳಿ ಮೆಚ್ಚಿದ ಭರತ ಪದುಳದಲಿ ||೫೨||

ನೆರೆದ ಸಂಪದವೇ ಚಕೋರಿಯು
ಭರತನಾದ ಚಕೋರಪಕ್ಷಿಯು
ವರ ಭರದ್ವಾಜಮುನಿಯೆಂಬ ನಿಷಾದನಂದಲ್ಲಿ |
ಇರುಳ ಪಂಜರದಲ್ಲಿ ಬಂಧಿಸೆ
ಗುರುವಿನಾಜ್ಞೆಗೆ ಸಿಲ್ಕಿ ರಾಮನ
ಚರಣಕಮಲ ಸ್ಮರಣೆಯಿಂ ನೂಕಿದನು ರಾತ್ರಿಯನು ||೫೩||

ಮರುದಿವಸ ಗಂಗೆಯಲಿ ಮಿಂದನು
ಪರಿಜನರ್ವೆರಸುತ್ತ ಮುನಿಪದ
ಕೆರಗುತಾಣತಿವಡೆದು ರಾಮಪದಾಬ್ಜದರ್ಶನಕೆ |
ತೊರೆದು ರಥವಾಹನವನಣ್ಣನ
ಚರಿತೆಯೊರೆವುತ ಚಿತ್ರಕೂಟಕೆ
ಕರದಿ ಕರವಿರಿಸುತ್ತ ನಡೆದನು ಭರತ ಗುಹನೊಡನೆ ||೫೪||

ಜಲಧರನು ಸುಖಛಾಯೆಯಿತ್ತನು
ಒಲಿದು ಸುಖದಿ ಸಮೀರ ಬೀಸಿದ
ಹಳುವದಲಿ ಪಥಿಕರಿಗೆ ಸಂತಸ ಪಯಣಗತಿಯಿತ್ತು |
ಸುಳಿಯಲಿಲ್ಲೀ ಸುಖವು ರಾಮನು
ಹಳುವದಲಿ ಹೋಹಾಗ. ಭರತನು
ಸುಳಿಯೆ ಮಾಡಿತು ತಾನೆ ಮಾರ್ಗದೊಳವನು ನಡೆಯುತಿರೆ ||೫೫||

ಭರತ ಗುಹರಾ ಮೈತ್ರಿ ನಾಕದ
ಸುರರನೊಲಿಸಿತು ಕುಸುಮ ವರ್ಷವ
ಗರೆದುಘೋಯೆಂದವರ ತುತಿಸಿದರಂಬರದಿ ನಿಂದು ।
ಹಿರಿಯನಂಘ್ರಿಯ ನೆನವು ರಾಮನ
ಚರಿತ ಕಥನವೆ ಕಥನ ಮತ್ತೇ
ನರಿಯ ಮನದಲಿ ಕಾಣನಿತರವ ರಾಮನನ್ನುಳಿದು ॥೫೬॥

ಭರತನಿಂತೈತರಲು ರಾಮಗೆ
ಮರಳಿ ರಾಜ್ಯವನೀಯೆ ಭಯದಿಂ
ಸುರಪ ರಾಕ್ಷಸ ಹನನ ಕಾರ್ಯವದೆಂತು ನಡೆಯುವುದೊ ।
ಸುರಗುರುವೆ ಮತ್ತಾವ ತಂತ್ರದಿ
ಭರತ-ರಾಮರ ಮಿಲನ ತಪ್ಪಿಸು
ಹರಿಯು ಹಳುವದಿ ಭರತರಾಜ್ಯದಿ ನಿಲ್ಲುವಂತೆಸಗು ॥೫೭॥

ಎನಲು ಶಕ್ರನು ನಕ್ಕು ಸುರಗುರು
ನಿನಗೆ ಸಾವಿರ ಕಣ್ಗಳೇತಕೆ
ಕೊನೆಗೆ ಕೆಡುವುದು ಕಜ್ಜ ತಂತ್ರವನೆಸಗೆ ಭರತನೊಳು ।
ತನಗೆ ತಪ್ಪೆಣಿಸಿದರೆ ಕೋಪಿಸ
ನನಘ ಭಕ್ತರೊಳೆರಡ ಬಗೆದಡೆ
ಮುನಿವ ರೋಷಾಗ್ನಿಯಲಿ ದಹಿಸುವ ರಾಮ ನಿವಿಸದಲಿ ॥೫೮॥

ಸಮಗುಣಂಗನುರಾಗ ರೋಷದ
ಗಮನವಿಲ್ಲವು ಪಾಪಪುಣ್ಯದಿ
ಮಮತೆಗೊಳ್ಳನು ದೋಷಗಳ ತಾನೆಣಿಸ ರಘುರಾಮ ।
ಅಮಲ ಭಕ್ತಾಭಕ್ತ ಹೃದಯದಿ
ಸಮತೆಯಿಂದಿರುತಿಹನು ಭಕ್ತರ
ಮಮತೆಗೀವನು ತನ್ನ ಸುಲಭದಿ ಡಿಂಗರಿಗನಾಗಿ ॥೫೯॥

ನೆನೆಯೆ ಮೋಸವ ಕಾರ್ಯಕೆಡುವುದು
ವನಕೆ ಬಂದಾ ರಾಮ ಮುಂದಿನ
ಹನನ ಕಾರ್ಯವನರಿಯನೇ ಭೂಭಾರವಿಳಿಸುವನು ।
ಅನುಜಗತಿಯನೊರೆದುಪಾಯದಿ
ಗುಣವನೆಸಗುವ ಮುಂದುಗೆಡದಿರು
ನೆನೆವ ಸರ್ವರ ಹಿತವನಾವಗಮೆಂದ ದೇವಗುರು ॥೬೦॥

ಸುಯ್ದು ಭರತನು ತನ್ನದೃಷ್ಟವ
ಬಯ್ದು ಕಂಬನಿ ಜಲದಿ ಮಾರ್ಗವ
ತೊಯ್ದು ರಾಮಧ್ಯಾನದಿಂ ನಾಲ್ದೆಸೆಯ ದನಿಗೊಳಿಸಿ ।
ಒಯ್ದು ಯಮುನಾ ತೀರಕೆಲ್ಲರ
ಗೆಯ್ದು ಮಜ್ಜನ ಬಾಷ್ಪವಾರಿಯ
ಹೊಯ್ದು ಪರಿವಹ ಪೆರ್ಚಿಸಿದನಾ ಭರತ ಕಳವಳದಿ ॥೬೧॥

ಅಂದು ಯಮುನಾತೀರದಲಿ ನಲ
ವಿಂದ ರಾತ್ರಿಯ ಕಳೆದು ಪರಿಜನ
ಸಂದಣಿಯು ನಿಂದಿರಲು ಗುಹನಾಜ್ಞಾನುಸಾರದಲಿ ।
ತಂದು ನಾವೆಯ ನಿಲಿಸರೆಲ್ಲರು
ಬಂದು ನದಿಯಂ ಕಳೆದು ಮಜ್ಜನ
ದಿಂದ ಹೊಂಪುಳಿವಡೆದು ನಡೆದರು ಪಯಣಗತಿಗಳಲಿ ॥೬೨॥

ಭರತ ಶತ್ರುಹರನ್ನು ನೋಡಿದ
ತರುಣಿಯರು ಕರೆದೊರ್ವರೊರ್ವರ
ತರಳೆ ನೋಡಾ ರಾಮಲಕ್ಷ್ಮಣರಂತೆ ತೋರುವರು ।
ಹರೆಯದಲಿ ವರ್ಣದಲಿ ರೂಪದೊ
ಳರರೆ ನಡೆನುಡಿ ಶೀಲ ತೇಜದಿ
ಸರಿ ಸಮಾನರು ಮೇಣ್ ಸಹೋದರರಹರೆ ಹೆಚ್ಚೇನು ॥೬೩॥

ಜಾನಕಿಯ ಜೊತೆಯಿಲ್ಲ ನಾರುಡೆ
ಮೇಣು ಶಿರದಲಿ ಜಟೆಯ ಕಾಣೆವು
ಮ್ಲಾನಮುಖರಾಗಿಹರು ಸೇನಾ ಸಹಿತ ಬಂದಿಹರು ।
ಮೌನವುತಿಯನು ಪರಿಸುತವರಂ
ಮಾಣಿಸನು ವನವಾಸ ರಾಮಗೆ
ಜಾಣೆ ರಾಮಾನುಜರು ನಡೆದಿಹರೆಂದಳೊರ್ವಸಖಿ ॥೬೪॥

ಎಂದು ಕೈಕೆಯ ಕೃತ್ಯವೊರೆಯುತ
ಲಂದು ರಾಜ್ಯವನುಳಿದು ರಾಘವ
ಬಂದು ಹಳುವದಿ ಪಯಣವೋದುದ ನೆನೆಯುತಿನ್ನೊರ್ವಳ್ ।
ಇಂದು ಹಿರಿಯಗೆ ಧರೆಯನೊಪ್ಪಿಸಿ
ಹಿಂದಕೈತರೆ ರಾಜಬಿರುದುಗ
ಳಿಂದ ನಡೆದಿಹ ಭರತನೆಂದಾ ತರುಣಿಯರು ನುಡಿದು ॥೬೫॥

ದೂಷಿಪುದು ತರವಲ್ಲ ಕೈಕೆಯು
ದೋಷಿಯೇ ವಿಧಿನಿಯತಿ ಕಾಲಗೆ
ತೋಷವಿದು ಸಂಘಟಿಸಿ ನಮಗಿಂತಾಯ್ತು ಸತ್ಫಲವು ।
ದೋಷಿಗಳು ಮತಿಮಲಿನರಾವು ವಿ
ದೂಷಕರು ಧರ್ಮಾರ್ಥದೂರರು
ಯೋಷೆಯರು ನಾವಾಗಿರಲು ಕರುಣವನು ತೋರಿಹನು ॥೬೬॥

ಅಜಸುತನ ಸುತ ರಾಮನಾಮವ
ಭಜಿಸಿ ಸಂತತ ಬಂಧು ಸೇನಾ
ವ್ರಜವ ನಡೆಸುತ ತೀರ್ಥ ಮುನ್ಯಾಶ್ರಮವನೊಳಹೊಕ್ಕು ।
ಭಜನ ಮಜ್ಜನ ವಂದನೆಗಳಿಂ
ನಿಜ ಶರೀರವ ಕೆಡಹಿ ನಿಲ್ಲದೆ
ಸುಜನವಂದ್ಯನ ಮಾರ್ಗವಿಡಿಯುತ ಭರತ ಮುನ್ನಡೆದ ॥೬೭॥

ವನದಿ ಕೋಲಕಿರಾತ ವಟುಯತಿ
ಯಣುಗ ವೈಖಾನಸರ ಕಾಣಲು
ಮಣಿದು ಮನುತಿಯೊಳವರ ನುಡಿಸುತ ಮಧುರವಾಣಿಯಲಿ |
ಜನನಿ ಜಾನಕಿ ರಾಮಲಕ್ಷ್ಮಣ
ವನದಿ ತಂಗಿದ ತಾಣ ತೋರುವು
ದೆನುತ ಕೇಳುವನವರ ವಿನಯದಿ ಮನವೊಲಿಸಿ ನಗಿಸಿ ||೬೮||

ರಾಮನಂ ಸುಕ್ಷೇಮದಲಿ ವನ
ಧಾಮದಲಿ ತಾಂ ಕಂಡನೆಂದಡೆ
ನೇಮದಿಂದವನನ್ನು ಲಕ್ಷ್ಮಣನಂತೆ ಗೌರವಿಸಿ |
ಪ್ರೇಮದಿಂದಾಲಿಂಗಿಸುವ ರಘು
ರಾಮನೆಂತಿಹನೇನ ಹೇಳುವ
ನಾ ಮಹಾತ್ಮನ ಕಂಡ ಭಾಗ್ಯದ ಪುಣ್ಯವೊರೆಯೆಂದು ||೬೯||

ಇಂತು ನಿಶಿದಿನ ಪಯಣಗತಿಯೊಳ
ನಂತರಾಮನ ವನಕೆ ಬರುತಿರೆ
ಸಂತಸದಿ ಗುಹ ಚಿತ್ರಕೂಟವ ತೋರ್ದ ಭರತಂಗೆ |
ಮುಂತೆಸವ ಮಂದಾಕಿನೀ ನದಿ
ಕಂತುಜನಕ ಸ್ನಾನದಿಂ ಪು
ಣ್ಯಾಂತರಂಗದಿ ಪರಿವ ತೀರ್ಥವ ನೋಡು ನೋಡಲ್ಲಿ ||೭೦||

ಅಲ್ಲಿ ಮಂದಾಕಿನಿಯ ತೀರದಿ
ಚೆಲ್ವ ಗುಡಿಸಲು ಕಾಣದೇ ನೋ •
ಡಲ್ಲಿ ಮೂವರು ನಿಂದ ವೈಕುಂಠಮದು ನಡೆಯೆನಲು |
ಚೆಲ್ಲಿ ದೇಹವ ನಮಿಸಿ ಹೊರಳಿದ
ರಲ್ಲಯೋಧ್ಯಾಪುರಕೆ ಮರಳಿದ
ಸಲ್ಲಲಿತಗುಣ ರಾಮಚಂದ್ರಮನೆಂಬ ರೀತಿಯಲಿ ||೭೧||

# ವಿಶ್ರಾಮ ೧೨

ಸೋ॥ ನಡೆದನುಜ ಗುಹರೊಡನೆ ಪಯಣದೊ
ಳಡವಿಯಲಿ ರಘುವರನ ಕಂಡನು
ಕೆಡದು ಚರಣದಿ ರಾಮಭಕ್ತಿಯ ಸೂರೆಮಾಡಿದನು ॥

ರಾಮ ಚರಣದಿ ಭಕ್ತಿ ಮನದಲಿ
ರಾಮನಾಮ ಸ್ಮರಣೆ ಸಂತತ
ರಾಮದರ್ಶನವೊಂದು ಮತ್ತಿನ್ನೇನ ಕಾಣದಿರೆ ।
ರಾಮಮಯವಾಯಸ್ತಾ ವನಾಂತರ
ರಾಮರೂಪದಿ ಸಕಲ ಖಗಮೃಗ
ರಾಮಗಿರ್ಯಾಶ್ರಮವ ತೋರುತಲತ್ತ ಹಾರುವುವು ॥೧॥

ಚಿತ್ರಕೂಟದಿ ರಾಮನಿದ್ದನು
ಮಿತ್ರನುದಯಿಪ ಮುನ್ನ ಸೀತೆ ವಿ
ಚಿತ್ರ ಕನಸನು ಕಂಡಳಂದಾ ಭರತ ಬಳನದಲಿ ।
ಛತ್ರ ಚಾಮರ ತೊರೆದು ಪರಿಜನ
ಮಿತ್ರ ಬಾಂಧವ ಸಹಿತ ಭಯದಲಿ
ಮಿತ್ರಕುಲಪತಿಯೆಡೆಯ ಸೇರುತ ಶರಣುವೋದಂತೆ ॥೨॥

ಅಳುತ ಕೈಕೆ ಸುಮಿತ್ರೆ ವರ ಕೌ
ಸಲೆ ರಘೂಜನ ಮುಂದೆ ನುಡಿಯದೆ
ಬಳಲಿ ಕಂದಿದ ವೊಗದಿ ನಿಂದಿರುವಂತೆ ಕನಸಾಯ್ತು ।
ಇಳೆಯ ಮಗಳಾ ಸ್ವಪ್ನವರಿಯುತ
ಲೊಲಿದುದೇ ಕಡುಕಷ್ಟ ಲಕ್ಷ್ಮಣ
ಮುಳಿದುದೇ ವಿಧಿ ದುಃಖವಾರ್ತೆಯ ಕೇಳ್ವೆವಾವಿಂದು ॥೩॥

ಎಂದು ರಾಮನು ಶಿವನ ಚರಣ
ದ್ವಂದ್ವ ಪೂಜಿಸಿ ಸುರರ ಸಂತರ
ವಂದಿಸಿದ ನುಡಿವುತ್ತಲುತ್ತರದಿಶೆಯ ನೋಡಿದನು |
ಎಂದು ಕಾಣದ ಧೂಳಿ ಗಗನವ
ನಿಂದಡರ್ದುದು ಭಯದಿ ಖಗಮೃಗ
ನೊಂದು ಬಂದೋಡುತಿವೆ ಲಕ್ಷ್ಮಣ ನೋಡಿದಚ್ಚರಿಯು ||೪||

ಎನಲು ನೆರೆದ ಕಿರಾತರೆಂದರು
ವಿನಯಮತಿ ಬರುತಿಹನು ಭರತಂ
ಜನರ ಸೇನಾ ಬಂಧು ಬಾಂಧವ ತಾಯಿಯರ್ವೆರಸಿ |
ಅನುಜ ಬಹನೇಕಿಂದು ಸರ್ವರ
ವನಕೆ ತಹನೇಕೆಂದು ಚಿಂತಿಸಿ
ಮನದಿ ಕಾತರಗೊಂಡ ರಾಘವ ಬಂದುದಂ ನೆನೆದು ||೫||

ಬರುವ ರಾಜ್ಯವನಿರಿಸೆ ತನ್ನೊಳು
ಮರೆತು ಪಿತನಾಜ್ಞೆಯನು ನಗರಿಗೆ
ಮರಳುವರೆ ವರಕೈಕೆ ಬಂದಳೆ ಸಂತವಿಸೆ ತನ್ನ |
ಇರಲಿ ತನ್ನಾಜ್ಞಾನುವರ್ತಿನಿ
ಭರತನೆನ್ನುತ ನೆನೆಯೆ ಲಕ್ಷ್ಮಣ
ನೊರೆದ ತನ್ನೊಳು ಕಂಡ ವಿಷಯವನಣ್ಣದೇವಂಗೆ ||೬||

ಕೇಳೆಲೆ ಪ್ರಭು ನಿನ್ನ ದೂತನ
ಕಾಳು ನುಡಿಯಂ ಮುನ್ನಮನ್ನಿಸಿ
ಮೇಲನೊರೆವೆನ್ನೀ ಸ್ವತಂತ್ರವ ಗಣಿಸದಾಲಿಪುದು |
ಪಾಲಿಸುವೆ ಹದಿನಾಲ್ಕು ಲೋಕವ
ಕಾಲಗುಂ ಕಾಲನಹೆ ಸಕಲ ಜಗ ಜೀ
ವಾಳಿಗಳ ಪ್ರೀತಿಯಲಿ ನಿನ್ನವರೆಂದು ನೋಡುತಿಹೆ ||೭||

ಪರಮ ಕರುಣಾಮೂರ್ತಿ, ಮಾನವ
ಸಿರಿಯಮದ ರಾಜ್ಯಮದ ಹೆಚ್ಚಲು
ಮೆರೆವನಾಗಸ ಭೂಮಿಯೊಂದೆನುತಂಧನಾಗುತಲಿ ।
ಭರತನಾದೊಡೆ ನಿನ್ನಭಕ್ತಿಗೆ
ಹಿರಿಯ, ಸುಜ್ಞಾನದಲಿ ಶಂಕರ,
ಧರೆಯು ತಿಳಿದಿಹುದೀ ವಿರಾಗಿಯ ಸಾಧುಸದ್ಗುಣವ ॥೮॥

ದೊರೆಯಲೀ ರಾಜ್ಯಾಧಿಕಾರವು
ಭರತನಾದೊಡವೇನು ಧರ್ಮದ
ವರ ರಹಸ್ಯವ ಸಾಧುಮರ್ಯಾದೆಗಳ ಮರೆಯುವನು ।
ಇರಲಿರಲು ವನದಲ್ಲಿ, ಪಟ್ಟಕೆ
ಹಿರಿಯ ನೀನಹುದೆಂಬ ಕಾರಣ
ಶಿರಕೆ ಶೂಲವನೊಡ್ಡಿ ಭೂಮಿಯನಾಳ್ವ ಬಗೆಯುಂಟೆ ॥೯॥

ಮಾಡಿ ನಿಷ್ಕಂಟಕನ ರಾಜ್ಯವ
ರೂಢಿಸಲು ಶತ್ರುಘ್ನ ಸಹಿತೀ
ಮೂಢ ಸೈನ್ಯ ವರೂಥ ಧನು-ಶಸ್ತ್ರಾಸ್ತ್ರಗಳ್ವೆರಸಿ ।
ಕಾಡಿಗೈತಹನೇಕೆ ನಿಮ್ಮಡಿ
ಕೇಡ ಮಾಡದೆ ಬಿಡನು ಮಣ್ಣಿನ
ಬೀಡಿನೀ ಮೋಹದಲಿ ದೇವರಪಾದ ಮರೆತಿಹನು ॥೧೦॥

ಏಕೆ ತುರಗ ಪದಾತಿ ರಥ ಗಜ
ವೇಕೆ ಮನದಲಿ ದುಷ್ಟ ಕಲ್ಪನೆ
ಯೇಕೆ ಸೈನ್ಯ ಸಮೇತ ಬರುವನು ರಾಮನನ್ನರಸಿ ।
ಲೋಕದೀ ಸಂಪದದ ಮದದಲಿ
ಸಾಕೆನಿಸದಿರೆ ಭರತನೊರ್ವನ
ದೇಕೆ ಯತಿಮುನಿಯಾದೊಡಂ ಮದದಿಂದ ಮರೆಯುವನು ॥೧೧॥

ಗುರು ಸತಿಯ ರಮಿಸಿದನು ಸೋಮನು
ಹೊರಿಸಿ ಪಲ್ಲಕ್ಕಿಯನು ನೃಪ ಭೂ
ಸುರರ ಭುಜದಲಿ ಕೆಟ್ಟು ಕಳೆದನು ಶಕ್ರ ಪದವಿಯನು ।
ಸಿರಿಯಮದದಲಿ ಕಾರ್ತವೀರ್ಯನು
ತೊರೆದನಸುವನು ಬಹುದನರಿಯದೆ
ಭರತ ಕೆಡುವನು ಕೆಣಕಿ ಲೋಕದಗರುವ ದೇವರನು ॥೧೨॥

ತೊರೆದು ರಾಜ್ಯವ ರಾಜದೊಡಿಗೆಯ
ತೊರೆದು ಪಣ್ಣಾಗ್ರಯ್ಗಳನು ಮೆಲ್ಲುತ
ಚರಿಪ ನೀನಸಹಾಯನೆಂಬುದನರಿತು ಕೊಲುವುದಕೆ ।
ಅರೆದು ನುಂಗುವೆನಿವನ ಲಕ್ಷ್ಮಣ
ನಿರವ ಮರೆದನೆ ಮನದೊಳಾಗಳೆ
ಭರತರಾಯನ ಕೊರಳ ಹಿಂಡಿದೆ ಬಲವ ನೋಡೆಂದ ॥೧೩॥

ಕೇಳಿದನುಚಿತವಲ್ಲ ಭರತನ
ಕೋಳುವೋಗಿಸಿ ಮದದಿ ಮೆರೆಯುವ
ಬಾಳ ಸೀಳುವೆ ಚಾಪ ಬಾಣಾವಳಿಯ ತಾರೆನಗೆ ।
ಭಾಳನಯನನ ಮರೆವೊಗಲಿ ಸೇ
ನಾಳಿ ಸಹಿತಲಿ ದಿಂಡುಗೆಡಹುವೆ
ಕೋಳಿಮರಿಗಳ ಹದ್ದು ಹಾರಿಪ ತೆರದಿ ನಿಮಿಷದಲಿ ॥೧೪॥

ರೋಷಭೀಷಣನಾದ ಲಕ್ಷ್ಮಣ
ಘೋಷಿವಡೆದುದು ಲೋಕ ಭಯದಲಿ
ಮೋಸಮಾದುದು ನಿಜವನರಿಯದೆ ಸಮರ ಹೂಡುವನು ।
ಆಸೆಯೋ ಭರತಂಗೆ ರಾಜ್ಯದಿ
ಮೋಸ ಬಗೆವನೆ ರಾಮಚಂದ್ರಗೆ
ಬೀಸಿದನೆ ವಿಧಿಮಾಯೆ ಮತ್ತೆಯು ಹರಮಹಾದೇವ ॥೧೫॥

ಅನಿತರಲಿ ನಭವಾಣಿ ಕೇಳ್ದುದು
ತನಯ ಲಕ್ಷ್ಮಣ ನಿಜವನರಿಯದೆ
ಮುನಿಯದಿರು ನೀ ಶರವತೊಡದಿರು ರಣವನೊಡ್ಡದಿರು ।
ಘನಪರಾಕ್ರಮಿ ನೀನು ನಿನ್ನಯ
ಘನತೆಯರಿವವರಾರು ಭರತನ
ಗುಣವ ಬಲ್ಲವರಾರು ಮುಳಿಯದಿರೆಂದು ಮೊಳಗಿದುದು ॥೧೬॥

ಆಹುದು ಲಕ್ಷ್ಮಣ ರಾಜ್ಯಸಿರಿಮದ
ತಹುದು ದುರ್ವಾಸನೆಯನಾದೊಡೆ
ಕುಹಕವೆಣಿಸನೆ ಭರತನಹಿತನೆ ನಮಗೆ ಮುಳಿವವನೆ ।
ಸಹಿಸು ಕೋಪವು ತರವೆ ತಮ್ಮನ
ಮಹಿಮೆಯರಿಯುವೆ ಬಂದ ವಿಪಿನಕೆ
ಮಹಿಯ ಸಂಪದವೊದೆದು ಪಟ್ಟವನೊಪ್ಪಿಸಲ್ಕೆನಗೆ ॥೧೭॥

ಬರಲಿ ವಿಧಿ ಹರಿಹರರ ಪದವಿಯು
ಗರುವಗೊಳ್ಳುವನಲ್ಲ ನಾಕದ
ಸಿರಿಗೆ ಸೋಲುವನಲ್ಲ ಮತ್ತಿದ ಸರಕುಮಾಡುವನೆ ।
ಇರುಳೊಗೆಯೆ ಹಗಲಲ್ಲಿ ಮೇಘವ
ನುರು ಗಗನ ನುಂಗಿದರು ಧಾರುಣಿ
ತೊರೆಯೆ ಶಾಂತಾಗುಣವ ರಾಜ್ಯಕೆ ಭರತನೊಡಬಡನು ॥೧೮॥

ಮೇರು ಚಲಿಪುದೆ ಮಶಕ ನಾದಕೆ
ವೀರನಹ ವೈರಾಗಿ ಸೋಲ್ವನೆ
ಧಾರುಣಿಯ ಸಂಪದಕೆ, ಬಂದಿಹನೊಲಿದು ಪ್ರೀತಿಯಲಿ ।
ಕ್ಷೀರವಂ ಹೀರಿಹನು ವಿಷಮಯ
ವಾರಿಯಂ ನೂಂಕುತ್ತ ಭರತ
ಕ್ಷೀರವಾರಿಧಿಯಿಂದಲತುಲ ಪ್ರೇಮಮಯನೆಂದ ॥೧೯॥



ಭರತ ಜನ್ಮವ ತಾಳದಿದ್ದೊಡೆ
ಪರಮ ಧರ್ಮ ಧುರೀಣರಾರಿಹೆ
ರರರೆ ಧರಣಿಯ್ಯ ಮೇಲೆ ಧರ್ಮಪರಾಯಣರು ಬಹರೆ |
ಅರಿವರಾವರು ಭರತರಾಯನ
ಚರಿತೆಗಳ ಸೌಮಿತ್ರಿ ರವಿಕುಲ
ಪರಮಘನ ಚರಿತಾರ್ಥವೆನಿಸಿತ್ತವನ ಜನ್ಮದಲಿ ||೨೦||

ಎಂದ ವಾಣಿಯ ಕೇಳ್ದು ಸಂತಸ
ದಿಂದ ಸೀತಾಲಕ್ಷ್ಮಣರು ಹರಿ
ತಂದ ಭರತನ ಕಾಣುವಾತುರದಿಂದ ನಿಂದಿರಲು |
ಬಂದನುತ್ಸಾಹದಲಿ ನದಿಯಲಿ
ಮಿಂದು ಮಂದಾಕಿನಿಯ ಜಲದಲಿ
ತಂದೆ ರಘುಪತಿಯಂಘ್ರಿ ದರುಶನಕೆಂದು ಹೊರವಂಟ ||೨೧||

ನಿಲಿಸಿ ಪರಿಜನ ಮಂತ್ರಿ ಸೇನಾ
ವಳಿಯನಲ್ಲಿಯೆ ಗುರುಗಳಾಣತಿ
ತಳೆದು ತಾಯ್ಗಳ ನಮಿಸಿ ಗುಹ ಶತ್ರುಘ್ನರೊಡಗೂಡಿ |
ಒಲಿವನೇ ರಾಘವನು ಧಾರುಣಿ
ಗಳುಪಿ ಮಾತೆಯ ವರಕೆ ಸೋಲುತ
ಛಲಕೆ ಮಣಿದವನೆನುವನೋ ಮೇಣೆನ್ನ ಕ್ಷಮಿಸುವನೊ ||೨೨||

ತನಗೆ ಸೇವಕನೆಂದು ಬಗೆವನೊ
ಕೊನೆಗೆ ದುರ್ಗುಣನೆಂದು ನೋಡನೊ
ಮನುಕುಲೋತ್ತಮನಂಘ್ರಿತಲದಲಿ ಶರಣುವೊಕ್ಕವರ |
ಮನದ ದುಃಖವ ಕಳೆವನಾ ಹರಿ
ಯೆನಗೆ ತಾನೊಲಿಯದಿರ ಭಕ್ತರೊ
ಳೆನಘ ಸಂತತ ಸೇವೆಗೊಳ್ಳುವ ಕ್ಷಮಿಸದಿರನೆಂದ ||೨೩||

ಹಿಂದಡಿಯನಿಡುತಿದ್ದ ಜನನಿಯ
ಕುಂದುಗಳ ನೆನೆಯುತ್ತ ಪುನರಪಿ
ಮುಂದಡಿಯನಿಡುತಿದ್ದ ಭಕ್ತಿಯ ಬಲದ ಧೈರ್ಯದಲಿ |
ಇಂದೆನಗೆ ರಘುರಾಮನೇ ಗತಿ
ಯೆಂದು ಹಿರಿಯನ ಗುಣವ ನೆನೆಯುತ
ಲಂದು ಬಂದನು ನಡೆದು ಶೀಘ್ರದಿ ಹರಿಯ ಹೊರೆಗಾಗಿ ||೨೪||

ಶಕುನಗಳ ನೋಡುತ್ತಲೊಮ್ಮೆಗೆ
ಸುಖವು, ಕಡೆಯಲಿ ದುಃಖವಪ್ಪುದು
ಪ್ರಕಟವಿದು ತಾನೆಂದನೀಕ್ಷಿಸಿ ಗುಹನು ಭರತಂಗೆ |
ಭಕುತಿಯೇ ಗತಿಯೆಂದು ನೋಡುತ
ವಿಕಿರಿದುಪಲಾಳಿಗಳ ಭಕ್ತ
ಪ್ರಕರ ಪಾಲಕನಾಳ್ವ ವನಮಂ ಪೊಕ್ಕ ನಲವಿನಲಿ ||೨೫||

ಸರುವ ಸಂತಸದಿಂದ ತುಂಬಿರೆ
ಹರಿಯು ನೆಲೆಸಿಹ ವಿಪಿನವುತ್ತಮ
ಧರಣಿಪಾಲಕನಾಳ್ವ ರಾಜ್ಯದಪೋಲು ಸುಖದೊಳಿರೆ |
ವರ ವಿವೇಕ ನೃಪಾಲ, ಮಂತ್ರೀ
ಪರಮಘನ ವೈರಾಗ್ಯ ಶಮದಮ
ವುರುವ ಸೇನಾಧಿಪತಿ ವನರಾಜ್ಯದಲಿ ಬೇರುಂಟೆ ||೨೬||

ಸುಭಟರೇ ಯಮನಿಯಮ ಮತ್ತಾ
ಸುಬಲ ಪರ್ವತ ರಾಜಧಾನಿಯು
ಅಬಲೆ ಶಾಂತಿ-ಸುನೀತಿ ಶುಚಿ ರಾಣಿಯರು ನರಪತಿಗೆ |
ವಿಬುಧನೃಪ ಸರ್ವಾಂಗ ಭೂಷಿತ
ನಭಯ ರಾಮಾಶ್ರಯದಿ ಸುಖಗಳ
ನುಭವ ಪಡೆಯುತಲಿದ್ದ ಸಾನದಂದಲಿ ತಪ್ಪದೆಯೆ ||೨೭||

ಆ ವಿವೇಕ ನೃಪಾಲ ದುಷ್ಕ್ರಮ
ತೀ ವಲಯಮಂ ಜಯಿಸಿ ರಾಜ್ಯವ
ಪಾವನಂ ಗೆಯ್ದಿಹನು ಕಂಟಕಗಳನು ಕಿತ್ತೊಗೆದು ।
ಭಾವಿಸಿದ ಸುಖ ಸಂಪದಂಗಳು
ತೀವಿದತಿಶಯದಿಂದ ತುಂಬಿರ
ಲಾ ವಿರಾಗಿಯು ಕಂಡ ರಾಮಾಶ್ರಮದ ಸೊಬಗುಗಳ ॥೨೮॥

ಬರುತ ನೋಡಿದನಾಶ್ರಮಂಗಳ
ಪುರವ ನಗರ ಗ್ರಾಮವರಮನೆ
ಪರಮಘನ ಸೌಧಂಗಳನು ಗುಡಿಸಲು ಕುಟೀರಂಗಳ ।
ಚರಿಪ ಶುಕಪಿಕ ಪಕ್ಷಿ ನಿಕರವ
ಕರಡಿ ಕಪಿ ಹುಲಿ ತೋಳ ಗಜಗಣ
ತೊರೆದು ನಿಜವೈರವನು ನೆರೆದಿರೆ ವನದಿ ಮೈತ್ರಿಯಲಿ ॥೨೯॥

ಝರಿಯ ನಿಸ್ವದ ಮದಗಜದ ರವ
ಹರಿಯು ಗರ್ಜನೆ ಮೊಳಗುತಿರಲಾ
ವರವನದಿ ಚಾತಕ ಚಕೋರ ಮರಾಳ ಕಲಹಂಸ ।
ಚರಿಸಿ ಶುಕಪಿಕ ಮುದದಿ ಹಾಡುತ
ಮರದಿ ಕುಳಿತು ಮನೋಜ್ಞ ದನಿಯಲಿ
ಕರೆದು ಪಾಂಥರ ದಣಿವ ತೊಡೆವುವು ಸುಖದ ಗಾಯನದಿ ॥೩೦॥

ತುಂಬಿಗಳ ಝೇಂಕಾರ ನವಿಲುಗ
ಳಂಬರದಿ ಕುಣಿದಾಡೆ ಮಂಗಳ
ತುಂಬಿದುದು ಲೋಕದಲಿ ಮೂಡಿತು ಸೌಖ್ಯ ಸರ್ವರಲಿ !
ತುಂಬಿ ಪೂ ಪಣ್ಗಳ್ಗಳಿಂ ತರು
ಬಿಂಬ ಮಾದುದು ಸುಖಕೆ ಧರಣಿಯು
ನಂಬಿಸುತ್ತಲಿ ನಗಿಸಿ ಕಷ್ಟವ ತೊಡೆದು ಹಿತಗೆಯ್ಯು ॥೩೧॥

ಅರಸಿ ಬರುತಿಹನಿಷ್ಟಮೂರ್ತಿಯ
ಚರಣದೆಸೆವಿಡಿಯುತ್ತ ರಘುವರ–
ಗಿರಿಯ ದರ್ಶನವಾಗೆ ಪುಳಕೋದ್ಗಮದ ತನಿಸುಖದಿ |
ನೆರೆದು ಸಾವಿರ ವರ್ಷ ತಪದಿಂ
ಕರೆಯೆ ಕಾಣದ ರಾಘವೇಂದ್ರನ
ಸಿರಿಮೊಗದ ಸೌಭಾಗ್ಯ ನೆನೆಯುತ ಸುಖವನನುಭವಿಸಿ ||೩೨||

ಭರತ ತರುರಾಜಿಗಳ ನೋಡಿದ
ನೆರಳನೀವುವು ಮಾವು ಸಂಪಗೆ
ಕರಡಿ ಜಂಬು ತಮಾಲ ಕಕ್ಕಟೆ ಹಲಸು ಮೊದಲಾದ |
ಅರಳಿದಲರಿಂ ಬಿರಿದ ಫಲದಿಂ
ಧರೆಗಿಳಿಯುತಿವೆ ಮಧುವನೊಸರುತ
ತರತರದ ಫಲಪುಷ್ಪ ಸಂಕುಲವೀ ವನದೊಳಿಂದ ||೩೩||

ಹೊಳೆವ ವೃಕ್ಷಾವಳಿಯ ಮಧ್ಯದೊ
ದೆಳೆ ಚಿಗುರಿನಿಂ ನಿಂದ ವಟತರು
ಫಲಕುಸುಮ ಭಾರದಲಿ ಸರ್ವರ ಮನವ ಸೆಳೆಯುವುದು |
ಎಲೆಗಳಾಗಸ ಬಣ್ಣ ಪಣ್ಗಳು
ಹೊಳೆಯೆ ಕೆಂಬಣ್ಣದಲಿ ನಾಲ್ಮೊಗ
ಕಲೆಸಿ ತಿಮಿರಾರುಣವ ತಾಣವನಿದನು ವಿರಚಿಸಿದ ||೩೪||

ಕಟ್ಟೆ ವಟಮೂಲದಲಿ ಮನೆಯ
ನ್ನಿಷ್ಟ ದೇವರು ಕುಳಿತಿಹರು ಜಟೆ
ಗಟ್ಟೆ ವನಮುನಿಯಂತೆ ವೇದಾವಳಿಯ ನೀತಿಯಲಿ |
ಇಟ್ಟು ಹಿಟ್ಟಿನ ರಂಗವಲ್ಲಿಯ
ನೆಟ್ಟು ಸೊಗದಲಿ ತುಳಸಿಯಂ ಕ
ಣ್ಣಿಟ್ಟು ಕಾವಳು ಸೀತೆ ಲಕ್ಷ್ಮಣ ಪೊರೆವ ತರುಗಳನು ||೩೫||

ನೋಡು ವಟ ಛಾಯೆಯಲಿ ಜಗಲಿಯ
ಮಾಡಿಹಳು ಸೀತಾರಮಣಿ ಮಾ
ತಾಡುತಿಹನಾ ಜಗಲಿಯಲಿ ಮುನಿಗಳೊಳು ರಘುವರನು |
ಹಾಡಿ ಕತೆಗಳ ಕೇಳಿ ದುಃಖವ
ದೂಡಿ ದಿನಗಳ ನೂಕುತಿರುವರು
ನೋಡು ರಾಮಾಶ್ರಮವನೆಂದನು ಗುಹನು ಭರತಂಗೆ ||೩೬||

ಎನಲು ಹೊಂಪುಳಿವಡೆದು ಮರೆತನು
ತನುವ ಕಣ್ಣೀರ್ಗಳಲಿ ಕಾಣದೆ
ಮನದ ಹರುಷದಿ ಮುಗುಳು ನಗೆಯಲಿ ಕಾಲುತೊಡರುತಿರೆ |
ಅನುಜ ಗುಹರೊಡಗೂಡುತಾತುರ
ಮನದಿ ರಾಮಸ್ಮರಣೆಯಲಿ ಬರೆ
ಮಣಿದು ವಿನಯದಿ ನೆಲದಿ ಮೂಡಿದ ರಾಮಪದಗಳಿಗೆ ||೩೭||

ಭರತನಿರವನು ಕಂಡು ಖಗತತಿ
ಹರಿಯ ಗುಣಗಾನವನು ನುಡಿವೊಲು
ಧರಣಿಜಾ ಲಕ್ಷ್ಮಣರ ಸುಕ್ಷೇಮಗಳ ಪೇಳ್ವವೊಲು |
ನೆರೆದು ಸರಗೆಯ್ಯುತಿರೆ ಮಿಗಗಣ
ವುರುತರ ಪ್ರೇಮದಲಿ ನೋಡುತ
ತಿರುಗಿ ರಾಮಾಶ್ರಮವ ತೋರುವುವತ್ತಮೊಗಮಾಡಿ ||೩೮||

ಹೊಗುತ ಪುಣ್ಯಾಶ್ರಮವ ಹೃದಯದಿ
ಧಗಧಗಿಪ ಕಡುಶೋಕವಾರಿತು
ಸಿಗಲು ದರ್ಶನ ಯೋಗಿ ತತ್ವ ವಿರಾಗ ದರ್ಶಕನ |
ಸೊಗದಿ ಲಕ್ಷ್ಮಣ ರಾಮನಿದಿರೊಳು
ನಗುತ ಕುಳ್ಳಿರೆ ಭರತ ಕಂಡನು
ಗರುವದೇವನು ಕೊಡುವನುತ್ತರ ತಮ್ಮಗನುನಯದಿ ||೩೯||

ಶಿರದಿ ಜಟೆ ಸೊಂಟದಲಿ ಮುನಿಪಟ
ಕರದಿ ಶರ ಹೆಗಲಲ್ಲಿ ಕಾರ್ಮುಕ
ಮೆರೆಯೆ ವೇದಿಕೆಯಲ್ಲಿ ಸಾಧು ಸಮಾಜ ಕುಳಿತಿರಲು ।
ಸ್ಮರನು ಮುನಿವೇಷದಲಿ ತತ್ತ್ವವ
ನರಸಿ ರತಿವೆರಸುತ್ತಲಿರುವೊಲು
ಮೆರೆದನಾ ರಘುರಾಮ ಸೀತಾ-ಲಕ್ಷ್ಮಣರ್ವೆರಸಿ ॥೪೦॥

ಕಾಣನೀ ಲೋಕವನು ಭರತನು
ಕಾಣನಿತರವ ರಾಮನಲ್ಲದೆ
ಶೂನ್ಯಮಾಗಿಹುದವನಿ ರಘುವರನೊಬ್ಬನನ್ನುಳಿದು ।
ಏನಿದಣ್ಣನ ಕುರುಹ ನೋಡುವ
ತಾಣವೆಲ್ಲೆಡೆಯಲ್ಲಿ ಭರತನ
ವಾಣಿಯೇ ರಾಮಜಪ ವನದೊಳಗೆಲ್ಲ ನಾಮಮಯ ॥೪೧॥

ಬಂದು "ರಕ್ಷಿಸನಾಥನಾಥ ಮು
ಕುಂದ ಕಾಯೈ"ಯೆಂದು ತತ್ಪದ
ವೃಂದದಲಿ ಹೊಡೆಮರಳಿ ಕಂಬನಿಯಿಂದ ಕಾಲ್ತೊಳೆಯೆ ।
ಬಂದ ಭರತನ ಹೃದಯದೊಳವೊ
ಕ್ಕಂದು ಕಾಣಿಸಿಕೊಂಡ ಮನದಲಿ
ತಂದೆ ರಾಘವ ಮರೆತ ವಾತ್ಸಲ್ಯದಲಿ ಬಾಹ್ಯವನು ॥೪೨॥

ಭರತನಡಿಗಳಿಗೆರಗಿ ಲಕ್ಷ್ಮಣ
ಕರೆಯುತಣ್ಣನ ತಂದೆ ರಾಮಾ
ವರಜನೆರಗುವ ನೋಡೆನಲ್ಕಾ ರಾಮನೆಚ್ಚರದಿ ।
ಕರದ ಕಾರ್ಮುಕ ಬಾಣ ಕೈಯಿಂ
ದುರುಳೆ ಧೈರ್ಯವು ಸರಿಯೆ ತಮ್ಮನ
ಹಿರಿದು ಮನ್ನಿಸಿ ನೊಸಲನೆತ್ತಿದನೊಸೆದು ನಸುನಗುತ ॥೪೩॥

ಎರಡು ದೇಹಗಳಾತ್ಮವೊಂದೇ
ಭರತ–ರಾಮರ ಮಿಲನ ಲೋಕಕೆ
ತೆರದಿಹುದೆ ಮಂಗಳವ ವಿವರಿಸಲಾರು ಬಲ್ಲಿದರು ।
ಹರಿಯ ಮಾಯಾ ನಾಟಕವ ಕವಿ
ಯರಿಯು ಬಲ್ಲನೆ ಶೇಷಗಳವೇ
ಸರಸತಿಗೆ ನಿಲುಕದಿರಲುಳಿದರ ವ್ಯಾತಿಗೆಟಕುವುದೆ ॥೪೪॥

ಕಲೆತು ಸುರರಾಗಸದಿ ಭರತಂ
ಗೊಲಿದು ರಘುವರ ಪುರವ ಸೇರ್ವನೊ
ನೆಲದ ಭಾರವ ಕಳೆಯೆ ಮರೆವನೊ ಹಳುವ ತೊರೆಯುವನೊ ।
ತಿಳಿಯ ಬಲ್ಲವರಾರೆನುತ ಮಿಗೆ
ಹಲುಬುತಿರೆ ಸಂತವಿಸಿದನು ಬ
ರ್ದಿಲರ ವರಗುರು ರಾಮ-ಭರತರ ಮಹಿಮೆಯೊರೆಯುತಲಿ ॥೪೫॥

ನುಡಿಸಿ ರಿಪುಸೂದನನ, ಪದದಲಿ
ಕೆಡೆದ ಗುಹನನ್ನಪ್ಪಿ ಸರ್ವರ
ನೊಡನೆ ವಂದಿಸಿ ಮನ್ನಿಸಿದನೆಲ್ಲರನು ಸೌಮಿತ್ರಿ ।
ಪೊಡವಿ ಸುತೆಯಂ ಕಂಡು ಶತ್ರುಹ
ನೊಡನೆ ಚರಣಕ್ಕೆರಗಿ ಹರಕೆಯ
ಪಡೆದು ಹರ್ಷವ ತಾಳ್ದ ಭರತನು ಪರಮಭಕ್ತಿಯಲಿ ॥೪೬॥

ಆರು ನುಡಿಯರು ಕೇಳರಾರುಂ
ಸೂರೆಯಾಯ್ತು ಪ್ರೇಮ ಹಳುವದ
ಪಾರ ಮೌನವನೊಡೆದು ರಾಮಂಗೆರಗಿ ಗುಹನುಡದ ।
ಭೂರಮಣ ನಿಮ್ಮಡಿಯ ಕಾಣಲು
ಸಾರಿಹುದು ಮುನಿನಿಕರ ಪುರಜನ
ರಾರಯಿದು ಸುಕ್ಷೇಮ ಮೂವರು ಮಾತೆಯರು ಸಹಿತ ॥೪೭॥

ಬಂದನೇ ಗುರುವೆಂದು ಶತ್ರುಹ
ನಿಂದಿರೆಯ ಬಳಿ ನಿಲಲು ರಾಮನು
ಬಂದು ಲಕ್ಷ್ಮಣ ಭರತ ಗುಹರೊಡಗೂಡಿ ನಮಿಸಿದನು ।
ತಂದೆ ನಡೆದೈತಂದೆಯಾ ಏ
ಳೆಂದು ಮುನಿಯೆತ್ತಿದನು ಮೂವರ
ನಂದು ಮನ್ನಿಸಿ ಹೊಗಳಿದನು ರಾಘವನ ಮಹಿಮೆಗಳ ॥೪೮॥

ರಾಮನಪ್ಪಿದ ಗುಹಪವಿತ್ರನು
ಭೂಮಿಯೊಳಿನುತ ನೊಸಲನೆತ್ತಿದ
ಭೂಮಿಯಮರನು ಹೊಗಳಿ ಮಹಿಯಿಂ ಸುಧೆಯ ಕೊಳ್ವಂತೆ ।
ರಾಮ ಭಜನೆಗೆ ಮಿಗಿಲದಾವುದು
ರಾಮ ಭಕ್ತಿಗೆ ಸರಿಯದಾವುದು
ರಾಮದೂತರೆ ಜಗದಿ ಪಾವನರೆಂದು ಹೊಗಳಿದನು ॥೪೯॥

ನೋಡಿ ಬಂದಿಹ ಜನರ ಹೃದಯದ
ಗೂಢಗಳನರಿಯುತ್ತ ತಾ ಮಾ
ತಾಡಿಸಿದನೆಲ್ಲರನು ಕರುಣಾಪೂರ್ಣ ದೃಷ್ಟಿಯಲಿ ।
ನೀಡಿ ಸರ್ವರ ಬಯಕೆ ಭಕ್ತರ
ಪಾಡುಗಳ ಬಲ್ಲವನು ಹರುಷದ
ಗಾಢಿಕೆಯಲಾ ದೇವ ಮೆರೆವನು ತನ್ನ ಹಿರಿಮೆಯನು ॥೫೦॥

ಸೊರಗಿ ಬಾಡಿದ ಬಳ್ಳಿಯೊಲು ಕರ
ಕರಗಿ ಕಂದಿದ ತಾಯಿ ಮೂವರ
ಹೊರೆಗೆ ಬರುತಾ ಕೈಕೆಗೆರಗಿದ ಮೊದಲು ಸಂತವಿಸಿ ।
ಕೊರಗದಿರು ವಿಧಿ ನಿಯಮದಂತೀ
ಕರುಮ ಮೂಡಿತು ಹಣೆಯ ಬರಹವ
ನೊರೆಸಲಾಪರೆ ದುಃಖಮಿದಕೇಕೆಂದ ರಘುರಾಮ ॥೫೧॥

ಎರಗಿದನು ಕೌಸಲೆ ಸುಮಿತ್ರೆಯ
ಚರಣಯುಗಳಿಗೆ ಹರುಷನುಡಿಗಳ
ನೊರೆದು ದೈವಾಯತ್ತವಾಯ್ತಿದು ಲೋಕವುದರಿಂದ ।
ಬರಿದೆ ದೂಷಿಪುದಲ್ಲ ಬಂದುದ
ನರಿತು ಸಹಿಪುದೆ ಧರ್ಮವೆಂದೊಡೆ
ತರಳರಿರ್ವರನೆತ್ತಿ ಮುಂಡಾಡಿದರು ಮುದದಿಂದ ॥೫೨॥

ಅನುಜ ಜನನೀ ಜನರ ಸಹಿತಾ
ಮನುಕುಲೋತ್ತಮ ರಾಮಚಂದ್ರನು
ಮುನಿವಸಿಷ್ಠನ ಕರೆದನಾಶ್ರಮಕೆಯ್ದೆ ಕರುಣದಲಿ ।
ಮುನಿಯನುಜ್ಞೆಯ ಪಡೆದು ಸರ್ವರು
ವನದ ಮಂದಾಕಿನಿಯ ಶೋಭಾ
ನನವ ನೋಡುತ ನಡೆದು ರಾಮಾಶ್ರಮವ ಸೇರಿದರು ॥೫೩॥

ಬಂದು ಋಷಿಪತ್ನಿಯರ ಸಹಿತಲ
ರುಂಧತಿಯು ಜಾನಕಿಯ ಸಂತಸ
ದಿಂದ ಕಾಣಲ್ಕೊಡನೆ ಗುರುಸತಿ ಚರಣ ಕೆರಗಿದಳು ।
ಬಂದ ನಾರೀವೃಂದವೆಲ್ಲವ
ನಂದದಿಂ ಮನ್ನಿಸುತ ಹಿರಿಯರ
ವಂದಿಸುತ ಮಾತಾಡಿಸಿದಳೆಲ್ಲರನು ಪದುಳದಲಿ ॥೫೪॥

ಅತ್ತೆಯರ ಕಾಲ್ವಿಡಿಯೆ ಕೋಮಲೆ
ಗೆತ್ತಲೀ ವಿಧಿ ಕಷ್ಟವಿತ್ತನೆ
ನುತ್ತ ಕಂಬನಿಗರೆದು ತೊಡೆಯೊಳು ಸೊಸೆಯ ಕುಳ್ಳಿರಿಸಿ ।
ಎತ್ತಲೊಯ್ದಿತ್ತೊ ರಾಜಕುವರಿಗೆ
ಕುತ್ತವೆಸಗಿತು ಕೋಮಲಾಂಗಿಯ
ನೊತ್ತೆಯಿಟ್ಟಿವೆ ವಿಪಿನಕಕಟಾಯೆಂದು ಮರುಗಿದರು ॥೫೫॥

ಬಲೆಗೆ ಬಿದ್ದಿಹ ಹಂಸದಂದದಿ
ಲಲನೆಯರು ನಡುಗಿದರು ನೋಯುತ
ಲಿಲಿಲಿ ವಿಧಿ ನೀನೇನ ಗೆಯ್ದಿಹೆಯೆಂದು ನುಡಿಯುತ್ತ ।
ನೆಲದಿ ವಿಧಿ ಲಿಖಿತವನು ಸಂತಸ
ದೊಳನುಭವಿಸುವುದೆಂದು ನೀತಿಯು
ನೆಲದ ಮಗಳಿಗೆ ಪೇಳಿ ಸಂತವಿಸಿದರು ಮರುಕದಲಿ ॥೫೬॥

ತಳೆದು ಧೈರ್ಯವ ಮನದಿ ಜಾನಕಿ
ಹಳುವದಲಿ ತನಗೇನು ಕಷ್ಟದ
ಕಳಕಳಿಕೆಯಿಲ್ಲೆಂದು ನುಡಿದಳು ತಾಯ್ವಿರಡಿಗೆರಗಿ ।
ಕೆಲವರನು ನಮಿಸಿದಳು ಕೆಲವರ
ನೊಲುಮೆಯಿಂದಾಲಿಂಗಿಸಲು ವರ
ಲಲನೆಯರು ಹರಸಿದರು ಸೀತೆಯು ಸೊಗದಿ ಬಾಳೆಂದು ॥೫೭॥

ಸೀತೆ ಮತ್ತಾ ರಾಣಿಯರು ಮನ
ಸೋತು ಬಾಡಿರಲರಿತು ಗುರು ಮನ
ದಾತುರವ ಕುಳ್ಳಿರಿಸಿ ಸರ್ವರ ಜಗದ ಜಂತ್ರಿಯಲಿ ।
ಈ ತಿರೆಯ ಗತಿಗಳನು ಮಾಯಾ
ತೀತ ದೇವನ ಕಪಟನಾಟಕ
ಮಾತನೊರೆದನು ತತ್ವಗೂಢವ ಪೇಳ್ದನೆಲ್ಲರಿಗೆ ॥೫೮॥

ಜನಕ ನೀ ಲೋಕಕ್ಕೆ ನಿನ್ನಯ
ಜನಕ ದಶರಥ ನಿನ್ನ ನಾಮವ
ನೆನೆದು ಪಾವನನಾದ ನಿತ್ಯಾತುಮನ ತಾ ಕಂಡ ।
ತನುವನೊಗೆದಾ ಸ್ವರ್ಗಧಾಮದಿ
ಮನೆಯ ಮಾಡಿದ ನಿನ್ನ ನಾಮನೆ
ಕೊನೆಯುಸಿರು ನೃಪಮೌಳಿಗಾಯ್ತೆನೆಂಬೆ ರಘುರಾಮ ॥೫೯॥

ಅಳಿದನೇ ಹಾಯೆಂದು ಹೊರಳಲು
ಹಲವು ಬಗೆಯಲಿ ಶಾಂತಿಪೊರೆಯು
ತ್ತಳಲಿ ನೂಕಿದ ರಾಮ ಲಕ್ಷ್ಮಣ ಸೀತೆಯರನೊಸೆದು ।
ತೊಳಲ ತೊರೆಯುತ್ತಶನ ಜಲಗಳ
ನೆಲದೊಡೆಯನಂ ನೆನೆದು ನೇಮದಿ
ಕಳೆದರಾ ದಿನ ರಾಯ ದಶರಥ ಗುಣವ ಕೊಂಡಾಡಿ ॥೬೦॥

ಮುನಿಯನುಜ್ಞೆಯ ಪಡೆದು ಜನಕನಿ
ಗನಘ ಸಂಸ್ಕಾರಗಳ ಮಾಡಿದ
ನನುಜ ಲಕ್ಷ್ಮಣಗೂಡಿ ಮಂದಾಕಿನಿಯ ತೀರದಲಿ ।
ಜನರಿಗಂದದ ರೂಪದೋರುತ
ವನಜಪದದರ್ಶನವ ನೀಯುತ
ಲಿನಕುಲೋತ್ತಮ ರಾಮನಿರ್ದನು ಪರ್ಣಶಾಲೆಯಲಿ ॥೬೧॥

---

## ವಿಶ್ರಾಮ ೧೩

ಸೂ॥ ವಿರಚಿಸುತ ಪಿತೃಯಜ್ಞ ರಘುವರ
ಭರತನಾ ಮೊರೆ ಕೇಳ್ವ ಮತ್ತಾ
ನರಪ ಜನಕನು ಬರಲು ವಿಪಿನಕೆ ಭರದಿ ಕರೆತಂದ ॥

ಪಿತನ ಸಂಸ್ಕಾರಗಳ ಮುಗಿಸುತ
ವಿತತ ಪಾತಕ ತಿಮಿರ ಭಾಸ್ಕರ
ನತಜನಾಪ್ತ ಪುನೀತನಾದನು ಕರ್ಮಗಳ ರಚಿಸಿ ।
ಸತತ ರಾಮಸ್ಮರಣೆ ಮಾಡಲು
ಹುತವಹದು ಪಾತಕ ವನಾಂತರ
ಕ್ಷಿತಿಯೊಳೀ ಹರಿನಾಮವೇ ಸತ್ಕರ್ಮಗಳಿಕೆ ಮೂಲ , ॥೧॥

ದಿನವೆರಡು ಸಾಗಿದುದು ನೋಡಿದ
ನನಘ ಕಷ್ಟದಿ ಕಾಲ ಕಳೆವರು
ಜನರು ಜಲಪಾನದಲಿ ಫಲಮೂಲಾದಿಗಳ ತಿನುತ ।
ಇನತಪಕೆ ತಲೆಯೊಡ್ಡಿ ನೆಲದೊಳು
ತನುವಿಗಾಶ್ರಯಮರರೆ ನೊಂದರು
ತನಗೆ ತಿತ್ರಾತ್ಮವನು ಭಕ್ತರು ಬರಿದೆ ಹಾಯೆಂದ ॥೨॥

ಗುರುವರನೆ ನೀ ತೆರಳಯೋಧ್ಯಾ
ಪುರಕೆ ಸರ್ವರ್ವೆರಸಿ ನಗರವ
ಪೊರೆಯುವವರಾರಿಲ್ಲ ರಾಜ್ಯಮನಾಥವಾಗಿಹುದು ।
ಮರಳಬೇಹುದು ದೇವ ಕೋಸಲ
ತರುಣಿ ಕಂಬನಿಗರೆಯದಂತಾ
ಧರೆಯ ಪಾಲಿಸು ವತ್ಸ ಭರತಗೆ ನೀತಿಯನ್ನೊರೆದು ॥೩॥

ಧರುಮ ವಾರಿಧಿ ಸೇತು ಕರುಣಾ
ಭರಿತ ನಿನ್ನೀ ಗುಣಕೆ ನುಡಿಯಿದು
ತರವು ಕೇಳಾದೊಡೆಯು ಶೋಕಾನ್ವಿತರು ದಿನವೆರಡು ।
ಪರಮ ಪುರುಷನೆ ನಿನ್ನ ನೋಡುತ
ವಿರಹ ದುಃಖವ ಮರೆತು ಸಂತಸ
ಭರದಿ ಕಳೆವರು ಕಾಲಮಿಲ್ಲರಲೆಂದನಾ ಮೌನಿ ॥೪॥

ಜಲದಿ ಮುಳುಗುವ ನಾವೆಯೊಳ್ ಜನ
ರಳಲುವಂತಾ ಭಕ್ತರೆಲ್ಲರು
ಬಳಲಿದರು ರಾಘವನ ನುಡಿಯಿಂ ಮತ್ತೆ ವಿರಹಮಿದು ।
ಸೆಳೆಯಬಹುದೇ ತಮ್ಮನೆನ್ನುತ
ಬಳಲೆ ಸಮಯೋಚಿತದ ನುಡಿಯಲಿ
ಜಲಧಿಯಲ್ಲನುಕೂಲ ಗಾಳಿಯು ತೆರದಿ ಸುಖಿಸಿದರು ॥೫॥

ತರಣಿಯುದಯಿಪ ಮುನ್ನ ನಿದ್ರೆಯ
ತೊರೆದು ನದಿಯಲಿ ಮಿಂದು ಸಂಧ್ಯಾ
ಕರುಮ ನೆರವೇರಿಸುತ ಸೀತಾರಾಮ ಚರಣಗಳ |
ಭರದೊಳೆರಗುತ ರಾಮಗಿರಿಯಲಿ
ತಿರುಗಿ ವಿಪಿನದ ಶೋಭೆಯಂ ಕಂ
ಡರಿತು ಹೊಗಳುತ ಪುರವ ಮರೆತರು ಸನ್ನಿಧಿಯೊಳಿರ್ದು ||೬||

ಹಲವು ಜಾತಿಯ ತರುಲತೆಗಳಾ
ವಲಯದಲಿ ಫಲಪುಷ್ಪ ಭಾರದಿ
ನೆಳಲನೀಯುತ ತಂಪು ಸೂಸುತಲಿಹವು ನಿತ್ಯದಲಿ |
ಹೊಳೆಯೆ ಶಿಲೆ ಮುಖದೋರಿ ಸರಸಿಜ
ಸಲಿಲ ಪಾತ್ರದ ಬೆಡಗ ನೋಡಿದೊ
ಬೆಳೆದ ತೃಣಪಲ್ಲಂಗ ಮೃದುವಾಗಿಹುದು ವನದಲ್ಲಿ ||೭||

ಕೊಳದ ಕಮಲದಿ ತುಂಬಿ ನಿರ್ಮಲ
ಜಲದಿ ನೀರ್ವಕ್ಕಿಗಳು, ಮಧುರಸ
ಕಳುವ ಜೇನ್ನೊಳು, ಕೋಕಿಲಾಲಾಪದಲಿ ಹಾಡುತಿರೆ |
ತೊಳಲಿ ಕೋಲಕಿರಾತ ಭಿಲ್ಲರು
ಎಲೆಯ ಪಾತ್ರೆಯೊಳಿರಿಸಿ ಮಧುವ
ನ್ನೊಲಿದು ತಂದೊಟ್ಟಿದರು ಸವಿಫಲ ಕಂದ ಮೂಲಗಳ ||೮||

ಅವರು ವಿನಯದಿ ವಿವಿಧ ಫಲಮೂ
ಲವನು ಭೇದಿಸಿ ರುಚಿಯನೊರೆವರು
ಸವಿದು, ಧನವನ್ನಿತ್ತು ಕೊಂಬರು ಭರತನಾ ಜನರು |
ಅವನಿಜಾಪತಿಯಡಿಗೆ ತದ್ರ
ವ್ಯವ ಸಮರ್ಪಿಸಿ ದೈವ ಬಂಧುಗ
ಳಿವಗೆ ದೇವರು ಸೀಚಲಿಮುಗಿದೆ ಪರಮ ದುರ್ಲಭವು ||೯||

ಮರಳು ಕಾಡೊಳು ಸುರನದೀ ಜಲ
ದೊರೆವುದೇ ರಘುರಾಮನೇ ದೊರೆ
ತಿರೆಗೆ ಭಕ್ತರು ನಿಮ್ಮ ನೋಡಿ ಕೃತಾರ್ಥರಾದೆವಲಾ ।
ಹರಿಯ ಸಹವಾಸದಲಿ ದುರ್ಗುಣ
ತೊರೆದುದೆಮ್ಮನು ಕಾಣದೋಡಿತು
ದುರಿತ ನಿಮ್ಮವೊಲಾವ ಭಕ್ತರ ಕಾಣೆವೆನುತಿರಲು ॥೧೦॥

ಅವರ ಭಕ್ತಿಯ ಮೆಚ್ಚಿ ದೇವರಿ
ಗವನಿಯೋ ಸಾಮ್ರಾಜ್ಯ ಜಾತಿಯ
ಬವಣೆಯುಂಟೇ ಲೋಕವೇ ತನ್ನುದರದಲ್ಲಿರಲು ।
ಅವನು ಮೆಚ್ಚಿದರಾಯ್ತು ತಾನೇ
ಭವ ಸಮುದ್ರವ ಹಾಯ್ಸಿ ಪೊರೆವನು
ಅವನಿಜಾಪತಿಗಡವಿ ನಗರಿಗಳೆಂಬ ತೆರನುಂಟೆ ॥೧೧॥

ಹಲವು ರೂಪವ ಜಾನಕಿಯು ತಾ
ತಳೆಯುತತ್ತೆಯರನ್ನು ಸೇವಿಸಿ
ಹಲವು ಪರಿಯುಪಚರಿಸಿ ನೋಳ್ಪಳು ತುಷ್ಟಿಪಡಿಸುವಳು ।
ತಿಳಿದನೀ ಮರ್ಮಗಳ ರಾಘವ
ನಿಳೆಯ ಮಗಳನು ಮೆಚ್ಚಿ ಹೊಗಳಿದ
ನೆಲದೊಳಿವಳೀ ಘನಮಹಿಮೆಗಳನರಿವರಾರೆನುತ ॥೧೨॥

ತಿಳಿದು ಸೀತಾರಾಮರಿರ್ವರೊ
ಳಲಘು ಗುಣಗಳ ಕೈಕೆ ನಾಚಿದ
ಳೊಲಿದು ಪಶ್ಚಾತ್ತಾಪ ಮೂಡಿತು ಮುಂದೆ ಗತಿಯೇನು ।
ಕೊಲುವನೇ ಯಮನೆನ್ನ ! ಕೊಳ್ಳದು
ನೆಲವು ಬಾಯ್ಬಿಟ್ಟೆನ್ನ ಲೋಕದಿ
ಹಳಿವ ಹೊತ್ತನು ದೂರಿ ದೈವವನಳಿದೆ ಸತ್ವವನು ॥೧೩॥

ನರಕದಲಿಯೆಡೆಯುಂಟೆ ತಿಳಿದಿದ
ತೊರೆದ ದಶರಥನೆನ್ನ ಕೊನೆಯಲಿ
ಹರಹರಾ ತಪ್ಪಾಯ್ತು ರಾಘವ ಮರಳನೇ ಪುರಕೆ ! ।
ದುರುಳಿ ಕುಬುಜೆಯ ಬಯ್ದು ಫಲವೇ
ನರರೆ ಕೆಡಿಸಿದಳೆನ್ನ ಮತಿಯಂ
ಹರಿಯು ರಾಮಗೆ ವಿಪಿನ ತೊರೆಯುವ ಮತಿಯ ನೀಡಿಂದು ॥೧೪॥

ಎಂದು ಪರಿಪರಿಯಿಂದ ಹಲುಬುತ
ಲಿಂದುಮುಖಿಯಿರಲತ್ತ ದುಗುಡದಿ
ಬಂದ ಭರತ ವಸಿಷ್ಠ ಮುನಿಯನ್ನರಸಿ ಪದಕೆರಗಿ ।
ತಂದೆ ರಾಘವನೆಂದು ಮರಳುವ
ದಂದುಗವ ಪರಿಹರಿಸಿ ನೀ ಸಲ
ಹೆಂದು ಕಂಬನಿದುಂಬಿ ಹೊರಳಲು ಮುನಿಪನಿಂತೆಂದ ॥೧೫॥

ಅವನು ಸತ್ಯವ್ರತನು ರಾಮೋ
ದ್ಭವವು ಮಂಗಳ ಹೇತು ನೀತಿಯೊ
ಳವನು ಪಾಲಿಪ ವೇದಮರ್ಯಾದೆಗಳನನುಸರಿಸಿ ।
ಅವಗೆ ಗುರುಪಿತೃ ಮಾತೃ ವಚನವೆ
ಸವಿಯು ಶಿಷ್ಟರ ಸಲಹಿ ದುಷ್ಟರ
ಸವೆವ ರಾಮನ ಪರಮ ಲೀಲಾನಟನ ರಂಗಮಿದು ॥೧೬॥

ಸ್ವಾರ್ಥ ನೀತಿ ಪ್ರೀತಿ ವರಪರ
ಮಾರ್ಥದರ್ಥವ ರಾಘವನೊಲು ಯ
ಥಾರ್ಥದಿಂದರಿಯುತ್ತ ಪೇಳ್ವವರಾರು ಲೋಕದಲಿ ।
ಕೂರ್ತು ವಿಧಿ ಹರಿಹರರು ನಡೆದಿ
ಷ್ಟಾರ್ಥ ಪಡೆವರು ವಾಯುರವಿಶಶಿ
ಯರ್ತಿಯಲಿ ಸೇವಿಸುತ ಪಡೆದರು ಶಕ್ತಿ ಜಗದೊಳಗೆ ॥೧೭॥

ಆದಿಶೇಷ ಸುರೇಶ ಶಂಕರ
ವೇದ ಸಿದ್ಧಿ ಸುಯೋಗ ಸಿರಿ ಮೊದ
ಲಾದ ವಿವರಗಳೆಲ್ಲ ರಾಮನ ಹಿತದಿ ಜಗದೊಳಿರೆ ।
ಆದಿಪುರುಷನ ಗುಣವನನುಸರಿ
ಸೀ ದುರಂತ ಕಳಂಕ ಕಳೆವುದು
ಸಾಧು ಮಾಧವನೊಲುಮೆಯೊಂದೇ ಮಾರ್ಗವೆಮಗೆಂದ ॥೧೮॥

ಪುರಕೆ ಕರೆದೊಯ್ದಣ್ಣದೇವರ
ಮರಳಿ ಕೋಸಲರಾಜ್ಯವರ್ಪಿಸಿ
ಚರಣತಲದಲಿ ಲೋಕ ಸಂತಸಗೆಯ್ವುದೇ ಮಾರ್ಗ ।
ಕರೆವುಪಾಯವ ಮಾಡು ಮೇಣೀ
ತರಣಿಕುಲ ಸಂಭವರು ಸತ್ಯದಿ
ಧರುಮ ಕರುಮದೊಳೊರ್ವಗಿಂತಿನ್ನೊರ್ವ ಮಿಗಿಲಹನು ॥೧೯॥

ಹಿರಿಯ ವಂಶಜರಿದಕೆ ಕಾರಣ
ಪರಮಘನ ತನುವೀವ ನಾಲ್ಮೊಗ
ನರಿವಿದಾರರು ನಮ್ಮ ಪೂರ್ವಜರೇನ ಹೇಳುವೆನು ।
ಒರೆಸಿ ದುಃಖವವ ಲೋಕ ಹಿತವ
ನ್ನೊರೆದು ರಾಮನ ಮರಳಿ ರಾಜ್ಯದೊ
ಳಿರಿಸಿ ಸಲಹುವ ಭಾರ ನಿನ್ನದು ತಂದೆಯೇಳೆಂದ ॥೨೦॥

ಎಲೆಲೆ ಸರ್ವ ಸಮರ್ಥ ನೀನೇ
ತಿಳಿಯುತಿವುಗಳನೆಲ್ಲ ಯುಕ್ತಿಯ
ತಿಳಿಯದನ ಕೇಳ್ವುದೆನೆ ನಿಜ ದೌರ್ಭಾಗ್ಯವಹುದೆನಲು ।
ಒಲಿದು ವಾತ್ಸಲ್ಯದಲಿ ಮುನಿಪತಿ
ಕಳಕಳಿಕೆ ಬೇಡಿನ್ನು ನಿನಗಿ
ನ್ನಳಲ ಶಿಖಿಯಾರಿದುದು ರಾಮನ ಮರಳು ಬಃ

ತರಳ ಕೇಳ್ಳೈ ಬುದ್ಧಿವಂತರು
ತೊರೆವರರ್ಥವ ರಾಜ್ಯ ಸಿರಿಗಳ
ಧರೆಯ ವಿಶಸನ ನೋಡಲಾರದೆ ದೂರಸಾರುವರು ।
ತರಳ ನಿನಗೀ ರಾಮಭಕ್ತಿಯು
ಭರದಿ ಘನವೈರಾಗ್ಯ ಮೂಡಿರೆ
ತೊರೆದು ರಾಜ್ಯವ ರಾಮನೊಲು ವನವಾಸವಿಹುದಿನ್ನು ॥೨೨॥

ಒರೆಯಲಿದ ಮನಬಾರದಿರೆ ಸೋ
ದರಗೆ ಮರುಗುವ ನಿನ್ನ ಕಷ್ಟಕೆ
ಹಿರಿದು ದುಃಖವ ಕಾಣೆ ಶತ್ರುಹನೊಡನೆ ನೀನಿನ್ನು
ಧರಿಸು ರಾಮನ ದೀಕ್ಷೆ ಹಳುವದಿ
ಚರಿಸುವುದು ಹದಿನಾಲ್ಕು ವತ್ಸರ
ಹರಿಯು ಸಿಂಹಾಸನವನೇರುವನಾಗ ತಿಳಿಯೆಂದ ॥೨೩॥

ಹರುಷಮುಕ್ಕಿತು ಶೋಕವಾರಿತು
ಭರತ ಶತ್ರುಹನೊಡನೆ ಹಿಗ್ಗಿದ
ಗುರುವೆ ನೀನೆಂದಂತೆ ತೊಳಲುವೆ ಶತ್ರುಹಂವೆರಸಿ ।
ತೆರಳು ರಾಘವನೊಡನೆ ಲಕ್ಷ್ಮಣ
ಧರಣಿಜಾತೆಯ ಸಹಿತ ಕೋಸಲ
ಧರೆಯ ಸಾರ್ವುದು ಹಳುವವೇ ನಮಗಾಯ್ತು ನಿರ್ವಾಹ ॥೨೪॥

ಭರತನೇ ಘನವಾರಿನಿಧಿ ಮುನಿ
ಯೊರೆದ ನೀತಿಯೆ ವನಿತೆ, ತೀರದೊ
ಳಿರುತ ಬೆಮೆಗೊಂಡಿಹಳು ವನಧಿಯ ದಾಂಟಲೆಂತೆಂದು ।
ದೊರೆಯದಿರಲುತ್ತರಿಸೆ ನೌಕೆಯು
ಪರಮ ಚರಣ ಶ್ರೀಪ್ರಸಾದವು
ದೊರೆವುದೆಂತೆಂದೆಲ್ಲ ಚಿಂತೆಗೆ ಸಿಲುಕಿ ನೋವುತಿರೆ ॥೨೫॥

ಮೆಚ್ಚಿ ಭರತನ ಗುಣವನಾತುರ
ಹೆಚ್ಚಿ ಗುರುವರ ನಡೆದ ಮನವಂ
ಬಿಚ್ಚಿ ನುಡಿಯಲು ರಾಮ ಸನ್ನಿಧಿಗಾಗ ವಹಿಲದಲಿ ।
ಅಚ್ಯುತನು ಮುನಿಯಂಘ್ರಿಗೆರಗುತ
ಲುಚ್ಚ ಪೀಠವನಿತ್ತು ಮನ್ನಿಸೆ
ಮೆಚ್ಚಿ ನುಡಿದನು ಕಾಲ ಸಮಯವನರಿತು ಸೂಕ್ತಿಯನು ॥೨೬॥

ಅರಿವೆ ಸಕಲವ ರಾಮ ಲೋಕದ
ಧರುಮ ಕರುಮ ಜ್ಞಾನ ನೀತಿಗ
ಳರಿವೆ ನೀ ಸರ್ವಜ್ಞ ಜನರ ಮನೋರಥಂಗಳನು ।
ಸರುವ ಹೃದಯ ನಿವಾಸಿಯುದರಿಂ
ಪುರಜನರ ಮಾತೆಯರ ಮತ್ತಾ
ಭರತ ರಿಪುಸೂದನರ ಜೀವಕೆ ತಂಪನೆರೆಯೆಂದ ॥೨೭॥

ನುಡಿವನಾರ್ತ ವಿಚಾರವಿಲ್ಲದೆ
ಪೊಡವಿಯಲಿ ಜೂಜಾಳಿಯಾಟದಿ
ಹಿಡಿದ ತನ್ನಾಟವನೆ ಗಮನಿಸುವಂತೆ ಕೇಳೆನಲು ।
ನುಡಿದ ಗುರುವಚನಗಳ ಮೆಚ್ಚುತ
ಮೃಡಮುನಿಯೆ ನಿನ್ನೊಳಗೆ ಯುಕ್ತಿಗ
ಳಡಗಿಹವು ಪೇಳೇನ ಮಾಡಲಿ ನಿನಗೆ ಹಿತವೆನಿಸಿ ॥೨೮॥

ಎನಗೆ ನಿನ್ನಾಣತಿಯೆ ಪಥ್ಯವು
ಮುನಿಯೆ ನೀಡಾಜ್ಞೆಯನು ನಾನದ
ನನುಸರಿಸಿ ಕಲ್ಯಾಣ ಕಾರ್ಯವನೆಸಗ ಬಯಸುವೆನು ।
ಜನಕನೊಲು ನೀನೆನಗೆ ಪೆಸಪೆಸ
ಲನಘ ರಿಸಿ ಕೊಂಡಾಡಿ ರಾಮನ
ಗುಣವ ನೀನೇ ಪರಮ ಪುರುಷನು ನಿನ್ನ ನುಡಿ ಸತ್ಯ ॥೨೯॥

ಆದೊಡೇನಾ ಭರತನಿರವೆಂ
ತಾದುದೋ ರಘುರಾಮನಂತೆನ
ಗಾದುದೀ ಮತಿ ಮಸುಕಿತೇನೆಂಬೆನು ವಿಮೋಹದಲಿ ।
ಮಾದುದೆನ್ನಯ ಯುಕುತಿ ನೀನೇ
ಕಾದುಕೊಳ್ಳೈ ನಿನ್ನ ಭಕ್ತರ
ಮೋದಗೊಳಿಸುವ ಕೃತ್ಯ ನಿನ್ನದು ತಂದೆ ಕೇಳೆಂದ ॥೩೦॥

ಭರತನಿಂಗಿತವರಿತು ನೊಂದಾ
ತರಳನಿಂಗೆರೆ ತಂಪ ತಪ್ಪಲು
ಮರಣವೇ ಸರಿ ಸಲಹು ಸರ್ವರಿಗಭಯವೀಯುತಲಿ ।
ನರಪ ನೀತಿ ಶ್ರುತಿ ಮತವ ಮೇಣ್
ಧರಣಿಮತ ಸಾಧುಮತಗಳರಿತು
ಧರೆಗೆ ಹಿತವೆಂತಂತು ಕಾರ್ಯವನೆಸಗು ನೀನೆಂದ ॥೩೧॥

ಗುರುವಿಗೆನಿತು ಸ್ನೇಹ ಭರತನೊ
ಳರರೆ ಧರ್ಮಧುರೀಣ ಭಕ್ತನು
ಧರೆಯನೊಲಿಸಿದ ದೈವಭಕ್ತಿಯ ಭಾವವೊಂದರಲಿ ।
ಚರಣಯುಗ್ಮಗಳಾಣೆ ಭರತಗೆ
ಸರಿಯ ಸೋದರನಿಲ್ಲ ಕೈಕೆಯ
ಪರಮ ಪುಣ್ಯೋದಯವ ಹೊಗಳುವೊಡರಿದು ತನಗೆಂದ ॥೩೨॥

ಅಂತು ಗುರುಭಕ್ತಿಯನು ಸೇವಿಪ
ನರನು ಪಡೆಯುವ ಪರಮ ಪದವಿಯ
ನೊರೆಯಲೇನದ ಧನ್ಯನಾತನೆ ಪರಮುನದ್ವಯನು ।
ಗುರುಕರುಣಕೆಡೆಗೊಂಡ ಭರತಗೆ
ಸರಿಯಿಹರೆ ಭಾಗ್ಯದಲಿ ಕೃಪೆಯಿಂ
ಪೊರೆದೆ ಕಂದನ ಭರತನಿನ್ನೇನಮಲ ಮಾನಿಸನೊ ! ॥೩೩॥

ಇರಿಸಿ ಲೋಕವ ಭರತ ಹಸ್ತದಿ
ತೆರಳಿದನು ಸುರಧಾಮ ದಶರಥ
ಪೊರೆಯುವ ಪ್ರಭು ನಮಗೆ ಬೆಸಸಲಿ ಮಾಳ್ಪುದೇನೆಂದು ।
ಧರೆಯ ಹಿತಗಳ ನೆನೆಯುತುಚಿತವ
ನೊರೆಯ ಬಲ್ಲ ಮಹಾತ್ಮನದರಂ
ತರಿಯುತೆಸಗುವೆನೆಂದು ಮೌನವ ತಾಳ್ದ ದಾಶರಥಿ ||೩೪||

ಮುನಿಪ ಸಂತಸ ತಾಳ್ದು ಭರತಗೆ
ವಿನಯಮತಿ ಬೆಸಗೊಳ್ಳು ಕರುಣಾ
ವನಧಿಯಡಿಯಲಿ ನಿನ್ನ ಮನದಿರವೆಂತು ಪೇಳೆನಲು ।
ಮನದ ಹರುಷದಿ ರಾಮನಿರೆ ಬಂ
ದನಿತುವುಮ್ಮಳವುಕ್ಕಿ ಭರತನ
ಮನವ ಮುಸುಕಿತು ರಾಮನಲ್ಲದೆ ಮರೆತ ಬಾಹ್ಯವನು ||೩೫||

ಭರತನಿರವನ್ನರಿತು ಮುನಿಜನ
ತರುಣಿಯರು ಬಾಂಧವರು ಪರಿಜನ
ಕರಿತುರಗ ಖಗಮೃಗ ಸಮಸ್ತವು ಕರೆಯೆ ಕಂಬನಿಯ ।
ಇರಿಸಿ ಪದಮೂಲದಲಿ ದೃಷ್ಟಿಯ
ನೊರೆದ ಗದ್ಗದ ಸರದಿ ರಘುಪತಿ
ಯರಿಯೆನೇನಂ ಕೃಪೆಯೊಳೊರೆದಿಹನೆಲ್ಲ ಗುರುವರನು ||೩೬||

ಒಡೆಯನತಿಶಯವೆಲ್ಲ ಬಲ್ಲಿನು
ಪಡುವನೇ ಸಂದೆಗವ ತನ್ನರಿ
ಪಡೆಯನಾದರು ಕ್ಷಮಿಸಿ ಪೊರೆಯುವ ಕೋಪವಿಲ್ಲದೆಯೆ ।
ನಡೆನುಡಿಯ ಕೂಟದಲಿ ಕುರುಣವಿ
ನುಡಿವನಲ್ಲದೆ ಮುಳಿದುದುಂಟೇ
ಹುಡುಗರಾಟದಿ ಸೋತು ಗೆಲಿಸುವ ತನ್ನ ನೇಹಗರ ||೩೭||

ಅಡಿಯೆಡೆಯೊಳಾಂ ನಿಂದು ನುಡಿಸ
ಲ್ಕೊಡಬಡದು ಮನ ಭಯದಿ ಕಣ್ಣುಗಳಿ
ಗೊಡೆಯನೀ ದರ್ಶನವು ತೃಪ್ತಿಯ ಕೊಡದು ನೋಡುತಿರೆ ।
ಕೆಡಹಿದನು ವಿಧಿಯೆಮ್ಮ ತಾಯಿಗೆ
ಪೊಡವಿಯಾಸೆಯನೊಡ್ಡು ತಕಟಾ
ಬಿಡದು ಪಾಶವಿದಾರ ದೂರಿದೊಡೇನು ಫಲವಹುದು ॥೩೮॥

ಜನನಿಯಧಮಳು ತಾನು ಸದ್ಗುಣಿ
ಯೆನುವ ನರನೇ ದುಷ್ಟ ಪಾಪಿಯು
ಜನಿಸುವುದೆ ತಂಡುಲವು ರಾಗಿಯ ಬನದಿ ಮತ್ತಿನ್ನು ।
ಜನಿಸುವುದೆ ಶುಕ್ತಿಯಲಿ ಮುತ್ತುಗ
ಳೆಣಿಸಬಾರದು ಪರರ ದೋಷದ
ಕನಸಿನಲ್ಲಿಯು ಪುಣ್ಯ ನಶಿಸುವುದದರ ಫಲದಿಂದ ॥೩೯॥

ನರಪತಿಯ ಮರಣಕ್ಕೆ ಕಾರಣ
ವಿರಹವೇದನೆ ಮತ್ತೆ ಕೈಕೆಯ
ಮರುಳುಮತಿಯೆಂಬುದಕೆ ಜಗವೇ ಸಾಕ್ಷಿಯಾಗಿಹುದು ।
ಪುರಜನರ ಜನನಿಯರ ಲೋಕದ
ವಿರಹ ದುಃಖಕೆ ಮೂಲಕಾರಣ
ದುರುಳನಾನೇ ನೋಡುತಿಹೆನೀ ದೃಶ್ಯಗಳನಿಲ್ಲಿ ॥೪೦॥

ಅರಮನೆಯ ಹೊಕ್ಕಾನು ಕೇಳಲು
ಧರಣಿಜಾ ಸೌಮಿತ್ರಿವೆರಸುತ
ಧರೆಯ ತೊರೆಯುತಲಡವಿ ಪೊಕ್ಕುದನರಿತೆ ಮುನಿಯಂತೆ ।
ಧರಿಸಿ ನಾರುಡೆ ಕಾಡಿನಲಿ ನಡೆ
ದಿರಲು ಹರನೇ ಸಾಕ್ಷಿ ಬರುತಾಂ
ಪರಮ ಭಕ್ತನ ಗುಹನ ಕಂಡೆನು ಕಲ್ಪನದ ನಾನು ॥೪೧॥

ನೋಡಿದೆನು ಮನದಿಷ್ಟದೇವರು
ಕಾಡಿನಲಿ ಮುನಿಯಂತೆ ನಿಂದುದ
ಬಾಡಿದೆನು ಬದುಕೇನು ಫಲವಿನ್ನೆನಗೆ ಲೋಕದಲಿ ।
ಕಾಡದೇ ವಿಧಿ ಹರಿವಿರೋಧಿಯ
ಸೂಡದಿಹುದೇ ಪಾಪ ಭರತನ
ಕೇಡು ನುಂಗದೆ ರಾಮವಿಮುಖನ ನೂಕುತಿದೆಯೆಂದ ॥೪೨॥

ನೊಂದ ನುಡಿಗಳ ಕೇಳಿ ಕರುಣದ
ಚೆಂದಳಿರು ಸುಟ್ಟಂತೆ ಬೆಂದರು
ಚಂದ್ರಮುಖಿಯರು ಸಭೆಯು ಹಿಮದಿಂ ತೊಯ್ದ ಬನದಂತೆ !
ಕಂದಿರಲು ಗುರುವೊರೆದು ನೀತಿಗ
ಳಂದ ಹರಿಚರಿತೆಗಳ ರಾಘವ
ನೆಂದ ಮೃದುನುಡಿಯಿಂದ ಭರತನ ತಮವ ಪರಿಹರಿಸಿ ॥೩೪॥

ಮನದ ದುಃಖವ ನೀಗು ಜಡವೀ
ತನುವು ಮೋಣ್ ಜೀವಾತ್ಮ ಗತಿಗಳು
ಅನಘ ಪರಮೇಶ್ವರನ ಲೀಲೆಯು ಸಕಲವವನ ವಶ ।
ಅನುಜ ತ್ರೈಲೋಕ್ಯಾಧಿಪತಿ ಪಾ
ವನ ವಿರಾಗಿಗಳೊಡೆಯ ನಿನ್ನೊಳ
ಗೆಣಿಸುವರೆ ದೋಷಗಳನಿಹಪರ ಸುಖವ ತೊರೆಯುವರು ॥೪೪॥

ಜನನಿ ಕೇಕಯಿ ದೋಷಿಯೋ ನಿ
ರ್ಗುಣರ ನುಡಿಯಿದು ನಿನ್ನ ನಾಮವ
ನೆನೆವ ನರ ಮನ್ನಣೆಯ ಪಡೆಯುವನಿದಕೆ ಶಿವನಾಣೆ ।
ಅನುಜ ಸಲಹಲು ನಿನ್ನ ಧರಣೀ
ಜನನಿ ಕೈ ನೀಡಿಹಳು ನಿನ್ನಯ
ಘನತೆ ಪೆರ್ಚಿರಲಾಪನಲ್ಲವನು ಮಹಿಮೆಗಳ ಗೂಢ ॥೪೫॥

ಮುನಿಗಳೊಡನೀ ವಿಹಗಮೃಗತತಿ
ವಿನಯದಿಂ ನಲಿಯುವುವು ವಧಿಕನ-
ಅನಹಿತನ ಕಂಡೊಡನೆ ಹರಿದೋಡುವುವು ನಿಲ್ಲದೆಯೆ |
ಮನದೊಳರಿವುವು ಹಿತರನಹಿತರ
ವನದ ಪಶುಪಕ್ಷಿಗಳು ಪೇಣೀ
ತನು ಗುಣಜ್ಞಾನಗಳ ತವರಿದು ಸಾಧು ವಚನವಿದು ||೪೬||

ಅರಿವೆ ನಿನ್ನಯ ಮಹಿಮೆ ಪೇಣಾ
ನರಿವೆ ನಿನ್ನಯ ವಿರಹ ದುಃಖವ
ದೊರತುದೆನಗಿಂದುಭಯ ಕಷ್ಟಗಳೇನ ಚಿಂತಿಸಲಿ |
ಪೊರೆಯೆ ಸತ್ಯವ ಜನಕನೆನ್ನನು
ತೊರೆದ ವಚನ ಪ್ರೇಮಕೋಸುಗ
ತೊರೆಯುತಾಂ ತನುಮೋಹ ಹೊಕ್ಕೆನು ಘೋರ ಕಾನನವ ||೪೭||

ಜನಕ ವಚನವನುಳಿವೆನೇ ಪೇ
ಣನುಜ ದಂದುಗ ಕಳೆವೆನೇ ಧಾ
ರುಣಿಯ ಬಯಕೆಗಳೆಂತೊ ಕಾಣೆನು ಮುನಿಯು ವಿಧಿಸಿಹನು |
ಅನಘ ನಿನ್ನಿಷ್ಟಗಳ ಪೇಳಾ
ನನುಸರಿಸುವೆನು ನೀಗು ದುಃಖವ
ನೆನಲು ನಗೆಮೊಗದಿಂದ ಸರ್ವರು ನೆಗೆದರಾಗಸಕೆ ||೪೮||

ಒಲಿದೆ ನಿನಗೆಂದೊಡನೆ ಸುರಪತಿ
ಯುಳಲಿ ಬಳಲಿದ ದುರುಳ ನಾಶಕೆ
ಹಲವು ವಿಘ್ನಗಳೇಕೆ ಹರಿಹರಿಯೆಂದು ಮರೆವೊಗುತ |
ನೆಲದ ಭಾರವ ಕಳೆವನೇ ಸುರ
ರಳಲ ಪರಿಹರಿಸುವನೆ ರಾಮನು
ಹಳುವ ವಾಸವ ಬಿಡುವನೇ ಹಿಂಸೆಗಳನಳಿಸುವನೆ ||೪೯||

ಹಿಂದೆ ಸಲಹಿದನಂಬರೀಷನ
ಕಂದನಾ ಪ್ರಹ್ಲಾದಗೊಲಿಯುತ
ಕೊಂದು ಧುರಳ ಹಿರಣ್ಯಕಶ್ಯಪನವನ ಸೋದರನ ।
ಇಂದು ಸುರರಂ ಪೊರೆಯೆ ರಕ್ಕಸ
ವೃಂದವುಂ ಕೆಡಹುತ್ತ ಲೋಕವ
ತಂದೆಯುಳುಹನೆ ಭರತನರಿಯನೆ ದುಷ್ಟರುಪಟಳವ ॥೫೦॥

ಆಗ ಸುರಗುರುವೆಂದ ಭಕ್ತನು
ರಾಘವಂಗಾ ಭರತನಮಲ ವಿ
ರಾಗಿ ಭಯಮೇಕಿನ್ನು ನಿಮ್ಮ ಕ್ಷೇಮವೇ ಹರಿಗೆ ।
ಭಾಗ್ಯ ನಮಗೀ ಭರತ ದರ್ಶನ
ಯೋಗಿಯಾದ ನಿರಾಶೆವಂತನ
ತ್ಯಾಗಮರಿಯಿರೆ ರಾಮ ಸಲಹುವನೆಮ್ಮ ಮರೆಯುವನೆ ॥೫೧॥

ರಾಮದಾಸರು ವಿಮಲ ದಶಶತ
ಕಾಮಧೇನು ಸಮಾನ ನೆನೆಯಿರೆ
ರಾಮ ಮೆಚ್ಚಿದ ಭರತನಂಘ್ರಿಯನಿದು ಪವಿತ್ರವಲಾ ।
ಪ್ರೇಮ ಭಕ್ತಿಗೆ ಸಿಲ್ಕಿ ನುಡಿಯುರು
ರಾಮಚಂದ್ರನ ಛಾಯೆ ಭರತನು
ರಾಮನಾಣತಿಗೇನನೊರೆಯನು ನಮಗೆ ಶುಭವೆಂದ ॥೫೨॥

ಅರಿತು ಸುರರಾಲಾಪ ಶೋಕವ
ಪೊರೆವ ಭಾರವನರಿಯುತತ್ತಲು
ಮುರಿದು ಪಿತನಾಜ್ಞೆಯನು ಭರತಂಗೊಲಿವ ಮನವಿತ್ತ ।
ಹೊರಳಿ ಕಣ್ಣೀರ್ಗಳಲಿ ನಾದಿದ
ಚರಣಯುಗಳವ ಭರತ ವಿನಯದಿ
ಕರಮುಗಿಯುತಿಂತೆಂದ ಲೋಕದ ದುಃಖವಂ ನೆನೆದು ॥೫೩॥

ತಂದೆ ನೀನನುಕೂಲನಾಗಿರ
ಲಿಂದೆನಗೆ ಗುರುವೊಲಿಯೆ ಮಲಿನದ
ಬಂಧನವ ಕಿತ್ತೊಗೆದೆ ಕರುಣಾವರನೆ ಕೃಪೆಯಿಂದ |
ಅಂದು ಮಾತೆಗೆ ಕುಟಿಲ ಬುದ್ಧಿಯು
ಬಂದು ಮುಸುಕಿತು ಭಾಗ್ಯ ಹೀನತೆ
ಗಿಂದು ವಿಧಿಯೇ ಹೇತುವಾಗಿರೆ ತನಗೆ ಭಯವೇಕೆ ! ||೫೪||

ಕೊಲುವುವೈ ದೋಷಗಳು ತನ್ನನು
ಕೊಲುವುದಪಮಾನಗಳು ರಾಘವ
ಸಲಹು ಕರುಣದಿ ನಿನ್ನ ಹೊರತಿನ್ನಿಲ್ಲ ಜಗದಲ್ಲಿ |
ಒಲಿಯೆ ಸುಲಭವಿ ನೀನು ದುರ್ಗುಣ
ಕಲಭ ಕೇಸರಿ ಪಾಪ ಕೆಸರಿಂ
ದೆಳೆದೆ ಭಕ್ತನ ನಿನ್ನ ಮಹಿಮೆಗಳರಿವರಾರಿನ್ನು ||೫೫||

ಸೇರೆ ಸುರತರುಮೂಲ ದುಃಖವು
ಸಾರಿ ಸುಖ ಕೈ ಸೇರಿ ಸಂತಸ
ವೇರಿ ಬರುವುದು ತೀವಿದುತ್ಸಾಹದಲಿ ನಲಿಯುವನು |
ಸಾರಿದುದು ಸಂಶಯವು ರಘುಪತಿ
ಧಾರುಣೀ ಕ್ಷೇಮವನೆ ನೆನೆಯುತ
ಭೂರಿ ಶೋಕವನೊರೆಸಿ ಕಾವುದು ನಿನ್ನ ನಂಬಿದರ ||೫೬||

ಒಡೆಯಗೀಯುತ ದುಃಖ ಸಂತಸ
ವಡೆವ ಸೇವಕನಧವು ಲೋಭವ
ಸುಡುತ ಸುಖದುಃಖಗಳ ಮರೆಯುತ ಭಕ್ತಿ ಭಾವದಲಿ |
ತೊಡೆದಹಂಕೃತಿ ಸೇವೆ ಮಾಡುತ
ನಡೆವ ದೂತನ ಕೃತಿಯೆ ನಿರ್ಮಲ
ವಡೆದ ಸೇವಾಧರ್ಮವಿದನರಿತಾನು ಬಂದಿಹೆನು ||೫೭||

ಆಲಿಸೈ ಪರಮಾತ್ಮ ಬಿನ್ನಪ
ಪಾಲಿಸೈ ಸಿಂಹಾಸನವನೇರುತ
ಲಾಲಿಸು ಕೋಸಲರಾಜ್ಯವಿಂದಭಿಷೇಕಿಪೆವು ನಿನಗೆ ।
ಏಳು ಜಲಧಿಯ ತೀರ್ಥ ರವಿಕುಲ
ಪಾಲಕರ ಹರಿಪೀಠ ಮುನಿಜನ
ಪೀಳಿಗೆಯು ಬಂದಿಹುದು ನೀನಭಿಷೇಕಗೊಳ್ಳುವುದು ॥೫೮॥

ಕಳುಹು ಶತ್ರುಹನೊಡನೆ ವಿಪಿನ
ಕ್ಕೊಲಿಯುತೆನ್ನ ಸನಾಥರೆನ್ನಿಸು
ಹೊಳಲ ಸಾರೈ ತಂದೆ ಶೀಘ್ರದಿ ರಾಜ್ಯವನು ವಹಿಸು ।
ಸಲಿಸದಿರ್ದೊಡೆ ವರವನಿದನೀ
ಕಳುಹು ಲಕ್ಷ್ಮಣ ಶತ್ರುಹರ ನಾ
ಹಳುವದಲಿ ನಿನ್ನಾಜ್ಞೆ ಪಾಲಿಸ ಬರುವೆ ಸೇವಿಸಲು ॥೫೯॥

ನಿನಗಿದುವು ಸರಿದೋರದಿರ್ದೊಡೆ
ಅನುಜರಿರ್ವರ್ವೆರಸಿ ಚರಿಸುವೆ
ವನದೊಳಾಂ ನೀಂ ಸಾರು ಪುರವನು ಜಾನಕೀಸಹಿತ ।
ನಿನಗೆ ಹಿತವಾದುದನು ಬೆಸಸೆನ
ಗನಘ ಸರಿಯೋ ದೂರಮಿರ್ಪುದು
ಘನ ಧರಾಮಂಡಲದ ಭಾರವನೆನ್ನೊಳಿರಿಸುತ್ತ ॥೬೦॥

ಅರಿಯೆ ಧರ್ಮವಿಚಾರ ನೀತಿಗ
ಳರಿಯೆ ಭಕ್ತಿಯ ತಿಳಿಯೆ ದುಃಖಾ
ರ್ತರನು ಪರಸುಜ್ಞಾನ ಸೇರ್ಪುದೆ ಪಾಪಿಯಾದೆನಗೆ ।
ಹಿರಿಯ ನಿನ್ನಾಣತಿಗೆ ಪಾರು
ತ್ತರವನೀವನ ದೂತನೇ ಹರಿ
ಶರಣು ಬಂದಿಹೆ ನಿನ್ನ ತಮ್ಮನ ಸಲಹಿಕೋಯೆಂದ ॥೬೧॥

ನೆನೆದು ಲೋಕೋನ್ನತಿಯ ಬೆಸಸೆನ
ಗನಘ ನಿನ್ನಾಜ್ಞೆಯನು ಚರಣಕೆ
ಮಣಿದು ತಲೆಯಲಿಪೊತ್ತು ನಡೆಸುವೆನದನು ನಿನ್ನಾಣೆ |
ಎನಲು ರಾಘವ ಸಾಧುವೆಂದನು
ಮನದಿ ಪುರಜನ ನೊಂದು ಹಾಯೆನ
ಲನುವಿನಿಂ ಸುರನಿಕರ ಸುಮವರ್ಷವನು ಸೂಸಿದರು ||೬೨||

ಅನಿತರಲಿ ವೈದೇಹ ಪುರದಿಂ
ಜನಕ ದೂತನು ಬರಲು ಕರೆಸಿದ
ಮುನಿಪ ಮನ್ನಿಸಿ ನೃಪನ ಸುಕ್ಷೇಮಗಳ ಬೆಸಗೊಳಲು |
ಮುನಿಗೆ ಸೀತಾರಾಮರಂಘ್ರಿಗೆ
ಮಣಿದು ಮುನಿವೇಷದಲಿ ಕಾಣುವ
ಜನಕಜಾ ರಾಘವರ ನೋಡುತ ಕರೆದ ಕಂಬನಿಯ ||೬೩||

ಗುರುವೆ ನೀನೊರೆದಮಲ ವಚನವೆ
ಧರಣಿಪಾಲ ಕ್ಷೇಮಹೇತುವು
ಅರಸ ದಶರಥನೊಡನೆ ಲೋಕಕ್ಷೇಮ ಸಾರಿದುದು |
ನರಪ ಕೊರಗಿ ವಿದೇಹನೆಂಬಾ
ವರ ಸುನಾಮವನುಳಿಸಿಕೊಂಡನು
ಮರೆದು ದಶರಥಗಾದ ವ್ಯಥೆಯಲಿ ಹಿಂದುಮುಂದುಗಳ ||೬೪||

ಕೈಕೆಯಾಜ್ಞೆಯ ಕೇಳಿ ಜನಕವಿ
ವೇಕ ತೊರೆದನು ಮನದ ದುಗುಡವ
ನೌಕಿ ಮಂತ್ರೀ ಜನರ ನೆರೆಯಿಸಿ ನೀತಿ ಬೆಸಗೊಂಡ |
ನೂಕಿ ಗುಪ್ತದಿ ಚರರ ಭರತನಿ
ಗೇಕೆ ರಾಜ್ಯದ ಮಮತೆಯೆಂಬುದ
ನಾ ಕಕುತ್‌ಸ್ಥನ ಹಿರಿಮೆಯರಿಯುತ ಬಂದು-ತಿಳುಹಿದರು ||೬೫||

ಮರಳಿ ಕರೆತರೆ ರಾಮಚಂದ್ರನ
ಭರತ ನಡೆದಿರೆ ಚಿತ್ರಕೂಟಕೆ
ಹೊರಟು ಪಯಣದ ಮೇಲೆ ಪಯಣದಿ ಜನಕ ಬಂದಿಹನು ।
ಸರಿದು ಯಮುನಾ ತಟವ ಪರಿಜನ
ವೆರಸಿ ಮಜ್ಜನಗೈವ ಸಮಯದಿ
ಚರರನಟ್ಟಿದ ನಿಮ್ಮ ಸನ್ನಿಧಿಗೆಂದು ಬಿನ್ನವಿಸೆ ॥೬೬॥

ಜನಕನೈತಹನೆಂದು ಭರತನು
ಮನದ ಹರುಷದೊಳಿರಲು ರಘುಪತಿ
ಮನದ ಸಂಕೋಚದಲಿ ನೊಂದನು ದೇವಪತಿಯತ್ತ ।
ದನುಜವಧೆಯೆಂತಹುದಕಟಕಟ
ವಿನುತ ಮರೆದನೆಯೆಂದು ಮರುಗಲು
ತನುವನಸು ತೊರೆದಂತೆ ಸಾಣ್ಣಾತ ಕೈಕೆ ಬಾಡಿದಳು ॥೬೭॥

ಇವರ ಹೃದಯಕೆ ತಂಪನೀಯಲು
ರವಿಯು ಪಶ್ಚಿಮ ಶಿಖರವಿಳಿದನು
ತವಗೆ ಸನ್ನಿಧಿ ವಾಸವಾಯ್ತಿನ್ನೆರಡು ದಿನವೆಂದು ।
ಅವಧಪುರಜನರೇಕಭಾವದಿ
ಶಿವಶಿವೆನ್ನುತ ಭಜಿಸಿ ಪೂಜಿಸಿ
ರವಿಗೆರಗಿ ಶಂಕರಿಯ ಬೇಡಿದರಂದು ಭಕ್ತಿಯಲಿ ॥೬೮॥

ರಾಮನೊಡಬಡಲಿಂದು ರಾಜ್ಯ
ಪ್ರೇಮ ಮೂಡಲ್ಕವನ ಹೃದಯದಿ
ಭೂಮಿಯೊಡೆತನ ತಾಳ್ದೊಡಾದುದು ಧನ್ಯತೆಯ ಸಫಲ ।
ಭೂಮಿಜೆಯು ಸಮ್ರಾಜ್ಞಿಯಾಗಲಿ
ಭೂಮಿವಧು ಪುಣ್ಯಾ ಫಲವೆಂದರು
ತಾಮಸರು ಮೌನಿಗಳು ಪರಿಜನ ಭಾಂಧವಾದಿಗಳು ॥೬೯॥

ಒಲುಮೆ ನಲುಮೆಯು ಜಲಧಿ ರಘುವರ
ಚೆಲುವ ಸರಳ ಸುಶೀಲ ಸದ್ಗುಣ
ಸುಲಭ ಕರುಣಾಕಾರ ಪರಮಕೃಪಾಗುಣೋತ್ತುಂಗ ।
ಹಳುವವೇ ಸುರಪುರಕೆ ಮಿಗಿಲಾ
ಯ್ತೊಲಿದು ಬಂದನು ಜನಕನರಪತಿ
ಯಳಿಯಗೋಸುಗವವನ ದರ್ಶನವಹುದು ತಮಗಿನ್ನು ॥೭೦॥

ಗುರು ಸಚಿವ ಸೋದರರು ಪುರಜನ
ವೆರಸಿ ರಘುವರ ಜನಕರಾಯನ
ಚರಣ ಸನ್ನಿಧಿಗೈದಿದನು ಮುದದಿಂದ ಮುಂದಾಗಿ ।
ಗಿರಿಯ ಚೆಲುವನು ನೋಡುತಾ ನೃಪ
ಬರುವ ಪಡೆಯಂ ಕಾಣುತಿಳಿದನು
ವರ ವರೂಥವ ನಡೆದು ಬಂದನು ಗುರುವಿಗೆರಗಿದನು ॥೭೧॥

ರಾಮ ದರುಶನವಾಗೆ ಹರಿದುದು
ಕಾಮನೆಗಳಾ ಜನಕೆ ಮೂಡಿತು
ಭೂಮಿಜೆಯ ದರ್ಶನದಿ ವರ ಸುಜ್ಞಾನ ರವಿ ಮನದಿ ।
ಶ್ರೀ ಮನೋಹಾರಕನು ರಘುಕುಲ
ರಾಮನನುಜರ್ವೆರಸಿ ನಮಿಸಲು
ಭೂಮಿಪತಿ ನೊಸಲೆತ್ತಿ ತಕ್ಕೈಸಿದನು ಹರುಷದಲಿ ॥೭೨॥

ವ್ಯಾಕುಲತೆಯಿಂದುಭಯ ಪುರಜನ
ಶೋಕಜಲಧಿಯೊಳದ್ದಿ ನುಡಿಯದೆ
ಮೂಕರಾದರು ಧೈರ್ಯವಿಲ್ಲದೆ ಮರೆತು ನಾಚುಗೆಯ ।
ಆಕೆವಾಳನ ಗುಣವ ನೆನೆಯುತ
ನೂಕಿದರು ಮನವನ್ನು ರಾಮನ
ನೇಕ ಭಾವದಿ ಸ್ಮರಿಸೆ ಭಕ್ತಿ ಭ್ರಾಂತಿಯಲಿ ನಿಂದು ॥೭೩॥

ಸುರರು ಸಿದ್ಧರು ಯೋಗಿ ತಾಪಸ
ವರರು ಮುನಿಗಳು ಜನಕರಾಯನ
ಪರಿಯಕಾಣಲು ಮುಂದನರಿಯದೆ ನೊಂದು ಮರುಗಿದರು ।
ಹರಿಯನೊಲಿಸದ ಮನುಜ ರಾಮನ
ನರಿಯದಿಹೆ ನರನಿಹನೆ ಲೋಕದಿ
ಹರಿಯ ದರ್ಶನವೊಂದೆ ಮುಕ್ತಿಗೆ ಸುಲಭ ಸೋಪಾನ ॥೩೪॥

ಜಗವನಾಳುವ ಹರಿಗೆ ವನವೇಂ
ನಗರ ಶಿಖರಗಳೇನು ಸಕಲವ
ನೆಗಳುವಾತಗೆ ಕಷ್ಟ ಸುಖಗಳ ಭೇದವೇನಿಹುದು ।
ಸುಗುಣಿ ನೀನಿಂತಳಲಬಹುದೇ
ರಘುವರನ ಲೀಲೆಯಿದು ಬಿಡು ಬಿಡು
ನಗರೆ ಲೋಕದೊಳೆಂದರಾ ಮುನಿಸಿದ್ಧ ಯೋಗಿಜನ ॥೩೫॥

## ವಿಶ್ರಾಮ ೧೪

ಸೂ॥ ಹಲವು ಪರಿಯಲಿ ಭರತನಳಲನು
ನಿಲಿಸಿ ಸೋದರ ಧರ್ಮವೊರೆಯುತ
ತಳೆಯೆ ರಾಜ್ಯವ ಪಿತೃವಚನ ಹಿತವೆಂದು ಬೋಧಿಸಿದ॥

ಹಲವು ಪರಿಯಲಿ ಗುರುವಸಿಷ್ಠನು
ತಿಳುಹಿ ನೀತಿಯ ಜನಕ ನರಪತಿ
ಯಳಲ ಸಂತವಿಸಿದನು ಧೃತಿಯೊರೆಯುತ್ತ ರಾತ್ರಿಯನು ।
ಕಳೆದು ಮಜ್ಜನ ಮಾಡಿ ನದಿಯಲಿ
ಒಲಿದು ಜಲಪಾನದಲಿ ದಿನವಂ
ಕಳೆಯುತಿರೆ ರಘುರಾಮ ಭಕ್ತರು ಜನಕ ಗುರು ನೋಡಿ ॥೧॥

ಸರುವ ವಿಪ್ರರ ನುಡಿಸಿ ನೀತಿಯ
ಕರುಮ ಮಾರ್ಗದ ವಿವರವೊರೆದನು
ಧರೆಯ ಜಂಗಮಕೆಲ್ಲ ಮೋಕ್ಷವೆ ಪರಮ ಸಾಧನವು ।
ಧರುಮ ಮಾರ್ಗವನರಿದು ನಿತ್ಯದ
ಕರುಮಗಳನಾಚರಿಸೆ ಮೋಕ್ಷವು
ಕರದೊಳಿಹುದೆಂದೊರೆದನಾಗಳು ಮುದದಿ ಸರ್ವರಿಗೆ ॥೨॥

ಅರಿದು ರಾಘವನಿಂಗಿತಂಗಳ
ತಿರಿದು ತಂದರು ಕಂದಫಲಗಳ
ಭರದಿ ಕೋಲಕಿರಾತ ಭಿಲ್ಲರು ಗೂಡೆ ಗೂಡೆಯೊಳು ।
ಗಿರಿಯು ರಘುರಾಮ ಪ್ರಸಾದದಿ
ಪರಮ ಕಲ್ಪದ್ರುಮವೆನಿಸೆ ಪರಿ
ಹರಿಸಿ ದುಃಖವ ಸುಖವನಿತ್ತುದು ಮುದದಿ ರಾಮಗಿರಿ ॥೩॥

ಬೇಲತರು ಪರ್ಣಾಯಿ ಪುಷ್ಪ ವಿ
ಶಾಲ ವಾಟಿಕೆಗಳಲಿ ವಿಪಿನ ಮೃ
ಗಾಳಿ ಕಣ್ಮನ ದಣಿಯೆ ಚರಿಪವು ನೋಳ್ಪರನ್ನೊಲಿಸಿ ।
ಸೀಳುತಾಗಸ ಮಧುಪ ಖಗಗಣ
ಮೇಳದಿಂ ಹಾರುತಿರೆ ತುಂಬಿತು
ಮೇಲಿನಿಂ ಝೇಂಕಾರ ಮಾರುತನೊಡನೆ ಸಹಕರಿಸಿ ॥೪॥

ಜನಕಗಾತಿಥ್ಯವನು ನೀಡುವ
ವನದವೊಲು ಸೌಂದರ್ಯ ಸೂಸುತ
ವನಪದವೊ ಜನಪದವೊ ಮಿಗಿಲೆಂಬುದನು ತೋರಿಸುತ ।
ಕೊನೆಗಳಿಂಬಾಗಿಹವು ಫಲಗಳು
ಜನದ ಕರಗಳಿಗೆರಗಿ ಮಧುವಂ
ನನೆಯೊಸರೆ ಪುರಜನರು ವನದಲಿ ಸಂಚರಿಸುತಿಹರು ॥೫॥

ಇಂತು ಕಳೆಯಲು ನಾಲ್ಕು ದಿನಗಳು
ಪಿಂತೆ, ಸರ್ವರು ರಾಮ ಸನಿಹದಿ
ಚಿಂತೆಯಿಲ್ಲದೆ ಮುಂದೆ ಹರಿಯನ್ನುಳಿದು ನಿಜಪುರಕೆ |
ಹಿಂತಿರುಗುವುದು ತರವೆ ರಾಮನ
ಚಿಂತನೆಯನುಳಿದಾವು ಜೀವಿಪು
ದೆಂತು ಹಳುವದಿ ನಾವಿಹೆವು ಹದಿನಾಲ್ಕು ವರುಷಗಳು ||೬||

ಎಮಗಯೋಧ್ಯಾಪುರದ ಬಗೆಯೇ
ಕೆಮಗೆ ಮಿಥಿಲಾನಗರದಾಸೆಯೆ
ಅಮರನಗರಿಯ ಸುಖವ ಕೊಳ್ಳೆವು ರಾಮನನ್ನುಳಿದು |
ಅಮರನದಿ ಜನಕನನು ಸೀತಾ
ರಮಣಿಯನು ಲಕ್ಷ್ಮಣನ ದರ್ಶನ
ನಮಗೆ ದೊರಕಿರೆ ಮುಕ್ತಿಯೇಕೆಮಗಿನ್ನು ಲೋಕದಲಿ ||೭||

ಚರಿಸಿ ರಘುಪತಿ ಶೈಲ ವನದಲಿ
ಪರಮ ಋಷ್ಯಾಶ್ರಮದಿ ವಿಹರಿಸಿ
ತಿರಿಯುತಮೃತ ಸಮಾನ ಫಲಮೂಲಗಳ ಸವಿಯುತ್ತ |
ಸರಸದಿಂ ಹದಿನಾಲ್ಕು ವರ್ಷವ
ನರೆಘಳಿಗೆಯೊಲ್ ಕಳೆಯುವೆವು ಸಂ
ಚರಿಸುತೀ ವನವೆಂದು ಭಾವಿಸಿದರು ನರೋತ್ತಮರು ||೮||

ಇದನು ಪಡೆಯುವ ಯೋಗ ಭಾಗ್ಯಗ
ಳೊದಗುವುದೆ ನಮಗೆಂದು ಬಗೆದಿರೆ
ಮುದದಿ ಸೀತಾಮಾತೆ ಕೋಸಲೆಯೆಡೆಯ ಸೇರಿದಳು |
ವಿಧಿಯ ವಂಚನೆಯಿದುವು ಬಯಸಲು
ಸುಧೆಯು ವಿಷವಾಯ್ತೆಮಗೆ ದುಃಖೋ
ದಧಿಯೊಳದ್ದೆವು–ಗೂಗೆ ಬಕ ನಾಯುಸದ ಹಾವಳಿಯೊ ||೯||

ಹಂಸವೋಡಿತೆ ಲೋಕದೊಳು ಕಲ
ಹಂ ಸಮಯಮಾಯ್ತೇಕೆ ಹರ್ಷವ
ಹಿಂಸೆತೆಗಳಿತೆ ಬಿನದವೇ ದುರ್ನಾಟಕದ ಕತೆಗೆ |
ಹಿಂಸೆಗತಿಶಯ ನೆರೆಯೆ ಹರಿ ವಿರ
ಹಂ ಸರಾಗವೆ ಹೊಂಗೊಳದ ಕಲ
ಹಂಸ ಕಾಡೊಳು ಚರಿಸಬಲ್ಲುದೆ ವಿಧಿಯ ನಿಯಮವಿದೆ ! ||೧೦||

ಇದನು ಕೇಳಿ ಸುಮಿತ್ರೆ ನುಡಿದಳು
ವಿಧಿಯಗತಿ ಮಗುವಂತೆ ವಿಪರೀ
ತದಲಿ ನಡೆವುದ ತಿಳಿಯಲಾರೆವು ನಮ್ಮ ವಿಲಗದಲಿ |
ಇದುವೆ ಕರ್ಮದ ನೀತಿ ಸುಖ ದುಃ
ಖದಲಿ ನೂಕುತ ಪರಿಕಿಸುವುದೇ
ಬಿದಿಯ ಗುಣವೆಂದೊರೆದಳಾ ಕೌಸಲ್ಯೆಗನುನಯದಿ ||೧೧||

ವನವ ಹೊಗಲಾ ರಾಮು ತೋರದು
ಮನದಿ ಖೇದವು ಭರತನಿರವಂ
ನೆನೆಯೆ ಸುಡುವುದು ಹೃದಯ ಸಲಹುವುದೆಂತೊ ವತ್ಸನನು |
ವಿನಯಗುಣ ಸಂಪನ್ನನಗ್ರಜ
ಮನೆಯ ಹೊಗದಿರೆ ತೊರೆವನಸುವನು
ತನುಗಳೆಯೆ ಮತ್ತಾರ್ಗೆ ರಾಜ್ಯವಿದೆಂದಳಾ ಕುಶಲೆ ||೧೨||

ಭರತ ಕುಲದೀಪಕನು ರವಿಕುಲ
ದೆರಕ ತೇಜಃಪುಂಜನೆಂಬುದ
ನರಪನೊರೆವುತ್ತಿರ್ದ ಸಂತತ ಮೆಚ್ಚುತವನನ್ನು |
ಸಿರಿಯೊದಗೆ ಗುಣವರಿಯಬಹುದಾ
ನರನ ಪರಿ ವಿಪರೀತಮಪ್ಪುದು
ಸಿರಿಯ ದರ್ಪದಿ ಮರೆವನಲ್ಲವೆ ಲೋಕ ಮಾನವನು ||೧೩||

ಅರರೆ ಸ್ನಾನೇನೊರೆದೆ ತಪ್ಪಲೆ
ಮರುಗಿ ಮರೆತೆನೆ ಮತಿಯು ತಪ್ಪಾ
ಯ್ತೊರೆದುದೆಂದಾ ಜನಕ ಸತಿಯಂ ನೋಡಿ ಮನಮರುಗಿ ।
ವರವಿದೇಹನ ರಮಣಿ ಲೋಕದೊ
ಳರಿವೆಯಲ್ಲವೆ ನೀನು ನಿನಗಾ
ನೊರೆಯಲೇನಿಹುದಿನ್ನು ಪರಮಜ್ಞಾನಿಯಾಗಿರಲು ॥೧೪॥

ಲಲನೆ ನಡೆನಡೆ ನಿನ್ನ ನುಡಿಯಲಿ
ತಿಳಿಹಿಸೌಜನಕಂಗೆ ಲಕ್ಷ್ಮಣ
ನಿಲಯ ಸೇರಲಿ ಭರತ ವನಮಂ ಹೊಗಲಿ ತನ್ನೊಡನೆ ।
ಲಲಿತಮತಿಯಿದಕೊಪ್ಪಿ ನಡೆಪ್ಪೊಡೆ
ಯುಳಿವನಾ ಸುಕುಮಾರನಲ್ಲದೊ
ಡಳಿವನಿದನೇನೆಂಬೆನೆಂದಳು ಕೌಸಲಾದೇವಿ ॥೧೫॥

ಸುರರು ಭಲೆಭಲೆಯೆಂದು ಹೊಗಳಲು
ಹರನೆ ಗತಿಯೆಂದಿವರು ದುಃಖಿಸೆ
ಚರಣಯುಗಕೆರಗುತ್ತ ಜನಕನ ರಾಣಿ ನುಡಿಸಿದಳು ।
ಹರಿ ಜನನಿ ನಿನಗೀ ಸ್ವಭಾವವು
ತರವು ಕೇಳೌ ರಾಮ ಸರ್ವರ
ಪರಿಯನಾದರಿಸುವನು ಸುಗುಣ ದುರ್ಗುಣವೆಲ್ಲವವನದಲೆ ॥೧೬॥

ಶಿರದಿ ಪರ್ವತ ವಹ್ನಿ ತರು ತೃಣ
ಹರಿಣ ಮೃಗ ಮೊದಲಾದುವೆಲ್ಲವ
ಧರಿಸಿಹುದು ಬಗೆಯದೆಯೆ ಬರುವ ಗುಣಾವಗುಣಗಳನು ।
ಹರಿಯು ಸಮದೃಷ್ಟಿಯಲಿ ಲೋಕದ
ಹರಣ ಭರಣಗಳಿರಲು ಗೂಢವ
ನರಿವರಾರೆಂದೊರೆದಳಾ ಮಿಥಿಲಾಪುರದ ರಾಣಿ ॥೧೭॥

ನಿನಗೆ ಸಮರಾರಿಹರು ಲೋಕದಿ
ದಿನಪಗಿಂ ಮಿಗಿಲಾಗಿ ಬೆಳಗುವ
ನಿನುಕುಲೋತ್ತಮ ದೇವ ಕಾರ್ಯವ ಮುಗಿಸಿ ತಿರೆತಳೆವ ।
ಮುನಿಪನೊರೆಯನೆ ಯಾಜ್ಞವಲ್ಕ್ಯನು
ವನಜನಾಭನ ಕೃಪೆಯೊಳೀ ಧರೆ
ಸನುಮತದೊಳಿಹುದೆಂದು ಹೊಲ್ಲೆಹವಲ್ಲ ಮುನಿವಚನ ॥೧೮॥

ಒರೆಯುತೀಪರಿ ನಮಿಸಿ ಮಿಥಿಲಾ
ತರುಣಿಯಿತ್ತಲು ನಡೆಯಲತ್ತಲು
ನರಪ ಜನಕನು ಬಂದು ಬೀಡಾರಕ್ಕೆ ಸತಿಸುತೆಯ ।
ಭರದಿ ಕಾಣಿಸಿಕೊಂಡು ಸೀತೆಯ
ಶಿರವನಘ್ರಾಣಿಸುತ ತಾಪಸ
ಪರಿಜಿನಿಂದಿಹ ದೇವಿಯಂ ನೋಡಿದನು ಮನದಣಿಯ ॥೧೯॥

ಹಲವು ಪರಿಯಲಿ ಮಗಳ ಹೃದಯದಿ
ಹೊಳೆವರಾಮನ ಮೂರ್ತಿ ಕಂಡನು
ನೆಲದೊಡೆಯನಭಿವರ್ಣಿಸಿದ ಜಾನಕಿಯ ಮಹಿಮೆಗಳ ।
ತೊಳಗಿ ವಂಶದ್ವಯದ ಕೀರ್ತಿಯ
ಬೆಳಗಿ ಸೀತಾರಮಣಿ ರಾಮನಿ
ಗೊಲಿದು ಸೇವಿಸಳಾವ ಸುಕೃತಳೊ ಧನ್ಯೆ ಜಾನಕಿಯು ॥೨೦॥

ಜನನಿ ಜನಕರ ನೆಲೆ ತವರ್ಮನೆ
ಯೆನಿಸೆ ಪುಳಕೋದ್ಗಮದ ಸುಖದಲಿ
ಜನಕನಂಘ್ರಿಗೆ ನಮಿಸಿ ತಾಯಿಯ ಹರಕೆಯಂ ಪಡೆದು ।
ಮನುಕುಲೋತ್ತಮನತ್ತ ಸಾರ
ಲ್ಕನುವರಿತು ಕೌಸಲ್ಯೆಯಾಡಿತ
ವನು ಸುಲೋಚನೆ ಜನಕಗೊರೆಯಲು ಜನಪ ಮೆಚ್ಚಿದನು ॥೨೧॥

ಬರಿಯ ಬೆಸೆ ನಾವರಿವೆವೆಂಬುದು
ಭರತನೆಂತಿಹನೆಂಬುದರಿಯೆನು
ಧರುಮ ಸತ್ಯ ಪಿಯೂಷ ಪೂರ್ಣನ ಮನವದೆಂತಿಹುದೊ ।
ಭರತ ನಿರವಧಿ ಗುಣನು ನಿರುಪಮ
ಪುರುಷ ಸಮನಾ ಭರತನೊಬ್ಬನೆ
ಭರತರಾಯಗೆ ಮೇರುಗಿರಿಗೆ ಸುಮೇರುವೇ ಸಮವು ॥೨೨॥

ಭರತ ರಘುವರನೊಡನೆ ವಿಪಿನದಿ
ಚರಿಸೆ ಮಂಗಳಮುಪ್ಪುದದರಿಂ
ಪುರವ ಲಕ್ಷ್ಮಣ ಹೊಗಲಿ ಮಾಸದು ಸತ್ಯಧರ್ಮಗಳು ।
ಹರಿಯನೇ ನಂಬಿಹನು ರಾಮನ
ಚರಣ ಸೇವೆಯೆ ಮೋಕ್ಷವೆಂದರಿ
ದರಿದು ಸಿಂಹಾಸನವ ತಂದಿಹ ಧರೆಯನರ್ಪಿಸಲು ॥೨೩॥

ಹೊಗಳುತಲಿ ಹಿರಿದಾಗಿ ಭರತನ
ರಘುವರನ ಸುಗುಣಗಳ ಜನಪತಿ .
ಮುಗಿಸಿದನು ರಾತ್ರಿಯನು ಮೂಡಲು ಸೂರ್ಯ ತಿಳಿದೆದ್ದು ।
ಒಗುಮಿಗೆಯೊಳಾಗೈದಿ ನದಿಯೊಳು
ಸೊಗದಿ ಮಿಂದನು ಮಾಡಿಪೂಜಾ
ದಿಗಳ ಮುಂದೇನೆಂದು ತನ್ನವರೊಡನೆ ಬೆಸಗೊಂಡ ॥೨೪॥

ಮಾಡಿ ಸಂಧ್ಯಾಪೂಜೆಗಳ ಕಾ
ಡಾಡಿ ಹೊಕ್ಕನು ಗುರುವಸಿಷ್ಠನ
ಬೀಡು, ನಮಿಸುತ ಪೇಳ್ದನಿದಿರೊಳುಸಿಂದು ಕರಮುಗಿದು ।
ಕಾಡಿನೊಳು ಬಳಲಿದರು ಸಕಲರು
ನೋಡು ಮರಳಲಿ ಭರತನಗರಿಗೆ
ನಾಡಸೇರಲಿ ಜನಕನುಚಿತವನೊರೆದು ಕಳುಹೆಂದ ॥೨೫॥

ಕಳೆದುವೈ ದಿನಹಲವು ಪರಿಜನ
ಬಳಗ ಬಾಂಧವ ಜನನಿ ಸೋದರ
ರೊಲಿದು ಬಂದರು ಮುಳ್ಳಿನೊಳು ಮಲಗುತ್ತ ನ್ಯೋಯುವರು |
ಮೆಲುತ ಬೇರನು ಜೀವ ಹಿಡಿವರು
ಬಳಲಿದರು ಬಲು ಕಷ್ಟಗೊಂಬರು
ತೊಲಗು ಸರ್ವರ್ವೆರಸಿ ನಗರಿಗೆ ತಂದೆ ನೀನೆಂದ ||೨೬||

ಎನಗಡವಿ ವಾಸವನು ನಿಯಮಿಸು
ತನುಜ ಭರತಂಗಿತ್ತ ರಾಜ್ಯವ
ಜನಕನಾಣ್ಣತಿ ಮರೆತು ಕಾಡೊಳು ನಿಂದನೇಕಿಂತು ?|
ಮುನಿಯದಿರು ಹಿಂದಿರುಗು ಭರ
ತನ ವಿಷಾದವ ಕಳೆದು ಪದುಳದಿ
ಜನನಿಯರ ಸಂತವಿಸು ಗುರುನೀನೆಂದ ರಘುರಾಮ ||೨೭||

ಕರುಣೆಯೆನಿತೋ ಭಕ್ತಜನರಲಿ
ಹರಿಗೆ ಧರೆಯ ಕ್ಷೇಮವೆನಿತೋ
ಒರೆದ ನುಡಿಯಲಿ ಶ್ರದ್ಧೆಯೆನಿತೋ ರಾಮಚಂದ್ರಂಗೆ |
ಚರಣ ಕಮಲವನುಳಿದು ಸುಖ ಲವ
ಮಿರದು ನಿನ್ನೀ ವಿರಹದುಃಖವ
ನೊರೆಯು ಬಲ್ಲರೆ ನಿನ್ನ ಸನ್ನಿಧಿವಾಸವೇ ಸ್ವರ್ಗ ||೨೮||

ಸಕಲ ಜೀವ ಪ್ರಾಣ ಭಕ್ತ
ಪ್ರಕರಪಾಲಕ ನಿನ್ನ ಸನ್ನಿಧಿ
ಸುಖದಿ ಸವಿಮಾತುಗಳ ಸೌಖ್ಯದಿ ದರ್ಶನದ ನೆಲೆಯಿಂ |
ನಿಖಿಳ ಜನ ಮುದದಿಂದಿರಲು ನಾ
ರಕ ಸಮಾನದ ಪುರವ ಹೊಗುವರೆ
ಸುಕೃತವೇ ವೈದೋರಿ ನಿಂದಿರೆ ಸೌಖ್ಯ ಬೇರಿಹುದೆ? ||೨೯||

ಮರುಳಹೆಶೆ ಗುರುವರನೆ ನೀನೇ
ನರಿಯದನೆ ದಶರಥಗೆ ವರಗುರು
ಪುರಕೆ ನೀಂ ಮರಳೆಂದು ವಂದಿಸಿ ನಡೆದನಾಶ್ರಮಕೆ ।
ಅರಘಳಿಗೆ ಮತಿಮರೆದು ತತ್ಕ್ಷಣ
ಧರಿಸಿ ಧೃತಿಯಂ ಜನಕ ನೃಪತಿಯು
ಹೊರೆಗೆ ಬಂದನು ರಾಮವಾಣಿಯನೆಲ್ಲವುಸುರಿದನು ॥೩೦॥

ಎಲೆ ನೃಪಾಲಕನೇನುಪಾಯವ
ತಿಳಿಯೆ ಸರ್ವರ ಹಿತವ ಚಿಂತಿಸು
ತಿಳೆಯನುದ್ಧರಿಸಿಂದು ಧರ್ಮಜ್ಞಾನಿ ರಾಜರ್ಷಿ ।
ಇಳೆಯರಸ ತನಯಂಗೆ ನಿಯಮಿಸಿ
ಹಳುವವಾಸನ ಮಮತೆಯಳಲಿಂ
ತೊಳಲಿ ತೆತ್ತನು ತನುವ ದಶರಥನೆಂದ ಜನಕಂಗೆ ॥೩೧॥

ಚದುರಮತಿಗಳು ನಾವು ವನಹೊಗಿ
ಸಿದೆವು ರಾಮನ ಸುಖವ ಬಯಸುತ
ಮುದದಿ ಮರಳುವೆವಿನ್ನು ಪುರವನು ಧನ್ಯರೆನಿಸುವೆವೆ ?।
ಇದಿರುಗೊಂಡಿರೆ ದುಃಖ ನಮಗಿ
ನ್ನೆದೆಯೊಡೆಯದೇ ಜೀವಹಿಂಗದೆ
ಬಿದಿಯ ಕೃತಿಗೀ ನೆಲವು ನುಂಗದೆಯೆಂದನಾನೃಪತಿ ॥೩೨॥

ತಾಪಸರು ಮಹಿಸುರರು ಮುನಿಗಳು
ಭೂಪನಿರವನ್ನರಿತು ಮನ ಸಂ
ತಾಪವಡೆದರು ನೊಂದು ದುಃಖಾಗ್ನಿಯಲಿ ಬೇಯುತಲಿ ।
ಭೂಪ ಸರ್ವವೆರಸಿ ಭರತ ಸ
ಮಾಪಕೈದಿದ ಜಗವನುಳಿವುದು
ರೂಪನಳಿವುದು ಭರತಗಾಯಿತ್ತೆಂದು ಮನದಂದು ॥೩೩॥

ಬರುವ ಜನಕನ ಪರಿಜನರ ನುಂ
ಬರಿದು ವಿನಯದಿ ಭರತ ಕೂರಿಸು
ತಿರಗೆ ಜನಕನ ಚರಣಯುಗಳಕೆ ನೊಸಲನೆತ್ತಿದನು ।
ತರಳನಿಂತೀ ವನದೊಳಿರ್ದೊಡೆ
ಧರೆಯ ಭಾರವ ಮರೆತು ನರಪತಿ
ಧರುಮ ಮಾಸದೆ ನೆನೆವುಪಾಯವನೆಂದ ಜನಕನೃಪ ||೩೪||

ಪರಮ ಸತ್ಯವ್ರತನು ಧಾರ್ಮಿಕ
ನಿರುತ ರಾಮಸ್ನೇಹಪರವಶ
ಕರುಣವಾರಿಧಿ ಸಕುಚ ಸಂಕಟಗಳಿಗೆ ಸೆರೆಯಾದ ।
ಅರಿಯುತುಚಿತಾನುಚಿತವಾದುದ
ಪರಿಹರಿಸು ಬಂದಿರುವ ಕಷ್ಟವ
ತರಳ ನಿನ್ನಾಜ್ಞಾನುಸಾರದಿ ನಡೆಯುವೆವು ನಾವು ||೩೫||

ಎನಲು ಪುಳಕಿತನಾಗಿ ಭರತನು
ಹನಿಗರೆದು ಕಣ್ಗಳಲಿ ಪೇಳ್ದನು
ಜನಕ ನೀನಿಂದೆನಗೆ ಸದ್ಗುರು ಬೇರೆ ಹಿತರುಂಟೆ ?।
ಅನುಸರಿಸಿ ನಿನ್ನಾಜ್ಞೆಗಳ ಪಾಲಿಸಿ
ಮನ ಮಲಿನಮಂ ತೊಡೆವೆ ನೀ ಬೆಸ
ಸೆನಗೆ ಲೋಕದ ಕಷ್ಟವೆಂತಳಿಯುವುದು ಹೇಳೆಂದ ||೩೬||

ಮರುಳನಂತಾನೊರೆವೆನರಿಯದೆ
ಹಿರಿಯ ಮಾತುಗಳರಿಯೆ ಮನ್ನಿಸು
ಪರಮಗುರು ನೀನೆನಗೆ ಪಾಲಿಸು ವಿಧಿವಿರೋಧಿಯಲಾ ।
ಅರಿತು ರಾಮಮನೋಭಿಲಾಷೆಯ
ಸರುವ ಹಿತಮಂ ಮರೆಯದೊದಗಿಹ
ಪರಮ ದುಃಖವ ಕಳೆಯಲುಚಿತವನೆಸಗು ನೀನೆಂದ ||೩೭||

ಭರತನಾ ಮಿತವಾಣಿಯಿಂ ನೃಪ
ಪರಮ ಹರುಷವತಾಳ್ದು ಕಷ್ಟವ
ಮರೆಯುಬಹುದೇ ರಾಮನೊಲಿವನೆ ನಮ್ಮುಪಾಯುಗಳ ।
ಧರಣಿಯಾರನು ಬಯಸಿನಿಂದಳೊ
ಅರಿಯಲಾಗದುಯೆನುತ ಜನಪತಿ
ಭರದಿ ರಾಘವನೆಡೆಗೆ ಬಂದನು ಸಕಲಜನಸಹಿತ ॥೩೮॥

ಅರರೆ ಬಂದುದೆ ಮತ್ತೆ ಕಂಟಕ
ಧರೆಯು ದುಷ್ಟರ ಹಾವಳಿಯು ಮೇಣ್
ಸುರರ ಸಂಕಟವರಿಯರೇ ರಾಮಾವತಾರದಲಿ ।
ಧರೆಯ ಭಾರವ ಕಳೆವನೆಂಬುದ
ನರಿಯರೇ, ರಾಜ್ಯಾಧಿಕಾರವ
ನಿರಿಸಿ ಕಂಟಕರಾದರೀ ಭರತಾದಿ ನಾಯಕರು ॥೩೯॥

ಎಂದು ಬರ್ದಿಲರೊಡೆಯ ಸುರರೊಡ
ನಂದು ನೆನೆದನು ಶಾರದೆಯು ಕುಮು
ದೇಂದುಮುಖಿ ಸಲಹಿಂದು ರಘುವರಗೇಕೆ ರಾಜ್ಯಮಿದು ।
ಹಿಂದೆ ಕೈಕೆಯ ನುಡಿಗೆ ಸಿಲ್ಕಿಸು
ತಿಂದು ಭರತನ ರಸನೆಯೊಳಗಿರು
ಬಂದ ಕಷ್ಟವ ನೀಗಲಾ ರಘುಜಾತ ವಿಪಿನದಲಿ ॥೪೦॥

ಎನಲು ಚತುರಾನನನ ಮಾನಿನಿ
ವಿನಯವೇಕಿದು ವಜ್ರಿ ಮನದಲಿ
ನೆನೆವೆ ಸ್ವಾರ್ಥವನೇಕೆ ಭರತನ ಮತಿಯನೊರೆಸುವೆನೆ ।
ವಿನಯಮತಿಯಿಂಗಿತವನರಿವವ
ರನಘರಾರೀ ಜಗದಿ ಹರಿಹರ
ವನಜಭವಗಳವಲ್ಲ ಸುಜ್ಞಾನ ಹೃದಯ ತಿದ್ದುವುದೆ ? ॥೪೧॥

ಅವವ ಹೃನ್ಮಂದಿರದಿ ಸೀತಾ
ಧವನು ಜಾನಕಿ ಸಹಿತಲಿರುವನು
ಅವನ ಮನಮಂದಿರದಿ ರವಿ ಬೆಳಗುವನು ಹೊಳಹೊಳೆದು ।
ಅವಗೆ ಮಾಯುವನೊಡ್ಡಲಾಪುದೆ
ಪವಿಧರನೆ ನೆನೆಯದಿರು ಚಂದ್ರನ
ಕವಳಗೊಳುವುದೆ ಕಿರಣವೆಂದಳು ಶಾರದಾದೇವಿ ||೪೨||

ಇಂದು ಸುರರ ಕ್ಷೇಮ ಭರತನ
ಪೊಂದಿದುದು ಸೀತಾರಮಣ ನವು
ಗಿಂದು ಬಂದಾಪತ್ತ ನೆನೆಯನೆ ಮರೆತನೇ ನುಡಿಯ ।
ಹೊಂದಿ ಮನುಜ ಶರೀರ ರಾಘವ
ನಿಂದು ಮರೆತನೆ ತನ್ನ ನೈಜವ
ಬಂದು ದನುಜರ ಸದೆಯದಿರ್ದೊಡೆ ಮುಂದೆ ಗತಿಯೇನು ||೪೩||

ಎಂದು ಪರಿಪರಿಯಿಂದ ಬರ್ದಿಲ
ರಂದು ಮರುಗಲ್ಕತ್ತಲಿತ್ತಲು
ಬಂದ ಜನಪತಿಯನ್ನು ಕಾಣುತಲಿದ್ದು ವಂದಿಸುತ ।
ಬಂದ ಗುರುವಿಂಗಭಿನಮಿಸಿ ನಲ
ವಿಂದ ಭರತನನಪ್ಪಿ ದಶರಥ
ನಂದನನು ಕುಳ್ಳಿರಿಸಿ ಸನ್ಮಾನಿಸಿದನೆಲ್ಲರನು ||೪೪||

ಹಲವು ವಿಧಿಗಳನೊರೆದು ನೀತಿಯು
ಪಳೆನುಡಿಗಳನ್ನರುಹಿ ಪಾರ್ಥಿವ
ಕುಲದ ಧರ್ಮವ ತಿಳುಹಿ ನೈತ್ರಾವರುಣಿ ರಘುವರಗೆ ।
ಹಳುವ ವಾಸವನುಳಿದು ರಾಜ್ಯವ
ತಳೆವುದೇ ಹಿತವೆಂದು ತಿಳುಹಿದ
ನೊಲಿದು ಜನಪತಿ–ಭರತರಿರ್ವರು ನೆನೆದ ಸಂಗತಿಯ · ||೪೫||

ತಂದೆ ನಿನ್ನಯ ವಾಣಿಯೆಮಗಭಿ
ವಂದ್ಯ ಲೋಕದೊಳದನು ಮನ್ನಿಪೆ
ವೆಂದು ನಿನ್ನಾಜ್ಞೆಯನು ತಲೆಯೊಳು ಪೊತ್ತು ನಡೆಸುವೆವು |
ಎಂದವಮಾತಿಗೆ ನೊಂದು ಸಜ್ಜನ
ವೃಂದಕಭಿವಂದಿಸಿದ ಹಸ್ತ
ದ್ವಂದ್ವ ಜೋಡಿಸಿ ನುಡಿದ ವಿನಯದಿ ಜಾನಕೀರಮಣ ||೪೬||

ತರವೆ ಪಿತೃಗುರುಯುಗಳಕಾಜ್ಞೆಯ
ನೊರೆವರೇ ಗುರುಹಿರಿಯರಿದಿರೊಳು
ತರಳನನುಚಿತ ಗೈವನೇ ಪಾಲಿಪುದನುಳಿದು |
ಗುರುವೆ ನಿನ್ನಯ ಮೇಣು ಜನಕನ
ಹಿರಿಯರಾಣತಿ ಸಲಹಿಕೊಂಬೆನು
ಪರಮ ಗುರು ನಿನ್ನಾಣೆ ದಶರಥನಾಣೆ ತಪ್ಪಿದೊಡೆ ||೪೭||

ಭೂಮಿಪಾಲ ವಸಿಷ್ಠರಿರ್ವರು
ರಾಮನಾ ನುಡಿಗೇಳಿ ಭರತನ
ಕಾಮನೆಯು ಕೈಗೂಡಿತೆಂದರು ಮೊಗವನೋಡುತಲಿ |
ತಾಮರಸಭವ ಸತಿಯು ನೆನೆಯಲು
ಕಾಮಿನಿಯು ಮುಖಪದ್ಮದಲಿ ನಿಂದಳು
ರಾಮ-ಗುರು-ಜನಕರನು ವಂದಿಸಿ ಭರತನಿಂತೆಂದ ||೪೮||

ತರಳ ತಾನಿವನೆಂದು ಮನ್ನಿಸಿ
ಸರಳ ಹೃದಯದಿ ಕಠಿನ ನುಡಿಗಳ
ನೊರೆವೆ ಸೀತಾರಾಮರಂಘ್ರಿಯ ನೆನೆದು ಭಕ್ತಿಯಲಿ |
ಕರುಣಿಸುವುದುದ್ಧರಿಸುವುದು ಪತಿ
ಕರಿಸಿ ತಮ್ಮನ ಸಲಹಿ ಕೊಂಬುದು
ಕರುಣವಾರಿಧಿ ರಾಮಚಂದ್ರಮಯೆಂದು ತುತಿಸಿದನು ||೪೯||

ದೇವ ರಘುಕುಲನಾಥ ದೇವರ
ದೇವ ಜನನೀಜನಕ ಸದ್ಗುರು
ಪಾವನ ಸ್ವಾಮಿ ಹೃದಯಾಂತರ್ಯಾಮಿ ಪರಿಪೂರ್ಣ |
ದೇವ ಕಲ್ಯಾಣಗುಣ ಭಕ್ತರ
ಭಾವನೆಯ ಕೈಗೂಡಿಸುವ ಮಹಿ
ಮಾವಲಂಬನ ಸಲಹು ಕರುಣದೊಳೆಂದು ಹೊರಳಿದನು ||೫೦||

ಶರಣಜನ ಮಂದಾರ ಶೌರೀ
ಸರುವ ಕಾರ್ಯಸಮರ್ಥ ಸುಗುಣಾ
ಕರನೆ–ದುರ್ಗುಣ ದುರಿತಪಾವಕ ದೇವ ರಘುನಾಥ |
ಧರೆಯೊಳನುಪಮ ಸ್ವಾಮಿ ಹಿರಿಯರ
ಹಿರಿಯ ನಿನಗಾಂ ಡಿಂಗರಿಗನಿರೆ
ಸರಿಯದಾವರು ನಮಗೆ ಲೋಕದಿ ಸ್ವಾಮಿದೂತರಲಿ ||೫೧||

ತಿಳಿಯದಾಂ ಪಿತೃವಚನ ದುರ್ಮತಿ
ಪಳಿದು ಪರಿವಾರವನು ಸೇರಿಸಿ
ಹಳುವ ಸಾರಿದೆನಿಂದು ಜನನೀ ಬಂಧುಜನ ಸಹಿತ |
ಇಳೆಯೊಳುತ್ತಮ ನೀಚರುಚ್ಚರು
ಹುಲುನರರು ಪೀಯೂಷ ಸುರಪದ
ಕೊಲುವ ವಿಷ-ಮರಣಾದಿ ಸಂಕುಲ ನೆರೆದಿಹುದು ನೋಡು ||೫೨||

ಕಾಣೆ ನಿನ್ನಾಜ್ಞೆ ನುಡಿಗಳ ಮುರಿ
ದೂಣೆಯುವ ಚಿಂತಿಪರ ಧರೆಯಲಿ
ಕಾಣೆ ಜಗದಲಿ ನಿನ್ನ ದರ್ಶನವೊಲ್ಲದಹಿತರನು |
ವಾಣಿ ಪಾರ್ವತಿ ಲಕ್ಷ್ಮಿ ಮೇಣ್ ಗೀ
ರ್ವಾಣರೊರೆಯರೆ ನಿಗಮಮಂತ್ರಗ
ಳಾಣೆಯಿಡವೇ ನಿನ್ನ ಮಹಿಮೆಯ ತೋರವೇ ಜಗಕೆ ||೫೩||

ಎನ್ನ ದೋಷಗಳನ್ನು ಕಳೆಯುತ
ಲುನ್ನತನ ಮಾಡಿರುವೆ ಲೋಕದೊ
ಳೆನ್ನವೋಲಾರುಂಟು ಧನ್ಯರು ಪಡೆದೆ ಕೃಪೆಯೊಲವ |
ಸನ್ನುತರ ಸಂಘದಲಿ ತಮ್ಮನಿ
ಗಿನ್ನು ನೆಲೆಯೆಲ್ಲೆನುತ ಭರತನಿ
ಗುನ್ನತಾಮಲ ನೆರೆಯ ಕಲ್ಪಿಸಿ ಹೊಗಳುತಿಹೆ ನೀನು ||೩೪||

ಶರಣು ಬರುವರು ನಿನ್ನ ಪಾವನ
ಚರಣ ಮಹಿಮೆಗಳರಿತು ಬಂದಾ
ನರರ ದುರಿತಾಂಕುರವ ದಹಿಸುತ ದೋಷಗಳ ಮರೆಸಿ |
ಹರಿಯೆ ನಿನ್ನವರೆಂದು ನೋಡುವೆ
ಕಿರಿಯ ಗುಣಗಳ ಹಿರಿದು ಮಾಡುವೆ
ಪರಮ ಪಾವನರಾಮ ನಿನಗಿನ್ನಾರು ಸರಿಯೆಂದ ||೩೫||

ನಿನ್ನ ನುಳಿದಿನ್ನೊಬ್ಬರುಂಟೇ
ಉನ್ನತ ಪ್ರಭು ಕ್ರೂರ ಕರ್ಮಿಗ
ಳೆನ್ನಪರಿಯಿನ್ನಿಹರೆ ರಘುಪತಿ ಲೋಕಮೂರರಲಿ |
ಸನ್ನುತರ ಸಂಘದಲಿ ಸೇವಕ
ರನ್ನು ಸನ್ಮಾನಿಸುವೆ ಕೀರ್ತಿಗ
ಳನ್ನು ಪಸರಿಸಿ ವರಶಿರೋಮಣಿಯೆನಿಸಿ ಹೊಗಳಿಸುವೆ ||೩೬||

ನೊಂದು ಶೋಕ ಸ್ನೇಹ ಕಾರಣ
ಮಂದಮತಿಯಾಂ ಮಗುವಿನೊಲು ನಡೆ
ತಂದೆ ನಿನ್ನೆಡೆಗಾಗುಹೋಗುಗಳನ್ನು ಮನದರದೆ |
ಇಂದು ನಾನವಿಧೇಯನಾಗುತ
ತಂದೆ ಬಂದಿರಲೆನ್ನನುನ್ನತ
ನೆಂದೆನಿಸಿ ನೀನಭಯವಿತ್ತಿಹೆ ಪರಮ ಕರುಣದಲಿ ||೩೭||

ನೋಡಿ ಪಾವನ ಚರಣಕಮಲವ
ಮೂಡಿದುದು ಸದ್ಭಕ್ತಿ ರಘುವರ
ಮೂಢನಂ ಪತಿಕರಿಸಿ ನೀನನುಕೂಲನಾಗಿರಲು |
ನಾಡ ಭಾಗ್ಯೋದಯವು ಕರುಣದಿ
ಕಾಡುನಾಡಾಗಿಹುದು ಭೃತ್ಯರ
ಪಾಡುಗಳ ನೀಬಲ್ಲೆ ಲೋಕವ ಸಲಹು ನೀನೆಂದ ||೫೮||

ಅರಿತವರಗತಿ ಮಾತನೊರೆವುದು
ತರವೆ ಸುಜ್ಞರು ಸುಹೃದಯರಿಗೆ ಪರಿ
ಪರಿಯ ಮಾತುಗಳಾಡೆ ದೋಷವು ಸೇವಕಾವಳಿಗೆ |
ಅರಿಕೆ ಮಾಡಿಹೆನೆನ್ನ ಪರಿಯಂ
ಶರಣಜನಮಂದಾರನಾಜ್ಞೆಯ
ನೊರೆದು ಮನ್ನಿಸುತೆನ್ನ ಶೀಘ್ರದಿ ವಿಧಿಸು ಕಾರ್ಯಗಳ ||೫೯||

ನಿಶಿ ಹಗಲು ನಿನ್ನೊಲವು ಜಾನದ
ಮುಸುಕಿನಲಿ ಮಲಗುವೆನು ನಾಮದೊ
ಳಸುವಿಡಿಯುತರಸುತಲಿ ಪದಮೂಲವನು ನೋಡಿದೆನು |
ಒಸೆದು ಬಿಜಮಾಡಿನ್ನು ಕೋಸಲ
ವಸುಮತಿಯನುದ್ಧರಿಸು ಕರುಣಿಸು
ಶಿಶುಗಳಲ್ಲವೆ ನಿನಗೆ ರಾಘವ ನಾವು ಸಲಹೆಂದ ||೬೦||

ಇಂದು ನಿನ್ನಾಜ್ಞಾಪ್ರಸಾದವ
ತಂದೆ ನೀಡೆಂದವನು ಬಹುಭಯ
ದಿಂದ ಹೊರಳಿದ ರಾಮಚರಣದಿ ಕರೆದು ಕಂಬನಿಯ |
ದಂದುಗವ ಬಿಡು ತಂದೆ ನೊಂದೈ
ಬಂದಕಾಲವ ನೋಡು ಹೃದಯದ
ಕಂದು ಕುಂದನು ನೀಗೆನುತಲೆತ್ತಿದನು ಸೋದರನ ||೬೧||

ನೆಗಹಿ ಕಂಬನಿದೊಡೆದು ರಘುವರ
ಸೊಗಸು ನುಡಿಗಳನೊರೆದು ಮೆಚ್ಚಿದ
ನಗಧರನು ಸೋದರನ ಭಕ್ತಿಯ ವಿನಯನುತಿಗಳನು ।
ತೆಗೆದುದಗ್ಗದ ದುಃಖ ಸರ್ವರು
ಹೊಗಳಿ ಮತ್ತಿನ್ನೇನನೊರೆವನೊ
ರಘುತನುಜನೆನೆ ಸುರರು ನಾಣ್ಚುತ ಸುಮವ ಸೂಸಿದರು ॥೬೨॥

ಅರಿತು ಸುರರಿಂಗಿತವ ಭರತನ
ಪರಮ ಭಕ್ತಿಯ ವಾಣಿಯಾಲಿಸಿ
ತರುಣಿಯರ ಕಳವಳವ ಸಚಿವರ ಪೌರ ಮುನಿಜನರ ।
ಹಿರಿಯ ದುಃಖವನರಿತು ಗುರುವಿನ
ಪರಿಯ ಕಾಣುತ ಜನನಿಯರ ಕರು
ಳರಿದು ಕಂಬನಿದುಂಬಿ ಕರಗಿದ ರಾಮಚಂದ್ರನು ॥೬೩॥

ಬರಡು ಕವಿಗಳ ನುಡಿಗೆ ಭರತನ
ನಿರುಪಮಗುಣಾಂಬುನಿಧಿ ನಿಲುಕದು
ಎರೆಯರಿದ ವರ್ಣಿಸಲು ಶೇಷಾದಿಗಳು ತಿಣುಕುವರು ।
ಹಿರಿಯನಲಿ ವೈಗಂಡು ಮಣಿದನು
ಧರೆಗೆ ತೋರಿದ ಹರಿಯ ಪರಿಗಳ
ನೆರೆದು ನಂಬಿದ ಜನರ ಕರುಣದಿ ಮುಕ್ತಿಗೇರಿಸಿದ ॥೬೪॥

ಹಿರಿಯನಾದೆನಗಿಂದು ಹಿರಿಯನು
ಕಿರಿಯನಾದೊಡಮೇನು ಗುಣದಲಿ
ಹಿರಿಯ ಭರತನೊಲಾರ ಕಾಣೆನು ಪರಮಪಾವನನು ।
ಅರಿವೆ ನೀ ರವಿವಂಶ ನೀತಿಯ
ಧರುಮ ದಶರಥನೃಪನ ಕೀರ್ತಿಯ
ನರಿಯದವನೇ ಸತ್ಕರೀತಿಗಳಿಂದ ರಘುರಾಮ ॥೬೫॥

ನಿನಗೆ ಭೇದಾಭೇದವರಿವುದು
ನಿನಗೆ ಕರ್ಮಾಕರ್ಮ ವಿದಿತವು
ನಿನಗುಮೆನಗುಂ ಪರಮಹಿತ ಮಾರ್ಗಗಳು ನಿನಗೊಳವು ।
ಅನುಜ ಧರ್ಮದಮೂರ್ತಿ ನೀನೇ
ನೆನೆವುಪಾಯವ ಪೇಳು ಕರ್ಮವ
ನನುಸರಿಸಿ ನಮಗೊಳ್ಳಿದನು ನೆನೆ ಬಂದ ಕಷ್ಟದಲಿ ॥೬೬॥

ಹಗಲು ರವಿಯಸ್ತಮಿಸೆ ಲೋಕದ
ಸುಗತಿಯುಳಿವುದೆ ತಂದೆ ಧರ್ಮದಿ
ಸೊಗದಿ ನಡೆವುದೆ ಸುಖವು ವಿಧಿನಿಯಮಗಳನನುಸರಿಸಿ ।
ಅಗಡು ಮಾನಿಸನಪ್ಪೆನೇ ಜಗ
ನಗದೆ ಸಗ್ಗದಿ ಜನಕನೇನೆಂ
ಬನು ಮರಳಿ ರಾಜ್ಯಾಧಿಕಾರವ ತಳೆಯೆ ನಾನೆಂದ ॥೬೭॥

ರಾಜಕಾರ್ಯ ಸುಕೀರ್ತಿ ಧರ್ಮವಿ
ರಾಜಮಾನ ವಿರಾಗ ಧರಣೀ
ತೇಜ ಧನಧಾಮಗಳು ಪೆರ್ಮೆಯು ದೊರೆಯೆ ಗುರುಕೃಪೆಯಿಂ ।
ಈ ಜನಪನೊಲವಿನಲಿ ಜನಕ ಸ
ರೋಜಪದ ದಯದಿಂದ ನಮಗಿ
ನ್ನೀ ಜಗದಿ ಜಯವಹುದು ಪರಿಣಾಮದಲಿ ತಿಳಿಯೆಂದ ॥೬೮॥

ಅಭಯವಿತ್ತಿಹನೆಮಗೆ ಸದ್ಗುರು
ವಿಬುಧ ಗುರುಪಿತೃ ವಚನಗ
ಳುಭಯರಿಗೆ ಸನ್ಮಾನ್ಯ ಧರಣಿ ಸಮಾನ ಧರ್ಮದಲಿ ।
ಪ್ರಭುವೊಲಿದು ಕೊಟ್ಟಾಜ್ಞೆ ಪಾಲಿಪು
ದುಭಯರಿಗೆ ವರಧರ್ಮವದರಿಂ
ವಿಭುವೆನಿಸು ಧರೆಗಿಂದು ನಗರಕೆ ಮರಳು ನೀನೆಂದ ॥೬೯॥

ಬಂದ ದುಃಖವ ನೆನೆಯದಿರು ಪಿತ
ನೆಂದ ನುಡಿಗಳ ಮರೆಯದಿರು ಧರೆ
ಗಿಂದು ಪತಿ ನೀನಾಗಿ ಪಾಲಿಸು ಧರುಮ ಕರುಮಗಳ ।
ಮುಂದೆ ವನವಾಸವನು ಮುಗಿಸುತ
ಬಂದು ಸೇರುವೆ ನಿನ್ನ ಹೃದಯಾ
ನಂದವನು ಮಾಡುವೆನು ನಗರಿಗೆ ತೆರಳು ನೀನೆಂದ ॥೭೦॥

ಅರಿವೆ ನಿನ್ನಿಂಗಿತವನಾದೊಡೆ
ಹಿರಿಯರಾಜ್ಞೆಯಲಂಘನೀಯವು
ತರಳ ನಿನಗಿದು ಕಠಿನವೆಂಬುದ ಬಲ್ಲೆನಂತಿರಲಿ ।
ಅರಿತು ಸೋದರ ಧರ್ಮ ರಕ್ಷಿಸು
ಹಿರಿಯನೆನ್ನನು ಪಿತನ ನುಡಿಯಂ
ತಿರಲು ವಿಪಿನದಿ ತಂದೆ ನೆರವಾಗೆಂದ ರಘುರಾಮ ॥೭೧॥

ಹಲವು ಪರಿಯಲಿ ಭರತನಳಲನು
ನಿಲಿಸಿ ಸೋದರ ಧರ್ಮವೊರೆಯಲು
ತಳೆದು ದುಃಖವನಣ್ಣ ನಿನ್ನಾಜ್ಞೆಗಳ ಮೀರುವೆನೆ ।
ನೆಲದ ಭಾರವ ತಳೆದು ನಗರದಿ
ಕಳೆವೆನೆಂತೋ ದೀರ್ಘದವಧಿಯ
ಸಲಹು ಸತ್ಪಥದೋರು ಹರಿತನಗೆಂದನಾಭರತ ॥೭೨॥

ಪರಮಪುರುಷನೆ ನಿನಗರಣ್ಯದಿ
ಧರಣಿಯೊಡೆತನವೀಯೆ ತಂದೆನು
ಶರಧಿ–ವರ ಗಂಗಾದಿ ತೀರ್ಥವ ವ್ಯರ್ಥಮಾದುದಲ ।
ಪರಮಪಾವನ ತೀರ್ಥ ಮೀಸಲು
ಹರಿಯೆ ತವ ಪಟ್ಟಾಭಿಷೇಕಕೆ
ಕರುಣಿ ಬೆಸಸೆನಗಿಂದು ಪಾವನ ಜಲವನೇಗೈವೆ ॥೭೩॥

ಒಗೆದುದೆನಗೊಂದಾಸೆ ಮನದಲಿ
ಖಗಮೃಗಂಗಳು ಚಿತ್ರಕೂಟದಿ
ಬಗೆಬಗೆಯ ನದಿತೀರ್ಥ ಪದ್ಮಾಲಯಗಳುಪವನವು ।
ರಘುವರನ ಪದಚಿಹ್ನೆಯಿಂದಲಿ
ನಗವಿದಮಲ ಪವಿತ್ರವಾಗಿರೆ
ಬಗೆವೆ ನೋಡಲ್ಕಿದನು ನೀಡಾಣತಿಯನೆನಗೆಂದ ॥೭೪॥

ಅತ್ರಿಮುನಿಯಾಜ್ಞೆಯನು ಪಡೆದೀ
ಚಿತ್ರಕೂಟವ ನೋಡು ನಡೆಸು ಪ
ವಿತ್ರ ಮಂಗಳಮಯದ ವನದಲಿ ಚರಿಸು ಭಯತೊರೆದು ।
ಚಿತ್ರಮಯಮಾಗಿಹುದು ಗಿರಿಯು ವಿ
ಚಿತ್ರ ನೋಟವ ನೋಡು ಮುನಿಯು ಪ
ವಿತ್ರತೆಯೊಳೀ ವನವು ಮಂಗಳ ಮೂಲವೆನಿಸಿಹುದು ॥೭೫॥

ಮುನಿಯು ತೋರುವ ನೆಲದಿ ತೀರ್ಥವ
ವಿನಯದಿಂದಿಡು ನಿನಗಿದಾಜ್ಞೆಯು
ಅನುಜ ನಡೆಯನೆ ಪಡೆದ ಋಷಿಯಾಣತಿಯ ಪದಕೆರಗಿ ।
ವನದ ಮಾಟವ ನೋಡೆ ರಾಮನ
ಘನಮಹಿಮ ಪದಮೂಲ ಸೋಂಕಿದ
ವನದ ನೆಲದಲ್ಲಡಿಯಿಡಲು ಹರ್ಷಿಸಿದ ತಾ ನೊಲಿದು ॥೭೬॥

ರವಿಕುಲಜರಿರ್ವರ ಸುಸಂವಾ
ದವನು ಮಂಗಳಕರದ ಮೃದುನುಡಿ
ಸವಿಯನಾಲಿಸಿ ಸುರರು ಹೊಂಪುಳಿವಡೆದು ಹರ್ಷದಲಿ ।
ಜವದಿ ಹೂಮಳೆಗರೆದರಾಗಳು
ದಿವಿಜರಿಪುಗಳ ಗೆಲುವನಿನ್ನೇ
ನವರು ರಾಮನ ಶರದಿ ಹತರಹರೆಂದು ನಿಶ್ಚಯಿಸಿ ॥೭೭॥

# ವಿಶ್ರಾಮ ೧೫

ಸೂ|| ಮೆಚ್ಚಿ ಭರತಗೆ ರಾಮ ತನ್ನಯ
ಮೊಚ್ಚೆಯವ ನೀಡಿದೊಡೆ ಭಕುತಿಯು
ಪೆರ್ಚಿ ರಚಿಸಿದ ಪಾದುಕಾಪಟ್ಟಾಭಿಷೇಚನವ ||

ಧನ್ಯ ರಾಘವ ಭರತರೇ ಜಗ
ಮಾನ್ಯರನುಪಮ ಧರ್ಮಿಗಳೆನುತ
ನನ್ಯ ಮನದಿಂ ಸುರರು ಕೈವಾರಿಸಿದರಿರ್ವರನು |
ಮಾನ್ಯ ವಚನವ ಕೇಳಿ ಖೇದಗ
ಳನ್ನು ಮರೆತರು ಜನಕ ಮುನಿಜನ
ಬೆನ್ನ ತೆತ್ತರು ದುಷ್ಟದುಃಖಕೆ ಹರುಷಮನರಾಗಿ ||೧||

ಜನಕ ಹೊಗಳಿದ ರಾಮ ಭರತರ
ಗುಣವ ಕೊಂಡಾಡಿದರು ಸಭಿಕರು
ವಿನಯದಲಿ ನಮಿಸುತ್ತ ಹೊಗಳುತ ನಲಿದು ನೋಡುವರು |
ಅನುಜಗೊಲಿದೀಪರಿಯ ಚಿಂತಿಸಿ
ಜನಕ ನೇಮದಿ ನಡೆವ ರಾಮನ
ಘನತರದ ಮಾರ್ಗವನು ಮೆಚ್ಚಿದರೆಲ್ಲರೊಮ್ಮನದಿ ||೨||

ಅತ್ರಿ ಮುನಿ ಕರೆಯುತ್ತ ಭರತನ
ಚಿತ್ರಕೂಟದ ತಪ್ಪಲಲಿಹ ಪ
ವಿತ್ರ ಕೊಳದಲಿ ತಂದ ತೀರ್ಥವನಿಡಲು ನಿಯಮಿಸಿದ |
ಚಿತ್ತ ಹರುಷದಿ ಸರುವಜನವೆರ
ಸುತ್ತೆ ನಡೆದನು ಸಕಲ ತೀರ್ಥವ
ನತ್ರಿಮುನಿ ಮಡುವಿನಲಿ ಹಾಯ್ಕಿದನುದಧಿಪರಿಯೆನಿಸಿ ||೩||

ಇದು ಮಹಾದ್ಭುತ ಜಲಧಿ ಪಾವನ
ವಿದರ ಮಹಿಮೆಯನರಿವರಾವರು
ಬುಧಜನರ ತಪ ಸಿದ್ಧಿ ಯೋಗದ ಪುಣ್ಯನೆಲವೆನಲು ।
ಮುದದಿ ಸುಂದರ ಕೂಪ ರಚಿಸಿದ
ರುದಕ ತುಂಬಲು ಮುಕುತಿ ನಿಲಯದ
ಕದವು ತೆರೆದುದು ಮಿಂದವರು ಹರಿಪದವ ಸೇರುವರು ॥೪॥

ಭರತ ತೀರ್ಥಾಂಕದಲಿ ಮುಕ್ತಿಯ
ಕರುಣಿಪುದು ಪಾವನದ ಜಲವೆಂ
ದುರುತರದಿ ಹರಸಿದನು ಮುನಿಪತಿ ಪರಮಹರುಷದಲಿ ।
ಒರೆದು ಪುಣ್ಯಸ್ಥಳದ ಚರಿತೆಯ
ಗಿರಿಯ ಮಹಿಮಾದರ್ಶನವ ವನ
ಚರರ ಪುಣ್ಯೋದಯವನಭಿವರ್ಣಿಸಿದನತ್ರಿಮುನಿ ॥೫॥

ಒರೆಯುತೊಬ್ಬನಿಗೊಬ್ಬ ಕಮಲಾ
ಕರದ ಮಹಿಮಾ ಸಂಗತಿಯನತಿ
ಹರುಷದಿಂದೈತಂದರಾ ಜನ ರಾಮಸನ್ನಿಧಿಗೆ ।
ಒರೆದನಾ ತೀರ್ಥ ಪ್ರಭಾವವ
ಹರಿಗೆ ಪದುಳದಿ ಪರಮ ಪುಣ್ಯೋ
ತ್ಕರುಷನತ್ರೀಮುನಿಪನಾನಂದಾಂತರಂಗದಲಿ ॥೬॥

ಹೇಳುತಲಿ ಧರ್ಮೇತಿಹಾಸ ಕ
ಥಾಳಿ ರಾತ್ರಿಯ ನೂಕಿದರು ಮುನಿ
ಪಾಳಿ ಜನರೊಡಗೂಡಿ ಸುಖದಿಂದೆದ್ದು ರವಿಯುದಿಸೆ ।
ಪಾಲಿಸುತ ಜಪ ನಿತ್ಯ ವಿಧಿಗಳ
ಕೇಳುತಾಣತಿ ಭರತ ಶತ್ರುಘ
ರೋಲಗಿಸಿ ಗುರು ರಾಮನತ್ರೀ ಮುನಿಯ ನಮಿಸಿದರು ॥೭॥

ಹೊರಟು ಕಾಲ್ನಡಿಗೆಯಲಿ ವನಮಂ
ಚರಿಸಿ ಕಲ್ಮುಳ್ಳುಗಳ ಗಣಿಸದೆ
ಹರಿ ನಡೆದ ನೆಲವೆಂದು ಬಣ್ಣಿಸಿ ಗಿರಿಗುಹೆಯ ನೋಡಿ ।
ಧರಣಿ ಮೃದುಮಯ ಮೊಗಲತ್ತಲು
ಸರಿದ ಮಾರುತ ಮಂದಗಮನದಿ
ಹರಿಯ ಭಕುತರಿಗೆತ್ತಣದು ಭೂತಗಳ ಬಾಧೆ ॥೮॥

ಚೆಲ್ಲಿ ಪೂಗಳ ಸುರರು ಹರಿನಡೆ
ದಲ್ಲಿ ನೆಳಲನು ನೀಡಿ ಹಸಿದರಿ
ಗಲ್ಲಿ ಫಲಮೂಲಾದಿ ತೋರುತ ರಾಮಗಿರಿಯಲ್ಲಿ ।
ಎಲ್ಲರನು ಮೃದು ಭೂಮಿ ನಡೆಸ
ಲ್ಕಲ್ಲಿ ವಿಹಗ ಸುವಾಣಿಯಿಂ ಪಾ
ಡಲ್ಕೆ ರಘುಪತಿ ಸೇವೆಯೆಂದುಲಿಯುತ್ತ ಸುಖಿಸಿದರು ॥೯॥

ಚಿತ್ರಕೂಟವ ತಿರುಗಿ ಪರಮ ವಿ
ಚಿತ್ರ ಗಿರಿಗುಹೆ ಗಹ್ವರಗಳ ಪ
ವಿತ್ರ ತಾಣವ ತೋರಿ ಭರತಗೆ ಸಕಲ ಚರಿತೆಗಳ ।
ಅತ್ರಿ ವೊರೆವನು ಹಿಂದೆ ತಪದಲಿ
ಚಿತ್ತ ಶುದ್ಧಿಯ ಪೊಂದಿ ದೇವರ
ಚಿತ್ತ ವೊಲಿಸಿದ ಹಲವು ಮುನಿಗಳ ಕತೆಗಳೆಲ್ಲರಿಗೆ ॥೧೦॥

ಮಿಂದು ಕೆಲವೆಡೆ ನಮಿಸಿ ಕೆಲವೆಡೆ
ನಿಂದು ಕೆಲವೆಡೆ ಕುಳಿತು ಕೆಲವೆಡೆ
ಸುಂದರೋದ್ಯಾನಗಳ ನೋಡುವ ಶತ್ರುಹಂ ವೆರಸಿ ।
ತಂದೆಯಡಿಗಳ ನೆನೆದು ಶೀಘ್ರದಿ
ಬಂದು ರಘುವರನಂಘ್ರಿಗೆರಗಿದ
ನಂದು ಬಳಲುತ ದಿನಪನಿಳಿದನು ಪಶ್ಚಿಮಾಂಬುಧಿಗೆ ॥೧೧॥

ಮರುದಿವಸ ಹರಿಪದವ ಸೇರುತ
ಕರವ ಜೋಡಿಸುತೆನ್ನ ಕಾರಣ
ಹರಿಯೆ ನಿನಗೀ ಪರಮ ದಾರುಣ ದುಃಖವೊದಗಿದುದು ।
ಮರಳಿ ಪುರವರಕೈದಿ ತವಪದ
ಸರಸಿರುಹಗಳ ಸೇವೆಯೆಸಗುವೆ
ಹರ್ಷಿಸಿ ಕರುಣದಿ ಕಳುಹಬೇಕೆಂದೆರಗಿದನು ಪದಕೆ ॥೧೨॥

ಅವಧಿ ಮುಗಿಯಲು ಪಾದದರ್ಶನ
ವವಧ ಪುರದಲಿ ನಮಗೆ, ಕಾಣದೆ
ಸವೆವೆನಗ್ನಿಯೊಳೆನ್ನನಾಹುತಿಯಿತ್ತು ಮರುದಿವಸ ।
ಅವಧಿ ಕಳೆವೆನು ಜೀವವಿಡಿವೆನು
ದಿವ್ಯ ನಾಮಸ್ಮರಣೆಯಿಂ ಶ್ರೀ
ಧವನೆ ವ್ನಿದೋರೆನಗೆ ಕರುಣದಿ ಕ್ಲ್ಪಪ್ತ ಕಾಲದಲಿ ॥೧೩॥

ಪುರಜನರು ಪರಿಜನರು ಪ್ರಜೆಗಳು
ಸರಸ ವಿಮಲ ಸ್ನೇಹ ದೊಲುಮೆಯೊ
ಳೆರಗಿ ಸೆರೆಯಾಗಿಹರು ನಿನ್ನಯ ಭಕ್ತಿಭಾವದಲಿ ।
ಅರರೆ ಕಣ್ಮರೆಯಾಗಿ ಬದುಕಿರ
ಲರಿವರೇ ಹರಿ ನಿನ್ನನುಳಿಯೆವು
ಪರಮಪದವನು ತೊರೆಯ ಬಲ್ಲೆವೆ ದೇವ ಕೇಳೆಂದ ॥೧೪॥

ದೇವ ನೀ ಸರ್ವಜ್ಞ ನಿನ್ನಯ
ಸೇವಕರ ರುಚಿ ಲಾಲಸೆಗಳಂ
ಭಾವಿಸುವೆ ಸಲ್ಲಿಸುವೆ ನೀನವುಗಳನು ನಲಿದೊಲಿದು ।
ನೀವು ದೀನಾನಾಥ ಬಾಂಧವ
ರಾವು ದೀನರು ಎಮಗೆ ಗತಿಮತಿ
ನೀವು ನಂಬಿದೆವಿನ್ನು ನಿಮ್ಮಡಿಯೆಂದನಾ ಭರತ ॥೧೫॥

ಮರುಗಲೇತಕೆ ಜನಕ ಭೂಪತಿ
ಗುರುವಸಿಷ್ಠರ ಪದವ ನಂಬಲು
ಧರೆಯೊಳೆಮಗೇನಹುದು ಪೊರೆಯುವರವರು ನಡೆಸುತಲಿ ।
ಭರತ ನಿನ್ನೀ ವ್ಯಥೆಯು ಬಿಡು ನಡೆ
ಪುರಕೆ ದಶರಥ ನುಡಿದ ತೆರದಲಿ
ತಿರೆಯನಾಳೆಂದೊರೆದ ರಘುಪತಿ ಮುಗುಳುನಗೆಗಳಲಿ ॥೧೬॥

ನಮಗೆ ಗುರುಪಿತೃಮಾತೃ ವಚನಾ
ಗಮವು ಪಾಲಿಸೆ ಪತಿತನಾಗನು
ಸಮನಿಪುದು ಘನಪುಣ್ಯ ಪಾವನಮೆನಿಪುದೀ ಬಾಳು ।
ವಿಮಲಮತಿ ಹದಿನಾಲ್ಕು ವತ್ಸರ
ನಮಗೆ ಸುವ್ರತ ಸಮಯ ಲೋಕವ
ಮಮತೆಯಿಂ ರಕ್ಷಿಪುದು ತೆರಳೆಂದೊರೆದ ರಘುರಾಮ ॥೧೭॥

ತಿಳಿಯುತೀ ಮರ್ಮಗಳ ಹೃದಯದ
ಕಳವಳವ ತೊಡೆಯೇಳು ಪುರವರ
ಕೊಲಿದು ಸಾರ್ರೈ ತರಳ ನಡೆನಡೆ ಧರಣಿಪತಿಯಾಗು ।
ಛಲವನೊರೆಸುತ ಮರಳಯೋಧ್ಯಾ
ಹೊಳಲ ಶೀಘ್ರದಿ ಕಾಲ ನಡೆಯಲು
ದೊಲಿದು ನಿನಗಿನ್ನೇಳು ಸಂದೆಗಬೇಡ ಹೋಗೆಂದ ॥೧೮॥

ಹಿರಿಯನಾಣತಿ ಕೇಳಿ ಮರೆತನು
ಭರತ ತನುವಂ ಸಚಿವ ಪರಿಜನ
ವರರು ಪರವಶರಾಗಿ ಹರಿಯೇ ತಮಗೆ ಗತಿಯೆಂದು ।
ಶರಿರ ಪುಳಕಿತರಾಗೆ ರಾಘವ
ಕರುಣದಲಿ ಪಾದುಕೆಯನಿತ್ತನು
ಭರತ-ಹಸ್ತದಿ ಹಲವು ಪರಿಯಲಿ ಧರ್ಮವೊರೆಯುತಲಿ ॥೧೯॥

ಚರಣಪೀಠವ ನೀಡೆ ರಾಮನು
ಸರುವ ಭಕ್ತರು ಜೀವಕಾಯುವ
ಪರಮ ಪಾಲಕರಿರ್ವರಂತಾ ಹಾವುಗೆಯ ನೋಡಿ ।
ಭರತರಾಯ ಸ್ನೇಹರತ್ನವ
ಪೊರೆವ ಸಂಪುಟವಾಯ್ತು ರಾಮೆಂ
ಬೆರಡು ಲಿಪಿಗಳು ಮೋಕ್ಷ ಸಾಧಕವೆಂದು ನಂಬಿದರು ॥೨೦॥

ಎರಡು ಬಾಗಿಲು ಕುಲಕೆ ಮತ್ತಿವು
ಎರಡು ಕರಗಳು ಕುಶಲ ಕರ್ಮಿಗೆ
ಎರಡು ಕಣ್ಗಳು ಧರ್ಮಸೇವಾನಿರತನಿಗೆ ಜಗದಿ ।
ಹರುಷವಾದುದು ಪಾದುಕಾಶ್ರಯ
ದೊರೆಯೆ ಭರತನು ರಾಮ ಸೀತೆಯ
ಚರಣ ತಲದಲ್ಲಿರುವೆನೆಂದೇ ಭಾವಿಸಿದ ಮನದಿ ॥೨೧॥

ಮುಂದಯೋಧ್ಯಾ ನಗರಿಗೈದಲು
ತಂದೆಯಡಿಗಳಿಗೆರಗಿ ಕಂಬನಿ
ದಂದು ನಿಂದಿರಲಮರಪತಿ ಮಾಯೆಯನು ಬೀಸಿದನು ।
ಅಂದಿನಾ ಸಮಯದಲಿ ಭಕ್ತರು
ದಂದುಗದೊಳಸುದೊರೆಯುತಿರ್ದರು
ಬಂಧನವ ಬಿಡಿಸಿದನು ಬೆಮೆಗೊಳಿಸುತ್ತ ದೇವೇಂದ್ರ ॥೨೨॥

ಪಯಣಕನುವಾಗಲ್ಕೆ ರಾಮನ
ನಯನಕಮಲಗಳಿಂದ ಧಾರಾ
ಮಯದಿ ಸುರಿದುದುವಾರಿ ಭಕ್ತರ ಮನದ ಸೂರೆಯಲಿ ।
ಸುಯಿದು ಜನಪ ವಸಿಷ್ಠಗೆರಗುತ
ನಯದೊಳನುಜನ ತಿಳುಹಿ ಕಳುಹಲು
ಭಯವ ನೀಗಿದುದಾಗ ಬರ್ದಿಲನಿಕರ ಮನದಿಂದ ॥೨೩॥

ಬಂದು ಕೈಕೆಯ ಚರಣಕಮಲವ
ವಂದಿಸಿದ ರಘುರಾಮ ಭಕ್ತಿಯೊ
ಳಂದು ತೊಡೆದನು ಮನದ ಶಂಕೆಯನೆಲ್ಲವೊರೆಸುತ್ತ ।
ಅಂದಣವನೇರಿಸಿದ ಮಾತೆಯ
ಸಂದರುಶನದಿ ಹರುಷಗೊಳ್ಳುತ
ಲಿಂದುಮುಖಿಯಂ ಕೋಸಲಕೆ ಬೀಳ್ಕೊಟ್ಟ ಸದುಳದಲಿ ॥೨೪॥

ಹಲವು ಪರಿಯಿಂ ವಿರಹ ಬಾಧೆಯು
ನಿಲಿಸಿ ಸರ್ವರ ಪಯಣಮಾಡಿಸಿ
ಕಳುಹಿ ಬಂದನು ಪರ್ಣಶಾಲೆಗೆ ರಾಮಚಂದ್ರಮನು ।
ಎಳೆದು ಪದಗಳ ರಾಮಜಪದಲಿ
ಕಳೆದ ಜೀವದ ದೇಹದೊಲು ಗತಿ
ಗಳನು ಕಾಣದೆ ಹೋಗುತಿರ್ದರು ರಥದ ಚಕ್ರದೊಲು ॥೨೫॥

ಗಿರಿಯು ಸಚರಾಚರವು ರಾಮನ
ಕರುಣ ಸವಿಯನ್ನರಿತು ಕಂಬನಿ
ಸರಿಯ ಸುರಿದುವು ತಮ್ಮೊಳರಿಯುತ ಭರತನಾಮಹಿಮೆ ।
ಸುರಿದು ಹೂಮಳೆ ಹೊಗಳಿ ಸುರಪಡೆ
ನೆರೆದು ತಂತಮ ಕಷ್ಟವೊರೆದೊಡೆ
ಹರಿಯು ಸಂತವಿಸುತಲಿ ಸರ್ವರಿಗಭಯ ತಾನಿತ್ತ ॥೨೬॥

ಬಂದು ಗುಹನಾಲಯಕೆ ದುಃಖದೊ
ಳಿರಿದು ಬೀಳ್ಕೊಂಡವನ-ಜನಕನ
ವಂದಿಸುತ ಕಳುಹಿಸಲು ಮಿಥಿಲಾಪುರವ ಸೇರಿದನು ।
ಹಿಂದಿನಾ ವೈಭವವ ನೆನೆಯುತ
ಬಂದ ವಿಧಿಯಂ ಬಗೆದು ಭರತನು
ಬಂಧು ಜನವೆರಸುತ್ತ ಬಂದನಯೋಧ್ಯಾಪುರವರಕೆ ॥೨೭॥

ರಾಮದರ್ಶನ ಲಾಭಕೋಸುಗ
ರಾಮಜಪ ತಪ ನಿಯಮ ಸುವ್ರತ
ಧಾಮರಾದರು ಕಾಮ ಭೋಗಾದಿಗಳ ತೊರೆಯುತಲಿ ।
ಆ ಮಹಾ ಹದಿನಾಲ್ಕು ವರ್ಷಗ
ಳೋ ಮಹಾ ಕಂಟಕವೊ ಪೇಳೆನು
ತಾ ಮಹಾಜನ ಕಾಯುತಿರ್ದರು ತೀರಲವಧಿಯನು ॥೨೮॥

ಜನಪನೆನಿಸಲ್ಕೊಲ್ಲ ಭರತನು
ಜನಪದವು ರಾಮಂಗೆ ಮೀಸಲು
ಜನರ ರಕ್ಷಣೆ ತನಗೆ ರಾಮಾಜ್ಞೆಯಲಿ ಲಭಿಸಿಹುದು ।
ಅನುಜ ಶತ್ರುಘ್ನನಿಗೆ ಕೊಟ್ಟನು
ಜನನಿಯರ ರಕ್ಷಣೆಯ ಭರತನು
ಜನಪ ಧರ್ಮಗಳರಿದು ನಿರ್ವಹಿಸಿದನು ರಾಜ್ಯವನು ॥೨೯॥

ಕರೆಸಿ ವಿಪ್ರಾಳಿಯನು ಪದಗಳಿ
ಗೆರಗಿ ನಿಮ್ಮಾಜ್ಞೆಯಲಿ ಪಾಲಿಪೆ
ಧರೆಯುನೆನ್ನುತ ಪರಿಜನರ ಪುರಜನರ ಪ್ರಜೆಗಳನು ।
ಕರೆಸಿ ಹಿತದಿಂ ನೆಲಸಿ ಪುರದಲಿ
ಮರುಗದಿರಿ ನೀವೆಂದು ಕಳುಹುತ
ಸರಿದ ಗುರು ಸನ್ನಿಧಿಗೆ ಶತ್ರುಹ ಸಹಿತ ವಹಿಲದಲಿ ॥೩೦॥

ತಂದೆ ನೀನಾಣತಿಯನಿತ್ತೊಡೆ
ಮುಂದೆ ಸುವ್ರತ ನೇಮದಿಂದಲಿ
ಮುಂದಿನವಧಿಯ ಕಳೆವೆ ರಘುವರ ಪುರಕೆ ಬಹತನಕ ।
ಕಂದ ನಿನ್ನಾಚರಣೆ ಸಕಲ ವ
ಸುಂಧರೆಯ ನಿಜನೀತಿ ಹೃದಯದಿ
ಬಂದ ಧರ್ಮವ ಮಾಡು ನೀನೆಂದೊರೆದನಾ ಮುನಿಪ ॥೩೧॥

ಆ ವಸಿಷ್ಠನನುಜ್ಞೆಯಿಂಲಿ ಭೂ
ದೇವರನು ಜೋತಿಷರು ಮಂತ್ರಿ ಜ
ನಾವಳಿಯ ಬರಮಾಡಿ ಶುಭದಿನ ಶುಭಮುಹೂರ್ತದಲಿ |
ದೇವ ರಘುಪತಿ ಪಾದುಕೆಯ ಭ
ಕ್ತ್ಯಾವಳಿಯ ಸಮ್ಮುಖದಿ ಭರತನು
ಪಾವನದ ಸಿಂಹಾಸನಮೊಳಿರಿಸಿದನು ಮುದದಿಂದ ||೩೨||

ಎರಗುತಲಿ ಕೌಸಲ್ಯೆ ಚರಣಕೆ
ಗುರುವಸಿಷ್ಠಂಗೆರಗಿ ರಾಮನ
ಚರಣ ಪೀಠಗಳಾಜ್ಞೆಯಂ ಪಡೆಯುತ್ತ ಭಕ್ತಿಯೊಳು |
ಸರಿದು ನಂದೀಗ್ರಾಮದೊಳು ತಾ
ವಿರಚಿಸಿದನೆಲೆವನೆಯ ರಾಜ್ಯೈ
ಶ್ವರಿಯ ತೊರೆಯುತ ಮುನಿಯ ಪರಿಜಿಂ ನಿಂದ ನಿಯಮದಲಿ ||೩೩||

ವರಜಟಾಜೂಟಶಿರ ಮುನಿಪಟ
ಧರಿಸಿ ದರ್ಭಾಸನದಿ ಮಂಡಿಸಿ
ತೊರೆದು ಭೋಜನ ವಸನ ಫಲಮೂಲಾದಿಗಳ ಸವಿಯುತಲಿ |
ಧರೆಯ ರಾಜ್ಯದ ಸಿರಿಗೆ ಸೋಲದೆ
ಹರಿಯ ಪದಮೂಲದಲಿ ಮನಮ
ನ್ನಿರಿಸಿ ಸುರಪ ಕುಬೇರರಂ ನಾಚಿಸಿದ ವಿರತಿಯಲಿ ||೩೪||

ಮಧುವಿನಾಸೆಯ ತೊರೆಯುತಳಿಕುಲ
ಪಡೆದು ಚಂಪಕ ಬನಮೊಳಿಹವೊಲು
ಬುಧರು ರಾಮ ಪದಾಬ್ಜದರ್ಶನ ಬಯಸಿ ತಪವೆರಸಿ |
ಚದುರ ರಾಮ ಪ್ರೇಮ ಪಾತ್ರಂ
ಗೊದವಿದತಿಶಯ ನೇಮ ಕಷ್ಟವೆ !
ಹೃದಯ ಶುದ್ಧಿಯೆ ನಿತ್ಯ ನಿರ್ಮಲ ನೀತಿ ಮತಿಯುತಗೆ ||೩೫||

ಕಂದಿದನು ಕೃಶವಾಗಿ ಭರತನು
ಕುಂದುವುದೆ ನಿಜಶಕ್ತಿ ತೇಜವ
ಪೊಂದಿ ಕಳೆಗೂಡಿದುದು ಮುಖದಲಿ ಕಾಂತಿಯುಕ್ಕಿದುದು ।
ಬೆಂದು ದುಃಖವು ನವನವೀನದ
ಸಂದ ಭಕ್ತಿಯು ಪೆರ್ಚೆ ತಾ ಮನ
ದಂದ ಶಪಥವು ಶಕ್ತಿವಡೆದುದು ನಿರ್ಮಲತೆಯಿಂದ ॥೩೬॥

ಸರುವ ಪ್ರಜೆಗಳೆ ರಾಮರೂಪರು
ಸರುವ ಜೀವರ ಸೇವೆ ಹರಿಕೃಪೆ
ಪರಮ ಪಾವನ ಪಾದುಕಾ ದರ್ಶನವೆ ಹರಿಯೊಲವು ।
ಪುರವನಾಶ್ರಮ ಮಾಡಿ ರಾಮಂ
ಗಿರದ ಕಷ್ಟವ ಕಂಡು ವ್ಯೆಮರೆ
ತಿರುವ ರಾಮಧ್ಯಾನ ತತ್ಪರನಾಗಿ ಕಡುತವಸಿ ॥೩೭॥

ನಿತ್ಯ ಪಾದುಕೆಯಾಜ್ಞೆ ಪಡೆಯುತ
ಮತ್ತೆ ಮಾಡುವ ರಾಜಕಾರ್ಯವ
ನುತ್ತಮನು ರಾಮಾಜ್ಞೆಯೆಂದೇ ಬಗೆದು ನಿರ್ವಹಿಸಿ ।
ಎತ್ತ ಬಲ್ಲರು ಧರೆಯ ಮಾನವ
ರೆತ್ತಲರಿವರು ಸುರರು ಭರತನ
ಸತ್ಯ ಸನ್ಮಾರ್ಗಗಳ ಗೂಢವ ರಾಮನಲ್ಲದಲೆ ॥೩೮॥

ಮೂವರ ಧ್ಯಾನದಲಿ ತನ್ಮಯ
ನಾ ವಿರಾಗಿಯು ಜಗದಿ ರಾಘವ
ದೇವನಲ್ಲದೆ ಕಾಣನಿತರವ ನೋಡಿದೆಡೆಗಳಲಿ ।
ದೇವಮಯವಿಾ ಲೋಕವೆಂದರಿಂ
ದಾವ ಸೇವಾಕಾರ್ಯವೆಸಗಲು
ದೇವ ತಾನಾಗುವನು ದೇವತ್ವವನು ನೋಡುತಲಿ ॥೩೯॥

ಅವರು ಹೇಳುವದಲಿರಲು–ಪುರದಲಿ
ಸವೆವ ದೇಹವ ಛಲದಿ ವಿರತಿಯ
ತವಸಿಯಾದನು ಲಕ್ಷ್ಮಣಾಗ್ರಜ ರಾಮನಂ ನೆನೆದು ।
ಅವನ ಚರಿತೆಗಳರಿವನಾವನು
ಭುವನವನು ತೃಣವಾಗಿ ಕಾಣುತ
ಸವಿದ ವೈರಾಗ್ಯವನು ರಾಮಪದಾಬ್ಜ ಸ್ಮರಣೆಯಲಿ ॥೪೦॥

ದುರಿತ ಕುಂಜರ ಸಿಂಹ ಜನಿಸದೆ
ಧರೆಗೆ ಗತಿಮತಿಯಿಲ್ಲ ಮುನಿಜನ
ರಿರುವಿಕೆಗೆ ನೆಲೆಯಿಲ್ಲ ಶಿಷ್ಟರ ಭರಣಮುನ್ನಿಲ್ಲ ।
ಭರತ ಚರಿತೆಗಳೊಲಿದು ಕೇಳ್ದರ
ದುರಿತನಾಶವು ರಾಮನೊಲಿವನು
ಭರತನೊಲು ಹರಿಭಕ್ತರುಂಟೇ ಹಿಂದು ಮುಂದಿನ್ನು ॥೪೧॥

ಸುಲಭನೊಲಿವನು ಕರೆಯಲವನೊಲು
ಇಳೆಯೊಳೊಲಿವವರಾರು ಭರತನ
ನೊಲಿಸದಿರ್ದೊಡೆ ಪಾಪಿಯಲ್ಲವೆ ಮಾನವನು ಮತ್ತೆ ।
ಕಲಿ ಸಮಯದಲಿ ವಿಬುಧ ಸತ್ಸಭೆ
ಯೊಳಗೆ ರಾಮಾಯಣಪನೊರೆಯಲು
ತಿಳಿವುದೇ ಕವಿಗಳಿಗೆ ಭರತನ ಕರುಣೆವೂದಗದಿರೆ ॥೪೨॥

ಇದು ರಘೂತ್ತಮ ಭರತಜೀವನ
ವಿದನು ಮೆಚ್ಚಿದ ರಾಮ ಲೋಕದೊ
ಳಿದನು ಕೇಳಿದ ನರರು ರಾಮಂಗೊಪ್ಪಿದರು ಮತ್ತೆ ।
ಇದುವೆ ಸತ್ಯದ ತವರು ಭಕ್ತರ
ನಿಧಿಯು ಧರ್ಮದ ನೆಲೆಯು ಮುಕ್ತಿಯ
ವಿಧಿಯು ಲೋಕದ ಸಕಲ ದರ್ಶನ ವಿರತಿ ಸೋಪಾನ ॥೪೩॥

ಸಕಲ ಕಲಿಮಲಹಾರಿ ಭಕುತಿಯ
ಶಕುತಿ ಸುಖಗಳ ತವರು ಮುಕುತಿಯ
ಮುಕುರ ದುರಿತೌಷಧವು ರಘುವರ ಚರಿತಮಾನಸವು |
ಯುಕುತಿ ಸಂತರಿಗಿದುವು ಲೋಕದ
ನಿಖಿಳ ನಿಜಗಳ ತೋರಿ ಮಾನವ
ನಿಕರಕೀವುದು ಸುಖದ ಸೂರೆಯ ರಾಮನಂಘ್ರಿಯಲಿ ||೪೪||

|| ಮಂಗಳಂ ||

———

# ಅರಣ್ಯಕಾಂಡ

## ವಿಶ್ರಾಮ ೧

**ಸೂ॥ ಚಿತ್ರಕೂಟವನುಳಿದು ವನದ ವಿ**
**ಚಿತ್ರಗತಿಯಂ ನೋಡುತತ್ರಿ ಪ**
**ವಿತ್ರ ದರ್ಶನವಡೆದು ನಡೆದರು ಮೂವರುಂ ಮುಂದೆ ॥**

ಶ್ರೀವರನ ಸೀತಾಧವನ ನಾ
ಮಾವಳಿಯ ನೆನೆವುತಲಿ ಸಂತತ
ದೇವದೇವೋತ್ತಮನ ಮನದಂದವನ ನುತಿಗೈದು ।
ಕಾವಕರುಣಾಮೂರ್ತಿ ಭಜಕರ
ಭಾವನೆಯ ಕೈಗೂಡಿಸುವ ವಿಭು
ಜೀವ ಸಂಪದ ಸೌಖ್ಯ ಪುರುಷಾರ್ಥಗಳನೊಲವಿಂದ ॥೧॥

ಮೂಲಧರ್ಮದ್ರುಮ ವಿವೇಕ ವಿ
ಶಾಲ ಜಲನಿಧಿ ಪೂರ್ಣಚಂದ್ರ ಸು
ಶೀಲ ವರವೈರಾಗ್ಯ ಸರಸಿಜಭಾನು ರಘುಸೂನು ।
ಕಾಳ ಪಾಪದವಾಗ್ನಿ ಮುಕುತಿ ಸು
ಖಾಲಯಂ ಶಿವರಾಮರಂಘ್ರಿ ವಿ
ಶಾಲ ಸರಸಿಜಕೆರಗಿ ರಾಘವ ಚರಿತೆಗಳನೊರೆವೆ ॥೨॥

ಗಿರಿಜೆ ನಿನಗಾನೊರೆದೆ ಭರತನ
ಚರಿತೆ ಮತ್ತಾ ರಾಮ ವಿಪಿನದಿ
ಚರಿಸಿ ತೋರಿದ ಲೀಲೆಯೆಲ್ಲವ ಕೇಳು ಭಕ್ತಿಯಲಿ ।
ತಿರಿದು ಹೂಗಳ ತಂದು ಮುಡಿಸುವ
ಧರಣಿಜೆಗೆ ಹೂಜಾಲ ತರುಲತೆ
ಯಿರವ ವಿವರಿಸಿ ಹರುಷಗೊಳಿಸುವ ಮರೆಸಿ ದುಃಖಗಳ ॥೩॥

ಇರಲಿರಲು ಸುರಪತಿಯ ಸುತ ರಘು
ವರನ ಪರಿಕಿಸೆ ಬಂದ ವಾಯಸ
ಪರಿಜಿನಿಂ ಮೂಢಾತ್ಮ ಜಲಧಿಯನಿರುವೆಯರಿವಂತೆ ।
ಧರಣಿಜೆಯ ಚರಣವನು ಕೊಕ್ಕಿಂ
ದಿರಿಯೆ ಶೋಣಿತ ಧಾರೆಯಿಳಿದುದು
ಹರಿಯು ಕಂಡದ ಕೆಂಡವಾದನು ವಾಯಸವ ನೋಡಿ ||೪||

ತೃಣವ ಬಾಣವ ಗೈದು ಮಂತ್ರಿಸಿ
ಕುಣಿವ ವಾಯಸಕೆಸೆಯಲಟ್ಟಿತು
ಅಣಲೊಣಗಿ ಸುರಪಸುತ ನಿಲ್ಲದೆ ಪಿತನೆಡೆಗೆ ಬಂದ ।
ಮಣಿವ ಮಗನಂ ನೋಡಿ ಮರುಗುತ
ಮನದಿ ನಿಜವರಿಯುತ್ತ ಕೋಪದಿ
ಕೊನೆಗೆ ರಘುಪತಿ ವಿಮುಖನಂ ತ್ಯಜಿಸಿದನು ಖತಿಯಿಂದ ||೫||

ಮತ್ತೆ ಕಾಕಾಸುರನ ವೇಷದೊ
ಳತ್ತು ದುಃಖದಿ ದಿಕ್ಕುಗಾಣದೆ
ಸುತ್ತಿದನು ದೂರ್ವಾಸ ಚಕ್ರಕೆ ಸಿಲ್ಕಿ ನವೆದಂತೆ ।
ಸತ್ಯಲೋಕದಿ ವಿಧಿಯು ಬೇಡಿದ
ಮತ್ತೆ ಕಾಡಿದನೆನ್ನ ಮುರುಹಿದ
ರೆತ್ತ ಹೋದರು ಪೊರೆಯ ರಾಮತೃಣಾಸ್ತ್ರ ಪರಿಹರಿಸಿ ||೬||

ಕರೆದು ಕೂರಿಸರಾರು ವಾಯಸ
ದುರುಳನಂ – ಹರಿವೈರಿಗಾವನು
ಕರೆಯುತಾಸನವೀವ ಮನ್ನಿಸಿ ಪೋಶಿಸುವನಾರು ? ||
ಹರಿ ವಿರೋಧಿಗೆ ತಂದೆಯೇ ಯಮ
ಪೊರೆವ ತಾಯಿಯೆ ಮೃತ್ಯುವೆನಿಪಳು
ಹರಿಯ ವಿಮುಖಗೆ ಸುಧೆಯೆ ವಿಷವಾಗುವುದು ಲೋಕದಲಿ ||೭||

ಪರಮ ದುಃಖದಿ ಶಕ್ರಪುತ್ರನು
ನೆರೆಯ ಕಾಣದೆ ಬೆನ್ನ ಬಿಡದಿಹ
ಶರಕೆ ಬೆದರುತಲೋಡುತಿರ್ದನು ಜೀವ ಭಯದಿಂದ ।
ಸುರಮುನಿಯು ಕಂಡದನು ಸನ್ಮತಿ
ಯೊರೆದು ರಾಘವನಡಿಗೆ ನಮಿಸುತ
ಕರುಣೆ ಭಿಕ್ಷೆಯ ಬೇಡು ದೀನಾನಾಥ ಬಾಂಧವನ ॥೮॥

ಎನಲು ಹರಿದ್ಯೈತಂದು ರಾಮಗೆ
ಮಣಿದು ರಕ್ಷಿಸುರಕ್ಷಿಸೈ ತ
ಪ್ಪೆಣಿಸಿ ನಾನಪರಾಧಿಯಾದೆನು ಪಾದ ಕಮಲದಲಿ ।
ಎಣಿಸಿದೆನೆ ಮಹಿಮೆಗಳ ನಿನ್ನಯ
ಗುಣವ ನೆನೆದೆನೆ ಪತಿತಪಾವನ
ನೆನುವ ಕೀರ್ತಿಯ ಪಡೆದ ದೇವನೆ ಸಲಹು ಸಲಹೆಂದ ॥೯॥

ನಿನ್ನನರಿತವನಲ್ಲ ಗರ್ವದಿ
ಗನ್ನಗತಕದಿ ಬಂದು ಪೊಂದಿದೆ
ಬನ್ನವಂ ಕಾಪಾಡು ಕರುಣಾಮೂರ್ತಿ ಪೊರೆಯೆನಲು ।
ಕಣ್ಣನೊಂದನು ಬಲಿಯನಿಕ್ಕಿ ವಿ
ಷಣ್ಣ ವದನನನುಳುಹಿ ಕಳುಹಿದ
ನಿನ್ನ ದುಷ್ಕೃತಿಯೆಸಗ ಬೇಡೆಂದೊರೆದು ಕರುಣದಲಿ ॥೧೦॥

ಖಳ ಜಯಂತನು ಮಾಯವಶದಿಂ
ದೆಳಸಿ ದೋಷವ ದ್ರೋಹವೆಸಗಲು
ಕೊಲಲುಚಿತಮಾಗಿರಲು ಕರುಣದೊಳುಳುಹಿದನು ರಾಮ ।
ಬಲದೊಳಿದಿರಾರಿಹರು ರಾಮಂ
ಗಿಳೆಯೊಳೀಪರಿ ಹಗೆಯ ಮಸೆವರೆ
ಕಲಕಿ ಹುತ್ತವ ಕೈಯನಿಕ್ಕುತ ಬದುಕಿ ಬರಬಹುದೆ. ॥೧೧॥

ಶ್ರುತಿ ಸುಧೆಯು ಸಾರುತಿಹ ಚರಿತೆಯ
ನತಿ ಮನೋಹರವಾಗಿ ತೋರಿದ
ಪತಿತ ಪಾವನಚಿತ್ರಕೂಟದೊಳಿರುತವಿನ್ನೆವರ |
ಇತರರರಿತರು ದರುಶನಾತುರ
ಹಿತರು ಮನಬಂದಾಗ ಬರುವರು
ಸತತವೆಂದನುಮಾನವೊಕ್ಕದು ರಾಮಚಂದ್ರಮಗೆ ||೧೨||

ಸರುವ ಮುನಿಗಳಿಗೆರಗಿ ಮೂವರು
ಸರಿದರಲ್ಲಿಂದತ್ರಿ ಮುನಿಪದ
ವರವ ಸೇರುತ ನಮಿಸುತನಸೂಯೆಯನು ವಂದಿಸುತ |
ಬರಸೆಳೆದು ಬಿಗಿಯಪ್ಪುತಿರ್ವರ
ಹರಸಿ ಸೀತೆಯ ರೋಮಪುಳಕಿತ
ಶರಿರನಾದನು ಹರುಷಜಲದಿಂದವರ ನೆನೆಯಿಸಿದ ||೧೩||

ಅನುವಿನಿಂ ಋಷಿವರರು ಮೂವರ
ಮನದಣಿಯ ಕೊಂಡಾಡಿ ಕರೆಕರೆ
ದನಘರನ್ನಾಶ್ರಮಕೆ ಪೂಜಿಸಿ ಮಧುರ ಫಲವಿತ್ತು |
ವಿನಯದಿಂ ನುಡಿಸುತ್ತ ಕರುಣಾ
ವನಧಿ ನಮ್ಮಿಷ್ಟಗಳನರಿಯುತ
ವನಕೆ ಬರುತಲಿ ದಿವ್ಯದರ್ಶನವಿತ್ತೆ ಸತಿಸಹಿತ ||೧೪||

ಕರಮುಗಿಯುತತ್ರಿ ಮುನಿ ರಾಮನ
ಪರಮ ಸುಂದರರೂಪ ಸುಧೆಯಂ
ಭರದೊಳೀಂಟುತ ನುಡಿಯು ಬಾರದೆ ಬೆಮರ ಹರಿಸುತಲಿ |
ಹರುಷದಲಿ ಮೈಮರೆತು ಸೀತಾ
ವರನ ನಗೆಮೊಗ ನೋಡಿ ದಣಿಯದೆ
ಪರಮ ಸುಖದಲಿ ಪುಳಕ ಜಲದಲಿ ನನೆದು ನೋಡುವನು ||೧೫||

ಭಕುತರಪರಾಧಗಳ ಮನ್ನಿಸಿ
ಭಕುತ ಭೃತ್ಯನೆ ನಡೆದು ಸೇವಕ
ನಿಕರಕೀ ದರ್ಶನವ ನೀಡುವೆ ಕಿಂಕರರ ಮಾಡಿ ।
ಮುಕುತಿ ಕರಗತವಲ್ಲವೇ ಪ್ರಭು
ಭಕುತ ಜನರಿಗೆ ನಿಲುಕದಾವುದು
ಯುಕುತಿಯೊಂದೇ ನಿನ್ನಪದ ಸಂಸ್ಮರಣೆ ಲೋಕದಲಿ ॥೧೬॥

ರಾಮ ರವಿಕುಲತಿಲಕ ಶಿವಧನು
ಭೀಮವಿಕ್ರಮ ಹರಣ ಕದನೋ
ದ್ದಾಮ ನೀನಾಜಾನುಬಾಹು ಪರಾಕ್ರಮದಿ ಸರಿಯೆ ।
ಸ್ವಾಮಿ ನೀ ಭುವನೈಕ ನಾಯಕ
ರಾಮ ವೈಭವವರಿವೆನೇ ರಿಪು
ಧೂಮ ರಾಕ್ಷಸ ಕಾಲಭೈರವ ಶಿಷ್ಟ ಸಂರಕ್ಷ ॥೧೭॥

ಮನಸಿಜಾರಿ ವಿಹಾರಿ ವಿಧಿಸುರ
ವಿನುತ ಶುದ್ಧ ಸುಬೋಧ ಸುಂದರ
ವಿನಯ ಮೂರುತಿ ದುರಿತದೂಷಣ ಹಾರಿ ದನುಜಾರಿ ।
ಅನುಜ ಸತಿಯುರ್ವೆರಸಿ ದಶರಥ
ತನಯ ದರುಶನವಿತ್ತೆ ಭಕ್ತರೊ
ಳೆನಿತು ಕರುಣಾದೃಷ್ಟಿ ನಿನಗೆಂದತ್ರಿ ಹೊಗಳಿದನು ॥೧೮॥

ಇರುವೆ ಹರಿ ನೀನೊರ್ವನದ್ಭುತ
ಪರಮವಿಭು ಪರಮೇಶ್ವರನು ಗುರು
ವರನೊಡೆಯ ನೀನೊರ್ವ ಶಾಶ್ವತನತುಲಗುಣಪೂರ್ಣ ।
ಹರಿಯೆ ಸತ್ವ ರಜಸ್ತಮೋಗುಣ
ದೆರಕ ನಿನ್ನಲಿ ಜಗವ ಸೃಷ್ಟಿಸಿ
ಪೊರೆಯುತುಪಸಂಹರಿಪ ಪ್ರಭುನೀ ಜಾನಕೀ ರಾಮ ॥೧೯॥

ಎಲ್ಲಿ ನಿನ್ನ ಸ್ಮರಣೆ ಮತ್ತಿ
ನ್ನೆಲ್ಲಿ ನಿನ್ನಯ ನೆನವು ಲೋಕದೊ
ಳೆಲ್ಲಿ ರಘುಪತಿ ಪೂಜೆ ಹರಿ ನಡೆದಲ್ಲಿ ನುಡಿದಲ್ಲಿ |
ಬಲ್ಲವನ ಸಿರಿನಾಮ ಭಜನೆಗ
ಳೆಲ್ಲಿ ನಡೆಯುವುದಲ್ಲಿ ಮಂಗಳ
ಚೆಲ್ಲಿ ಮುಕ್ತಿಯು ನಲಿದು ಬರುವಳು ಒಲಿಯುತಪ್ಪುವಳು ||೨೦||

ರಾಮನನುಪಮ ರೂಪ ನಿರ್ಗುಣ
ಭೂಮಿಜಾಪತಿ ತೋರು ಕೃಪೆಯಂ
ಕೋಮಲಾಂಗ ಪದಾಬ್ಜ ಭಕ್ತಿಯ ನೀಡು ನಮಿಸುವೆನು |
ರಾಮ ನಾಮಕೆ ನಿಲುಕದಾವುದು
ರಾಮನೆಂದರೆ ಮೂಕ ಬಧಿರರು
ಭೂಮಿಯಲಿ ಕುಣಿ ಕುಣಿದು ಹಾಡುವರೊಲಿದು ಹರಿನಿನ್ನ ||೨೧||

ಚಿಂತಿಸಲಿ ತವ ಚರಣಯುಗಳ ನಿ
ರಂತರವು ನಿಜಬುದ್ಧಿಯೆಡಬಿಡ
ದಂತೆ ನೆನೆಯಲಿ ನಿನ್ನ ನಾಮುವನೆನ್ನ ಮಾನಸವು |
ಸಂತಸದಿ ಪೂಜಿಸಲಿ ಕರಗಳ
ನಂತ ರೂಪನೆ ನರ್ತಿಸಲಿ ಪದ
ಸಂತತವು ತವಪಾದತೀರ್ಥವ ಸವಿಯಲೀ ರಸನೆ ||೨೨||

ಜನುಮ ಜನುಮದಿ ನಿನ್ನ ದರ್ಶನ
ವೆನಗೆ ದೊರೆಯಲಿ ಶುದ್ಧ ಚಂದ್ರನ
ನೆನೆದು ಸುಖಿಪ ಚಕೋರ ಪಕ್ಷಿಯ ತೆರದೊಳಾನಿರಲು |
ಎನಲು ವಿನಯದೊಳೆರಗಿ ರಾಘವ
ಮುನಿಗೆ ವಿಶ್ರಮಿಸಿದನು ಸೊಗದಿಂ
ವನದ ನಾನಾ ಸೊಬಗನಭಿವರ್ಣಿಸುತ ನಸುನಗುತ ||೨೩||

ಎರಗುತನಸೂಯೆಯನು ಜಾನಕಿ
ಹಿರಿಯಮಾನ ಸುಶೀಲ ಘನತೆಯ
ಭರದಿ ಸೇರ್ದಳು ಮುದದಿ ಮುನಿಸತಿ ಸನಿಹಮಂ ಬಯಸಿ ।
ಸರುವಲೋಕ ಸುಖಪ್ರದಾಮಣಿ
ಧರಣಿಜಾ ಬ್ರಹ್ಮಾಂಡ ಮಾತೆಯು
ಸಿರಿಯು ಶಕ್ತಿಯು ತಾನಯೋನಿಜೆ ಮಂಗಳ ಪ್ರದಳು ॥೨೪॥

ಆದಿ ಲಕ್ಷ್ಮಿಯನಾದಿ ಪುರುಷನ
ಭೇದಿಸಿದ ವಿಜ್ಞಾನಕಾರಿಣಿ
ಮಾಧವಾ ಶಿವಬ್ರಹ್ಮ ಮೂವರ ನಡೆಸಿ ಭಯಹರಿಸಿ ।
ಈ ಧರೆಯ ಮಾಧುರಿಯ ತೋರಿದ
ಶ್ರೀಧರಾವಧುಜಾತೆ ಹರುಷದಿ
ಸಾಧುಸತಿಯನಸೂಯೆ ಬಳಿಯಲಿ ಸುಖವಪೊಂದಿದಳು ॥೨೫॥

ತಂದು ದಿವ್ಯ ಸುವಸ್ತ್ರ ಭೂಷಣ
ಸುಂದರಾಂಗನ ಸಿಂಗರಿಸಿದಳು
ಕುಂದದೆಂದಿಗು ವಿಮಲ ನೂತನವಾಗಿ ಹೊಳೆಯುವುವು ।
ಹಿಂದೆ ಸರಿವುತ ದುಃಖ ಸಾವ್ರ್ದು
ಹೊಂದದಿವುಗಳು ಭಯದಿ ಗರುಡನ
ದಂದುಗದೊಳೋಡುತಿಹ ಸರ್ಪದ ತೆರದಿ ಹಿಂದಿಕ್ಕಿ ॥೨೬॥

ಕೊಟ್ಟು ಚಿತ್ರವಿಚಿತ್ರ ನಿರ್ಮಲ
ದುಟ್ಟುಡೆಯ ಜನಕಜೆಗೆ ಪದುಳದೊ
ಳಿಷ್ಟ ನುಡಿಯಿಂ ನುಡಿಸಿ ಸನ್ಮಾನಿಸಿದಳವಳನ್ನು ।
ಮುಟ್ಟುಮೀರಿ ಪ್ರೀತಿಹರಿದುದು
ತುಷ್ಟಿವೃಷ್ಟಿಯು ಬಲದಿ ಸೀತೆಗೆ
ಕೊಟ್ಟು ಬಹುಮಾನಗಳ ಹರಸಿದಳಾಗಳನಸೂಯೆ ॥೨೭॥

ಮುನಿಸತಿಯು ಧರ್ಮಗಳ
ಜನಕಜೆಗೆ ಮೃದುವಾಣಿಯಲಿ ಪೇ
ಳ್ದನುಜರಗ್ರಜ ತಂದೆತಾಯ್ಗಳು ಬಂಧುಜನವೆಂಗೆ ।
ಘನಸುಖವ ನೀಡುತಿಹರಾದೊಡೆ
ಇನಿಯನಿಹ ಪರದೈವ ನಾರಿಯು
ನನವರತ ಸನ್ಮಾರ್ಗದಲಿ ನಡೆಸುವ ಗುರುವು ಭರ್ತಾರ ॥೨೮॥

ಇನಿಯ ವೃದ್ಧನು ರೋಗಿ ಬಧಿರನು
ಧನವಿಹೀನನು ಜಡನು ಮೂಕನು
ವಿನಯ ಹೀನನು ಕುರುಡ ದೀನನು ಕೋಪಿಯೆಂದವನ ।
ವನಿತೆಯವಮತಿಗೊಳಿಸಲಾಗದು
ಇನಿಯನೇ ದೇವತೆಯು ಪತಿಪದ
ವನಜ ಸೇವೆಯ ಮರೆಯೆ ತಪ್ಪದು ನರಕ ವಧುಗಳಿಗೆ ॥೨೯॥

ಸತಿಗೆ ಹದಿಬದೆ ಧರುಮ ಮೂಲವು
ಸತಿ ಸತೀತ್ವದಿ ಕಷ್ಟವಿಲ್ಲದೆ
ಸತುಕರುಮದಲಿ ಪರಮಪದವನು ಪಡೆದು ಸುಖಿಸುವಳು ।
ಪತಿವಿರೋಧಿನಿಯಾಗಿ ಮುಂದಿನ
ಗತಿಯ ಮುರಿವಳು ಮರಳಿ ಜನುಮದಿ
ಪತಿಯ ತಾರುಣ್ಯದಲಿ ನೀಗುತ ವಿಧವೆಯೆನಿಸುವಳು ॥೩೦॥

ಎನಿತು ಪಾಪವ ಮಾಡಲೇನವ
ಳಿನಿಯ ಸೇವಾಫಲದೊಳುತ್ತಮ
ಳೆನಿಸೆ ಕೊಂಡಾಡುವುದು ವೇದಗಳವಳ ಮಹಿಮೆಗಳ ।
ವನಜಲೋಚನೆ ಪತಿಪರಾಯಣೆ
ವಿನುತ ತುಲಸೀದೇವಿಯೊಲು ಘನ
ವೆನಿಪ ಹರಿಪದ ಸೇರ್ದು ಮುಕ್ತಿಯ ಪಡೆದು ಸುಖಿಸುವಳು ॥೩೧॥

ತರಳೆ ನಿನ್ನ ಸ್ಮರಣೆ ಮಾತ್ರದಿ
ದುರಿತ ರಾಶಿಗಳುರಿದು ಬೀಳ
ಲ್ಕುರುತರದ ಸುವ್ರತವ ಮಾಡಲು ನಿನ್ನ ನೆನೆಯುತ್ತ ।
ತರಳೆಯರು ಮನಶುದ್ಧಿ ಪಡೆವರು
ಧರಣಿ ಪಾವನವೆನಿಪಳದರಿಂ
ದೊರೆದ ರಘುಪತಿ ನಿನಗಿದೆಲ್ಲವ ಮುನ್ನ ಮಮತೆಯಲಿ ॥೩೨॥

ಪರಮ ಸುಖದಾಯಕದ ನುಡಿಗಳ
ಧರಣಿಜೆಯು ಕೇಳುತ್ತ ವಿನಯದೊ
ಳೆರಗಿ ಮನ್ನಿಸುತುಚಿತವಚನದಿ ಬರಲು ಹರಿಯೆಡೆಗೆ ।
ತೆರಳುವೆನು ಮುಂದಾನು ಪಯಣದಿ
ವರಮುನಿಪ ನೀಡಾಣತಿಯ ಬಿ
ಟ್ಟಿರೆನು ಮುನಿಜನನಿಕರಮಾದೊಡೆ ಮತ್ತೆ ಬಹೆನೆಂದ ॥೩೩॥

ನಿನ್ನ ಕೃಪೆಯಿರಲೆಮಗೆ ಲೋಕದೊ
ಳಿನ್ನಸಾಧ್ಯದ ಕೃತಿಯದಾವುದು
ನಿನ್ನ ನಾಮಸ್ಮರಣೆಯೆಮಗಿರುವಂತೆ ಕರುಣಿಪುದು ।
ನಿನ್ನ ಸನಕಸ ನಾರದಾದಿಗ
ಳಿನ್ನು ವರ ಪರಮಾರ್ಥವಾದಿಗ
ಳುನ್ನತರು ಬಯಸುವರು ಪ್ರಭುಕೃಪೆಯೆಂದನತ್ರಿಮುನಿ ॥೩೪॥

ಹೋಗದಿರು ಮನದಿಂದ ಮನದನು
ರಾಗ ಮುರಿಯದೆ ತಂದೆ ಮುನಿ ನಿ
ರ್ಭಾಗಧೇಯನ ನೀನು ಮನ್ನಿಸಿ ಪೊರೆದೆ ಘನತೆಯಲಿ ।
ನೀಗಿದುದು ಮಮಕಾರ ನಿನ್ನ ವಿ
ಯೋಗ ಸಹಿಸುವೆನೆಂತು ಮೋಹೇಂ
ರಾಘವನೆ ಭೂಭಾರಯಿಳಿಸಲು ತೆರಳು ಕರುಣದಲಿ ॥೩೫॥

ಕಲೆತು ಮುನಿನಿಕುರುಂಬ ಮೂವರ
ಚೆಲುವ ರೂಪವ ನೋಡಿ ನುಡಿಗಳು
ಸಿಲುಕೆ ಕಂಠದಿ ಮೂಕಮನರಾಗುತ್ತ ನಿಂದಿರಲು ।
ಅಲಘುಮತಿ ವರವಿತ್ತು ಋಷಿಗಳು
ಹಲವು ಪರಿಯಲಿ ತುತಿಸಲೆರಗುತ
ಹಳುವದಲಿ ನಡೆತಂದ ಪಯಣದಿ ರಾಮಚಂದ್ರಮನು ॥೩೬॥

ಹರಿಯು ಚರಿಪಾವನದಿ ನದಿನದ
ಗಿರಗುಹಾಂತರ ಮಾರ್ಗತೋರಲು
ಸರುವ ಸುಖದಾಯಕವ ಮಾಡುತ ಸ್ವಾಗತಿಸುತಿರಲು ।
ನೆರಳ ಮೇಘ ಸಮೂಹವೊದಗಿಸ
ಲುರಿವ ಕಿರಣದಿ ತಂಪನೀಡುವ
ತರಣಿ ಮುದದಿಂ ರಾಮಚಂದ್ರನ ನಡೆಸುತಿರುತಿಹನು ॥೩೭॥

## ವಿಶ್ರಾಮ ೨

ಸೂ॥ ಖಳ ವಿರಾಧನ ಕೊಂದು ಮುನಿಸಂ
ಕುಲಕೆ ದರುಶನವಿತ್ತು ಕುಂಭಜ
ನೊಲವ ಪಡೆಯುತ ಪಂಚವಟಿಯಲಿ ನಿಂದ ರಘುರಾಮ ॥

ನಡೆದು ಪಯಣದಿ ಘೋರ ಕಾನನ
ಕಡಿಯಿಡುತಲೆಳ್ಚರದಿ ಕಾರ್ಮುಕ
ವಿಡಿದು ವಿಶ್ರಮಿಸುತಲಿ ಕೆಲವೆಡೆ ಮತ್ತೆ ನಡೆಯುತಲಿ ।
ಎಡುವುತಲಿ ತಡವುತಲಿ ಜಾನಕಿ
ಯಡಿಯ ರಕ್ತವು ಸೋರೆ ಗಮನಿಸ
ದಡವಿ ಹೊಕ್ಕಳು ನಗುತ ರಾಘವಲಕ್ಷ್ಮಣರ್ವೆರಸಿ ॥೧॥

ಅಲ್ಲಿ ನಿರ್ಮಾನುಷ ವನಾಂತರ
ವೆಲ್ಲಿ ರಾಕ್ಷಸರೆಲ್ಲಿ ಮೃಗಕುಲ
ವೆಲ್ಲಿ ವೃಕ ಶಾರ್ದೂಲ ಕೇಸರಿ ಕರಡಿ ಹೆಬ್ಬಾವು ।
ಅಲ್ಲಿ ಗಗನವ ಚುಂಬಿಸುವ ಮರ
ವಲ್ಲಿ ಕತ್ತಲೆಗವಿದು ಮಾರ್ಗವ
ಬಳ್ಳಿ ಮುಳ್ಗಳು ತಡೆದು ಭೀಕರ ದೃಶ್ಯತಾಳಿಹುದು ॥೨॥

ಹಿರಿದು ಭಯಮಾಯ್ತೊಮ್ಮೆ ಬೀಸಿತು
ಮೊರೆದು ಭೀಕರ ಗಾಳಿ ಕೇಳ್ದುದು
ದುರುಳ ಘರ್ಜನೆ ತರುಲತೆಗಳಲ್ಲಾಡೆ ಲಟಕಟಿಸಿ ।
ಸರಿದನಸುರ ವಿರಾಧ ಭಯತಮ
ಗಿರಿಯು ನಡೆತರುವಂತೆ ಹೋಹೋ
ನರರು ಮಾನವ ಮಾಂಸದುತ್ಸವವೆಂದು ನುಡಿಯುತ್ತೆ ॥೩॥

ಬರುವ ಭೀಕರ ರಕ್ಕಸನ ಕಂ
ಡುರತರದ ಬಾಣವನು ಮಂತ್ರಿಸಿ
ತರಣಿಕುಲ ಸಂಜಾತ ಕೋದಂಡವನು ಜೇವಡೆದು ।
ಶರವನೆಸೆಯೆ ವಿರಾಧನುರುಳಿದ
ಹರಿಯು ಸ್ಮರಣೆಯ ಮಾಡಿ ಪಡೆದನು
ಪರಮ ಪದವನು, ಮಾಡಿದನು ಸಂಸ್ಕಾರ ರಾಘವನು ॥೪॥

ದುರುಳ ರೂಪವ ನೀಗಿ ಸುಂದರ
ಶರಿರವಡೆಯುತ ಗಗನಮಾರ್ಗದಿ
ಸರಿದನಸುರ ವಿರಾಧನಿತ್ತಲು ನಡೆದು ಪಯಣದಲಿ ।
ಹರಿಸಿ ನೋಟವ ನಾಲ್ಕು ದೆಸೆಯಲಿ
ಧರಣಿಜಾತೆಯ ನಡೆಸಿ ಮಧ್ಯದಿ
ಬರುತ ಕಂಡರು ದಿವ್ಯ ಋಷ್ಯಾಶ್ರಮವ ಮಾರ್ಗದಲಿ ॥೫॥

ಅಲ್ಲಿ ಮುನಿ ಶರಭಂಗ ರಾಮನ
ಸಲ್ಲಲಿತ ರೂಪವನೆ ನೆನೆಯುತ
ಲೆಲ್ಲಿಹನೊ ತಾನೆಂದು ಬರುವನೊ ಬಹನೊ ಬರುತಿಹನೊ ।
ಇಲ್ಲಿಗೈತಹುದಿಲ್ಲವೋ ಮೇ
ಣೆಲ್ಲಿ ತನ್ನನು ಮರೆದನೋ ನೋ
ಡಲ್ಲಿ ಬರುತಿಹನೆಂದು ರಾಮನ ಕಂಡನಾಯೋಗಿ ॥೬॥

ಅರಸಿಬಂದೆಯ ಬಾ ರಘೂತ್ತಮ
ಕರೆದುದಿಲ್ಲವೆ ಹಲವು ವರ್ಷಗ
ಳುರುತಪದಿ ಹರಿ ನಡೆದು ಬಂದಿಹೆ ಭಕ್ತನೆಡೆಗಿಂದು ।
ಚರಣಕೆನಿತಾಂ ನೋವನಿತ್ತೆನು
ಅರಸಿ ಬಂದಳೆ ತಾಯಿ ಮೈದುನ
ವೆರಸಿ ರಘುಪತಿ ರಾಮಚಂದ್ರಮನೆಂದು ಮೈಮರೆದ ॥೭॥

ಮುಗಿಸಿ ಲೋಕದ ಧರ್ಮ ವಿಧಿಪುರಿ
ಹೊಗಲು ನಿಶ್ಚಯಿಸಿರಲು ಹಳುವಕೆ
ರಘುವರನೆ ನೀ ಬರುವ ಹದನರಿತಾನು ತಡೆದಿಹೆನು ।
ಮುಗಿದುದಿಂದಿಗೆ ತಪವು ನಿಗಮಕೆ
ಸಿಗದ ಪಾವನ ಚರಣ ಕಂಡೆನು
ಹೊಗಳಲೆನ್ನಳವಲ್ಲ ನಿನ್ನಯ ಮಹಿಮೆಗಳನೆಲ್ಲ ॥೮॥

ಬೇಡುವುದಕೇನಿಲ್ಲ ನಿನ್ನೊಳು
ಬೇಡಿದೊಡೆ ಕೊಡದವನೆ ಭಕ್ತರ
ಕೂಡಿ ನಡೆಸುವೆ ನುನವನಪಹರಿಸಿರುವೆ ಸುಲಭದಲಿ ।
ನೋಡು ಕರುಣೆಯೊಳೆನ್ನ ದೇಹವ
ಸೂಡಿ ಯೋಗಾಗ್ನಿಯಲಿ ದಹಿಸುವೆ
ಬೇಡ ಸಾಕಿನ್ನೆನಗೆ ಜನ್ಮ ಪವಿತ್ರವಾಯ್ತೆಂದ ॥೯॥

ಇನ್ನು ದೇಹವ ದಹಿಸುತಾತ್ಮನು
ನಿನ್ನ ಸೇರುವತನಕಲೀ ವನ
ವನ್ನು ಬಿಡದಿರು ರಾಮ ಕರುಣಿಸು ನೋಡುತಿರು ನೀನು ।
ಧನ್ಯನಾಂ ಸೌಮಿತ್ರಿ ಜಾನಕಿ
ಯನ್ನು ಕಂಡೆನು ರಾಮ ರಕ್ಷಿಪು
ದೆನ್ನನೆನ್ನುತ ಯೋಗಬಲದಿಂ ತಡೆದ ಭಾಗ್ಯಗಳ ॥೧೦॥

ಜನಕಜಾ ಸೌಮಿತ್ರಿ ಸಹಿತಾ
ವನಜಮುಖ ರಘುರಾಮಚಂದ್ರಮ
ನಿನಕುಲೋತ್ತಮ ನೀಲಮೇಘಶ್ಯಾಮುಪರಿಪೂರ್ಣ ।
ಮನದಿ ನೆಲಸಲಿ ಸಗುಣರೂಪದೊ
ಳೆನುತ ಯೋಗಾಗ್ನಿಯಲಿ ದಹಿಸಿದ
ತನುವ ವೈಕುಂಠವನು ಸೇರ್ದನು ರಾಮ ಕೃಪೆಯಿಂದ ॥೧೧॥

ಅವನ ಗತಿಯನ್ನರಿತು ಸುಖವನು
ಭವಿಸಿ ಸರ್ವರು ಹರುಷಪಡೆದರು
ವಿವಿಧ ಪರಿಯಲಿ ದೀನಪಾಲಕನನ್ನು ಹೊಗಳಿದರು ।
ದಿವಿಜರಾ ರಘುರಾಮ ಸನ್ಮಾ
ರ್ಗವನು ತಿಳಿಯುತಲನುಸರಿಸಿದರು
ಭುವನಮೋಹನ ನಡೆದ ಪಯಣದಿ ಮುಂದೆ ವಿಪಿನದಲಿ ॥೧೨॥

ಬರುತ ನೋಡಿದನಸ್ಥಿ ರಾಶಿಯು
ನರರೆ ಬಿಳಿವೆಟ್ಟವಿದೊ ಗಗನ
ಕ್ಕೆರಗುತಿದೆ ಹಿಮಗಿರಿಯೆ ಬಂದುದೊ ಕಾಣ್ಬುದಾವುದಿದು ।
ಪರುವತಾಕಾರದಲಿ ಮೂಳೆಯು
ಗಿರಿಯಿದೇನಹ ಪೇಳಿರೆಂದನು
ಕರೆದು ಕಂಬನಿ ರಾಮ ಕರುಣದಿ ಮುನಿಜನವ ನೋಡಿ ॥೧೩॥

ಶರಣಪಾಲಕ ನೀನರಿಯೆಯಾ
ಸರುವರೊಳಗಡಗಿರುವೆ ಮಾಯಾ
ಹರಣ ಭವಭಯ ನೀಗಿಸುವ ಸದ್ಯೋಗಿ ನಿನಗರಿದೆ ।
ದುರುಳ ರಾಕ್ಷಸ ಬಾಧೆಯಲಿ ಮುನಿ
ಸುರ ನರೋರಗ ಕೋಟಿ ಖಗಮೃಗ
ಗರುಡ ಗಂಧರ್ವಾದಿಗಳಿಗೊದವಿಹುದು ಬಹುಭೀತಿ ||೧೪||

ಇಂದು ಪರಿಯಂತರವು ದುಷ್ಟರು
ಕೊಂದು ತಿಂದುಳಿದಸ್ಥಿ ರಾಶಿಯು
ತಂದೆ ನೋಡಿದೊ ಜೀವ ಹಿಂಸೆಯ ಫಲದ ಬೆಳೆಯಿದುವು ।
ಎಂದ ಮಾತಿಗೆ ನೊಂದು ರಕ್ಕಸ
ವೃಂದವೆಲ್ಲವ ಕೊಂದು ಸಂತರಿ
ಗಿಂದು ನಿಷ್ಕಂಟಿವ ಮಾಡುವೆ ಧರೆಯ ತಾನೆಂದ ||೧೫||

ಎನುತಲಭಯವನಿತ್ತು ರಾಘವ
ಮುನಿಗಳಾಶ್ರಮಗಳನು ಹೊಗುತಲಿ
ಮಣಿದು ರಾಕ್ಷಸಪನನ ಸಂಕಲ್ಪವನು ತಿಳುಹುವನು ।
ಮುನಿ ಸುತೀಕ್ಷ್ಣನು ರಾಮ ಬಂದಿಪ
ನೆನುತ ನಿರ್ಮಲ-ಕರಣ ನೋಡಿದ
ವನದಿ ರಘುಪತಿ ದರ್ಶನಾತುರದಿಂದ ವೈಮರೆದು ||೧೬||

ಬಂದ ಭಕ್ತರ ಬಂಧು ತಾನಡೆ
ತಂದ ಸುಮನೋರಥವ ಪಿಡಿದೈ
ತಂದ ಪಾಮರ ಜನರಿಗಜ್ಞರಿಗೊಲಿದು ನಡೆತಂದ ।
ಬಂದ ಸೀತಾ ಲಕ್ಷ್ಮಣರ್ವೆರ
ಸಿಂದು ಜನ್ಮ ಪವಿತ್ರವಾದುದು
ತಂದೆ ಕರುಣಾಕಾರ ಬಂದನು ಶ್ರೀವರನು ಬಂಧ ||೧೭||

ಎನಗೆ ರಾಮನಸೇವೆ ದೊರೆವುದೆ
ಎನಗೆ ಭಕ್ತಿ ಜ್ಞಾನ ಕರ್ಮಗ
ಳನುಭವವು ಮೊದಲಿಲ್ಲ ಸಂತರ ಸೇವೆಗಳನರಿಯೆ ।
ಎನಗೆ ಸತ್ಸಹವಾಸವಿಲ್ಲವು
ಎನಗೆ ಜಪತಪಯೋಗ ಯಜ್ಞದೊ
ಳನುಭವವು ಮತ್ತಿಲ್ಲ ರಾಮನ ಚರಣ ನೆನವುಳಿದು ॥೧೮॥

ಅರಿಯೆ ದೆಸೆಯುಪದೆಸೆಯ ತಾನಾ
ರರಿಯನೆಲ್ಲಿಗೆ ನಡೆವೆನೆಂಬುದ
ನರಿಯ ನಡೆವನು ಹಿಂದುಮುಂದಕೆ ತೊಡರೆ ಕಾಲುಗಳು ।
ಅರಿಯನಾರನು ರಾಮನಾಮದ
ಹೊರತು ಜಗವೂಕಾಯ್ತು ಮುನಿಪಗೆ
ಹರಿಯ ನಾಮವ ಹಾಡಿ ಕುಣಿಯುತಲಿದ್ದ ನಲವಿಂದು ॥೧೯॥

ರಾಮ ಮೈದೋರಿದನು ಮಾನಸ
ರಾಮನಂ ಸುಜ್ಞಾನದಲಿ ಕಂಡನು
ಭೂಮಿಜಾಪತಿ ರಾಮನಿದಿರಲಿ ನಿಂದಿಹುದನರಿಯ ।
ರಾಮ ಹೃದಯದೊಳಿದರ್ದ ತೋರಿದ
ನಾ ಮುನಿಗೆ ನಿಜರೂಪ ಮಹಿಮೆಯ
ಭೂಮಿಯೊಳಗಿನ್ನಾರು ಧನ್ಯ ಸುತೀಕ್ಷ್ಣ ಮುನಿಯಂತೆ ॥೨೦॥

ಒಳ ಹೊರಗೆ ಹೊಳೆಯುತಿಹ ಮೂರ್ತಿಯ
ಹೊಳವಿದಾವುದು ರಾಮನೆನ್ನುತ
ತಿಳಿದು ಬಾಹ್ಯದ ನೋಡಲಿದಿರಲಿ ರಾಮನಿಂದಿಹನು ।
ಒಲಿದನೇ ಹರಿ ಸತಿಯ ಶಾಪವ
ಕಳೆದ ಕರುಣಾಜಲಧಿ ಬಂದೆಯ
ಜಲಜನಾಭನೆ ಬಂದೆಯಾ ಬಾಯೆಂದು ತುತಿಸಿದನು ॥೨೧॥

ಕೆಡಹಿ ಚರಣದಿ ದೇಹ ಹೊರಳುತ
ಲೆಡಬಿಡದೆ ಹೊಗಳುತಿರೆ ರಾಘವ
ಕೆಡದ ದೇಹವನೆತ್ತುತಾಲಿಂಗಿಸಿದನಾ ಮುನಿಯ |
ಅಡಿಗಡಿಗೆ ನೋಡುತ್ತ ಕುಣಿಯುತ
ಲೊಡನೆ ಹಾರುತ ಭ್ರಾಂತಿಯೋಗದ
ಮುಡಹನೊಲು ನಗುತಿಹನು ಮೂವರ ನೋಡಿ ನಲಿದಾಡಿ ||೨೨||

ವಿಮಲನಖಿಳನನಿಂದ್ಯ ಪೂರುಷ
ಕಮಲ ವದನನನಂತ ಭೂಮಾ
ರಮಣಿ ಭಾರೋತ್ತರಣ ಕಾರಣ ದಿನಪ ಕುಲಕೇತು |
ನಮಿಪೆನಿದಕೋ ರಾಮ ಸೆರೆಗೈ
ದಮಲ ರೂಪವ ಮನದಿ ಸಂತತ
ನಮಿಸಿ ಪಾಡುವೆ ನೆನೆದು ನೋಡುವೆ ಧನ್ಯನಾನೆಂದ ||೨೩||

ಮುನಿ ನುಡಿಯ ಮೆಚ್ಚಿದನು ಕರೆಯುತ
ಲಲಘುಮತಿ ಬೇಕಾದುದನು ಕೇಳ್ಳೈ
ಮನದ ಬಯಕೆಯ ಮರೆಯ ಮಾಡದೆ ಕೇಳು ನೀನೆನಲು |
ಇನುಕುಲೋತ್ತಮ ಮನದಿ ನೆನೆದುದ
ನೆನಗೆ ಕೈಗೂಡಿಸಿಹೆ ಬೇರೆ
ನ್ನೆನಗೆ ಬೇಹುದೆ ನೆಲಸು ಹೃದಯದಿ ಸತತ ನೀನೆಂದ ||೨೪||

ವರ ಸುತೀಕ್ಷ್ಣಂವೆರಸಿ ರಘುಪತಿ
ಯರಸಿ ಬಂದನಗಸ್ತ್ಯರಾಶ್ರಮ
ವರಕೆ ನೋಡುತ ರಮ್ಯ ಪರ್ವತ ನದಿಕೊಳಂಗಳನು |
ಮರದಿ ಪಾಡುವ ಖಗಗಳಿಂಚರ
ಭರದಿ ನಡೆಯುವ ಮಿಗದ ವೈಚಿತ್ರ್ಯ
ಹರಿಯು ಕಂಡನಗಸ್ತ್ಯವನದಲಿ ಮೆಚ್ಚಿದನು ಮನದಿ ||೨೫||

ಮುನಿ ಸುತೀಕ್ಷ್ಣನು ರಾಮಬಂದಿಹ
ನೆನಲು ನಿಲದೋಡಿದನು ಉಬ್ಬಿದ
ಮನದಿ ಹರ್ಷದ ಬಾಷ್ಪಗರೆಯುತ ಬಂದುನೋಡಿದನು ।
ಅನುಜಸಹಿತಾ ರಾಮನೆರಗಿದ
ಜನಕಜೆಯು ಶಿರಬಾಗೆ ಮೂವರ
ಹಣೆಯ ನೆಗಹಿದ ಹರಸಿ ತನ್ನಾಶ್ರಮಕೆ ಕರೆದೊಯ್ದ ॥೨೬॥

ಕೇಳಿ ಕುಶಲವನಿತ್ತು ವಿಷ್ಟರ
ಮೇಲೆನಿಸಿದವರಾರು ಜಗದ ವಿ
ಶಾಲ ಕೀರ್ತಿಯ ಪಡೆದೆ ನಾನೆಲೆ ರಾಮ ಭಾಗ್ಯದಲಿ ।
ಪಾಲಿಸಿದೆ ನೀನೆಂದನಾಗಳು
ಕೇಳಿ ರಾಮನ ಬರವ ಮುನಿಜನ
ಜಾಲ ನೆರೆದುದು ಕುಂಭಸಂಭವನಾಶ್ರಮವಿ ನೆರೆದು ॥೨೭॥

ಸಾಧುಗಳಿಗಭಿನಮಿಸಿ ನಗುತ ವಿ
ರಾಧರಿಪು ಕುಳಿತಿರಲು ರಘುಪತಿ
ಪಾದನೆನೆಯುತೆ ಮುಖವ ನೋಡಿ ಚಕೋರಪಕ್ಷಿಯೊಲು ।
ಮೋದಗೊಂಬರು ತುಂಬ ಜಲದಲಿ
ಮೋದಗೊಳ್ಳುವ ಮತ್ಸ್ಯದೊಲು ನಲಿ
ದಾದಿದೇವನ ದಿವ್ಯ ದರ್ಶನಕಾಗಿ ಬಂದಿಹರು ॥೨೮॥

ಕಲಶಜಗೆ ರಘುರಾಮ ವಂದಿಸಿ
ತಿಳಿವೆ ಸಕಲವ ನೀನು ಜಾನದೊ
ಳಲಘುಮತಿ ನಿನಗೊರೆವುದೇನಿದೆ ಗೂಢಮಿನ್ನಿಹುದೆ?।
ಹಳುವಕೈತಂದಿರುವ ಕಾರಣ
ವೊಳವು ಪೇಳುವುದೇನು ಪದಯುಗ
ನಳಿನ ದರ್ಶನದಿಂದ ಪಾವನರಾದೆವಾವಿಂದು ॥೨೯॥

ಎಲೆ ಗುರುವೆ ಮುನಿಶತ್ರು ರಾಕ್ಷಸ
ಕುಲವ ಮುರಿಯುವುದೆಂತು ಕಂಟಕ
ವಲಯವಳಿಯುವುದೆಂತು ಪೇಳ್ಬೈ ತಿಳಿದುಪಾಯಗಳ |
ಉಳಿಯ ದಂತೆಸಗುವೆನು ಹಿಮಋತು
ನಳಿನ ಪುಷ್ಪಾವಳಿಯ ಕೆಡಿಸುವ
ವೊಲು ವಿರಾಧನ ಜೊತೆಯಗೂಡಿಪೆನಿವರ ತಾನೆಂದ ||೩೦||

ಮುಗುಳು ನಗುತಲಗಸ್ತ್ಯನೆಂದನು
ರಘುವರನೆ ನೀನೆನ್ನ ಕೇಳುವೆ
ಬಗೆಯನರಿಯೆಯೆ ರಾಮನಘಸಂಹಾರಿ ಮರೆಯೇಕೆ |
ಮುಗುಧರರಿಯರು ನಿನ್ನ ಗೂಢವ
ನಗಣಿತದ ಸೇವೆಯಲಿ ನೀ ಬಹ
ಬಗೆಯನರಿತಿಹೆ ಹೊಗಳಲಳವೇ ಬರಿಯನುಡಿಗಳಲಿ ||೩೧||

ಹರಿಯ ಭೃಕುಟಿ ವಿಲಾಸಗತಿಯಲಿ
ಧರೆಯಗತಿ ಸಾಗುತಿದೆ ಮಾಯಾ
ತರುಣಿ ಸೇವಕಿ ನಿಯಮ ಮೀರದೆ ವರ್ತಿಸುತ್ತಿಹಳು |
ಹರವಿಧಾತರ ಸಿದ್ಧರನು ಸೃಜಿ
ಸಿರುವೆ ಕಾರ್ಯವಗೈಸಿ ನಡೆಸುವೆ
ತಿರೆಯ ರಾಘವ ಜನನ ಮರಣ ಸ್ಥಿತಿಗೆ ಕಾರಣನು ||೩೨||

ನಿನ್ನ ವಾಣಿಯೊಳತುಲ ಜೀವಿಗ
ಳನ್ನು ತುಂಬಿದೆ ಜಗದಿ ಮುನಿರಿಪು
ವನ್ನು ತಿದ್ದುವುದರಿಂದೆ ಜಗದೋದರನು ನೀನಾಗೆ |
ನಿನ್ನ ನುಡಿವೊಂದರಲಿ ದುಷ್ಟರು
ಮಣ್ಣುಗೂಡುವುದಿಲ್ಲವೇ ನೀ
ನಿನ್ನು ಭಕ್ತರ ಸಲಹು ದುಷ್ಟರವೊರೆಸಿ ಗತಿಗೊಟ್ಟು ||೩೩||

ಕ್ಷಿತಿಗರಿವುದೇ ಹರಿವಿಲಃಸದ
ಗತಿಯು ಮಹಿಮೆಯು ಮಾಯೆ ಶಾಲ್ಮಲಿ
ಯ ತರು, ಫಲ ಬ್ರಹ್ಮಾಂಡ, ಸಚರಾಚರವೆ ಜೀವಿಗಳು ।
ಇತರರಿಗೆ ಕಾಣಿಸದು ಕಾಲದ
ಗತಿಯು ಭೀಕರವಸ್ತು ಲೋಕವಿ
ದತಿ ಕರಾಲವು ಮಾಯೆಯಲಿ ಸಿಲ್ಕಿಹುದು ನಿಜವೆಂದ ॥೩೪॥

ನಿನ್ನ ಕೋಪಕೆ ಸಿಲ್ಕಿ ಭಯದಲಿ
ಕಣ್ಣ ಬಿಡುತಲಿ ಉರಿದು ಹೋಹವು
ಸನ್ನುತಾಂಗನೆ ಲೋಕಪಾಲಕನಾಗಿ ನರನಂತೆ ।
ಎನ್ನ ಕೇಳುವ ಬಗೆಯಿದೇನಿದು
ನಿನ್ನ ನಾಟಕವರಿಯೆನೇ ಸಂ
ಪನ್ನ ರಾಘವ ನಿನ್ನ ನಾಮುವನಿರಿಸು ರಸನೆಯಲಿ ॥೩೫॥

ಶ್ರೀಧರನೆ ನೀಂ ಬ್ರಹ್ಮ ನಿತ್ಯನ
ನಾದಿ ದೇವನಖಂಡ ನಿರ್ಮಲ
ವೇದ ಪುರುಷನನಂತನನುಭವಗಮ್ಯ ರೂಪುಗಳ ।
ಸಾದರದಿ ತೋರಿಸಿರಲರಿತಿಹೆ
ನಾದೊಡಂ ಬಹುರೂಪದಿರಗಳ
ಸಾಧು ಸಗುಣಬ್ರಹ್ಮನಂ ನೋಡಲ್ಕೆ ಹಾತೊರೆವೆ ॥೩೬॥

ಅದರಿನಿಂದಾನೊರೆಯ ಬಲ್ಲಿನೆ
ಮುದದಿ ನೀನೊಲಿದವನು ನಿನ್ನಯ
ಪದವ ಸೇರ್ವನನನ್ಯ ಸೇವಕ ಭಕ್ತ ನಿನಗವನು ।
ಇದರ ಕಾರಣದಿಂದ ಕೇಳ್ವೆಯ
ವಿದಿತ ಘನಗುಣಮಿಲ್ಲಿ ವನವೊಂ
ದಿದೆ ವಿರಾಗದ ತವರು ಪ್ರಕೃತಿಯ ನೆಲೆಯು ಪಂಚವಟಿ ॥೩೭॥

ಅಲ್ಲಿ ಗೋದಾವರಿಯು ಹರಿವಳು
ಫುಲ್ಲ ಲೋಚನೆಗಲ್ಲಿ ಸುಖವಹು
ದಲ್ಲಿಯುಂ ಫಲ ಪುಷ್ಪ ಭಾರದ ವೃಕ್ಷರಾಜಿಗಳು ।
ಅಲ್ಲಿಗೈದುತ ನೆಲಸು ಸುವ್ರತ
ವಲ್ಲಿ ಪೂರೈಸುವುದು ರಘುಪತಿ
ಸಲ್ಲಲಿತ ವನಮದುವು ನಡೆವುದು ಪಂಚವಟಿಗೆಂದ ॥೩೮॥

ಅನಘ ದಂಡಕವನವ ಪಾವನ
ವೆನಿಸು ಹೊಗುತಲಿ ಒರೆಸಿ ಗೌತಮ
ಮುನಿಯ ಭೀಕರ ಶಾಪ ಪರಿಹರಿಸಲ್ಲಿಗೈದುತಲಿ ।
ಮುನಿಗಳಲಿ ಕೃಪೆದೋರು ನಡೆಯೆಂ
ದೆನಲು ವಹಿಲದಿ ಪಂಚವಟಿಯ
ನ್ನನುಜ ಸತಿಯರ್ವೆರಸಿ ಸೇರ್ದನು ತಳೆದು ಮುನಿಯಾಜ್ಞೆ ॥೩೯॥

ವನೆಯ ಪರಿಮಳ ದಿವ್ಯ ತರುಲತೆ
ಯನು ಮನೋಹರ ನೋಡಿ ಹರುಷದ
ಮನದಿ ಸೀತೆಗೆ ತೋರ್ದನುತ್ತಮ ತಾಣಗಳ ವನದಿ ।
ಜನಕಜಾ ರಘುರಾಮ ಲಕ್ಷ್ಮಣ
ರನುವಿಂದಡಿಯಿಡಲು ದಂಡಕ
ವನದ ಪಾಪವು ತೊಲಗಿ ಸುಖಕರವಾಯ್ತು ತಕ್ಷಣದಿ ॥೪೦॥

ಹರಿಯು ಬರವನ್ನರಿತು ಬಂದ
ತ್ವರದಿ ಗೃಧ್ರಾಧಿಪ ಜಟಾಯುವು
ಹೊರಳಿ ಚರಣದಿ ಮಿತ್ರನಾದನು ರಾಮಚಂದ್ರಮಗೆ ।
ಧರಣಿಜಾತೆಯ ರಕ್ಷೆಗೋಸುಗ
ಲಿರುವೆ ನಾನೆಂದೊರೆದು ತನ್ನಯ
ಪರಿಯನೆಲ್ಲವನರುಹಿ ನಿಂದನು ಪಂಚವಟಿಯಲ್ಲಿ ॥೪೧॥

ಬೆಳೆಸಿ ಗೃಧ್ರಾಧಿಪನ ಮೈತ್ರಿಯ
ನೊಲವ ಬಿತ್ತಿ ಜಟಾಯು ಹೃದಯದಿ
ಎಲೆವನೆಯ ಕಟ್ಟಿಸಿದ ಗೋದಾವರಿಯ ತೀರದಲಿ ।
ಸುಲಭ ಶ್ರೀರಘುರಾಮ ಚಂದ್ರನು
ಕಳೆಯುತಿರ್ದನು ಕಾಲ ಸುಖದಿಂ
ಹೆಳುವವರಮನೆಯಾಯಿತುತ್ತಮ ಸಂಗದೊರೆಯಲ್ಲಿ ॥೪೨॥

## ವಿಶ್ರಾಮ ೩

ಸೂ॥ ಜರೆದು ಸುಜ್ಞಾನವನು ತಮ್ಮಗೆ
ದುರುಳೆ ಶೂರ್ಪನಖೆಯನು ಭಂಗಿಸಿ
ಹರಿಯು ಕೊಂದ ಖರಾದಿ ರಕ್ಕಸ ಪಡೆಯ ಯುದ್ಧದಲಿ

ನೆಲಸೆ ರಾಘವ ಪಂಚವಟಿಯಲಿ
ತೊಲಗಿದುದು ಭಯ ಮೌನಿ ನಿಕರಕೆ
ಹೊಳೆದುದಾ ವನ ನದಿ ಸರೋವರ ವೃಕ್ಷ ಗಿರಿಶಿಖರ ।
ಬೆಳಗುತಿರ್ದುದು ಕಾಂತಿಯನುದಿನ
ವೊಲಿದು ಖಗಮೃಗ ಮೋದವಡೆದುವು
ನಲಿದು ಶೀತ ಸುಗಂಧ ಮಾರುತ ಮೆಲನೆ ಬೀಸುವನು ॥೧॥

ಆ ವನದ ಸೌಂದರ್ಯ ಪೆರ್ಚ
ಲ್ಯಾವ ಬಲ್ಲನು ಬಣ್ಣಿಸಲ್ಕಿದ
ದೇವನಾವಾಸದಲಿ ಪಾವನಮಾಯ್ತು ಪಂಚವಟಿ ।
ಓವಿ ಲಕ್ಷ್ಮಣ ಚಾಚಿ ಹಣೆಯನು
ತೀವಿದೆಳನಗೆಯಿಂದ ಕೇಳ್ದನು
ಪಾವನದ ಸತ್ಕರ್ಮ ಧರ್ಮದ ವಿವಿಧ ರೀತಿಗಳ ॥೨॥

ಸುರರ ಮುನಿಮಾನವರ ಸಚರಾ
ಚರರೊಡೆಯ ಮತ್ತು ಭುವೆ ರಾಘವ
ಭರದೊಳುಪದೇಶವನು ಮಾಳ್ಪುದು ತಿಳುವಳಿಕೆಯಿತ್ತು ।
ತೊರೆದು ಸಕಲವ ನಿನ್ನನರ್ಚಿಸಿ
ಚರಣ ಕಾಣ್ಬುದದೆಂತು ಸನ್ಮತಿ
ಯೆರೆದು ಸಲಹೈ ಜ್ಞಾನ ವೈರಾಗ್ಯಗಳ ಗತಿಯೊರೆದು ॥೩॥

ದೇವರೊಲಿಯುವ ಭಕ್ತಿಯಾವುದು
ಜೀವನೀಶ್ವರ ಭೇದವೆನಿತಹು
ದಾವ ಕರ್ಮದಿ ಮುಕ್ತಿ ಕೈಗೂಡುವುದು ಶೀಘ್ರದಲಿ ।
ದೇವ ಶೋಕ ಭ್ರಾಂತಿಯುಳಿಯುತ
ಲಾವಗಂ ಪ್ರಭುಪದವಿ ಪ್ರೇಮವು
ದೇವ ಮೊಳೆವುದದೆಂತು ನೀನೊರೆದೆನ್ನ ಕರುಣಿಪುದು ॥೪॥

ತಮ್ಮ ಸಂಗ್ರಹವಾಗಿ ಪೇಳುವೆ
ನೊಮ್ಮನದಿ ಮತಿ ಚಿತ್ತ ಬಂಧಿಸು
ತೊಮ್ಮೆ ನೀಗಲು ನಾನು–ನೀನೆಂಬೀ ವಿಮೋಹಗಳ ।
ಎಮ್ಮ ಕಟ್ಟಿರೆ ಮಾಯೆ ಲೋಕವ
ನೆಮ್ಮಿ ಕೆಡುವರು ನರರು ಧರ್ಮದ
ಮರ್ಮವರಿಯರು ಬೆಮೆಯ ಬಯಲಭಿಮಾನದಲಿ ಮುಳುಗಿ ॥೫॥

ಮನ ದಶೇಂದ್ರಿಯ ವಶದಿ ಚರಿಸುವ
ಘನಗತಿಗಳೇ ಮಾಯೆಯೆನಿಪುದು
ವಿನಯ ವಿದ್ಯಾವಿದ್ಯ ಒಲವಿದಕುಂಟು ಲೋಕದಲಿ ।
ಘನತರದ ಮಾಯೆಯಿದವಿದ್ಯೆಯು
ಗುಣರಹಿತ ಕೂಪದಲಿ ಜೀವನ
ಕೊನೆಗೆ ಕೆಡಹುತ ಸಾವುನೋವುಗಳಿಂದ ಬಳಲಿಪುದು ॥೬॥

ಅಹಿಶಯನನಾಜ್ಞೆಯಲಿ ರಚಿಪುದು
ಮಹಿಯ ವಿದ್ಯಾ ಮಾಯೆಯರಿತೊಡೆ
ಮಹಿಮೆಯೆಳ್ಳನಿತಿಲ್ಲ ಮಾಯೆಗೆ ಸ್ವಬಲ ಪೊದಲಿಲ್ಲ ।
ಸಹಜನಾತ್ಮಜ್ಞಾನ ನಿಷ್ಠೆಯೊ
ಳಿಹುದು ಸಮ್ಯಜ್ಞಾನ ಮರೆಯಲುವ
ನಿಹದ ಸುಖಗಳ ಬೊಮ್ಮರೂಪನನೊಂದನುಳಿದಿತರ ॥೭॥

ಪರಮ ವೈರಾಗ್ಯಮಿದು ನಿಜಗಳ
ನರಿಯೆ ತೃಣಸಮವೆಂದು ಸಿದ್ಧಿಯ
ತೊರೆವ ಪುರುಷಾರ್ಥಗಳ ತ್ರಿಗುಣಗಳೊಲ್ಲನಾಯೋಗಿ ।
ಅರಿಯಬಲ್ಲುದೆ ಮಾಯೆಯಿದನೀ
ಶ್ವರನ ನಿನ್ನನು ತಿಳಿಯಲಾತ್ಮಂ
ಗರಿಯದಿಹುದೇ ಬಂಧ ಮೋಕ್ಷಪ್ರದನು ಕೇಳೆಂದ ॥೮॥

ಧರುಮದಿಂ ವೈರಾಗ್ಯಮದರಿಂ
ಪರಮ ಯೋಗದಸಿದ್ಧಿ ಯೋಗದಿ
ದೊರೆವುದಾ ಸುಜ್ಞಾನಮದುವೇ ಮೋಕ್ಷದಾಯಕವು ।
ತರಳ ಕೇಳಾನಾವ ಭಕ್ತಿಗೆ
ವರದನಪ್ಪೆನೊ ಬಳಿಯ ಸಾರ್ವೆನೊ
ಅರಿವುದಾ ಸದ್ಭಕ್ತಿ ಭಕ್ತಗೆ ಸುಖದ ಸೋಪಾನ ॥೯॥

ಭಕ್ತಗಿಲ್ಲ ಪರಾವಲಂಬನ
ಭಕ್ತಗಿದೆ ನಿಜಶಕ್ತಿ ಮತ್ತೀ
ಭಕ್ತಿ ವಿಜ್ಞಾನ ಘನಸುಜ್ಞಾನಗಳ ತವರುಮನೆ ।
ಭಕ್ತಿಯಿಹುದೊಂಭತ್ತು ವಿಧ ನಿಜ
ಶಕ್ತಿಯಿಂ ದೃಢಗೊಳಿಸು ಬಳಿಕೆ
ನ್ನುತ್ತಮದ ಲೀಲೆಗಳ ನೆನೆಯುತ ಹರಿದುಬಿಡು ಮಾಯೆ ॥೧೦॥

ಸಂತಜನ ಪದಕಮಲ ಭಕ್ತಿಯ
ನಂತವಾಗಿರಲೆನ್ನ ಭಜಿಸುವು
ದಂತರಂಗದಿ ಮನವಚನ ಕರ್ಮದಲಿ ನೇಮದಲಿ |
ಇಂತು ಗುರು ಪಿತೃಮಾತೃ ಸೋದರ
ಪಂಥವೇ ನಾನೆಂದು ತಿಳಿಯುತ
ನಂತ ಸೇವೆಯ ಮಾಡು ನಿಶ್ಚಲ ಭಕ್ತಿಗೊಲಿಯೆಂದ ||೧೧||

ಎನ್ನನೇ ನೆನೆಯುವುದು ಸಂತತ
ಮೆನ್ನನೇ ನೋಡುವುದು ಲೋಕದೊ
ಳೆನ್ನ ಗುಣಗಾನದಲಿ ಹೊಂಪುಳಿವಡೆದು ತನುಮರೆಯೆ |
ಸನ್ನ ಗದ್ಗದ ಕಂಠವುಪ್ಪುದು
ಕಣ್ಣುಗರೆವುದು ಹರುಷ ಬಾಷ್ಪವ
ನೆನ್ನ ಹಂಬಲ ಪೆರ್ಚಲವನಿಂಗೊಲಿವೆ ನಾನೆಂದ ||೧೨||

ಕರಣಶುದ್ಧನಪೇಕ್ಷೆಯಿಲ್ಲದೆ
ಶರಣು ಬರಲವನಾಸೆಪಾಶಿಯ
ತೊರೆದು ಪಾಡುವ ನರನ ಹೃದಯದೊಳಿರುವೆ ತಾನೆನಲು |
ಹರುಷವಡೆದನು ಭಕ್ತಿಯೋಗದ
ಪರಿಯನಾಲಿಸಿ ಲಕ್ಷ್ಮಣನು ರಘು
ವರನ ಚರಣಕ್ಕೆರಗಿ ನಿಂದನು ಮುಗಿದು ಕರಯುಗಳ ||೧೩||

ಅಣ್ಣ ನಿನ್ನುಪದೇಶಬಲದಿಂ
ದೆನ್ನ ಸಂದೆಗ ಸಕಲಮಾರಿದು
ದುನ್ನತದ ಸುಜ್ಞಾನ ಮೂಡಿದುದೆನ್ನ ಹೃದಯದಲಿ |
ಸನ್ನುತನೆ ಕರುಣಿಸಿದೆ ಮೂಢನ
ಬನ್ನಮನ್ನರಿಯುತ್ತಲೆನ್ನಲು
ತನ್ನ ತಮ್ಮನನಪ್ಪಿಕೊಂಡನು ರಾಮನೊಲವಿಂದ ||೧೪||

ಇರ್ಪವೀ ಬಗೆಯಿಂದ ಕಾಲವ
ನಾರ್ಪಿನಿಂ ಕಳೆಯುತ್ತ ವಿಪಿನದಿ
ಶೂರ್ಪನಖಿಯೆಂಬಸುರೆ ದಶಕಂಠನ ಸಹೋದರಿಯು ।
ಇರ್ಪಳಾ ಬನದಲ್ಲಿ ಚರಿಸುತ
ದರ್ಪದಿಂದೊಂದು ದಿನ ರಾಮಂ
ಗರ್ಪಿಸಿದಳಾ ದುರುಳೆ ತನ್ನನೆ ನೋಡಿ ಮೋಹದಲಿ ॥೧೫॥

ತಂದೆ ಸೋದರ ತನುಜ ಮೊದಲಹ
ರಂದಮುನ್ನೀಕ್ಷಿಸಲು ನಾರಿಯ
ರೊಂದುವರು ಮೋಹವನು ಪರಪುರುಷರನು ಬಯಸುವರು ।
ತಂದಿರಿಸೆ ರವಿಕಾಂತಮಣಿ ತಾ
ನಂದಗೆಡುವೊಲು ಸೂರ್ಯನಿದಿರಲಿ
ಬೆಂದು ಕಾಮದ ಸೆರೆಗೆ ಸಿಲುಕುತಪಾಯುವಡೆಯುವರು ॥೧೬॥

ದುರುಳೆ ರಾತ್ರಿಂಚರಿಯು ಕುಟಿಲಾ
ಕರುಷಿಣಿಯು ಪರಿಹಾಸಗೈಯುತ
ಲರರೆ ಸುಂದರನಾವನೋ ಮನಸೆಳೆದನೆಂದೆನುತ ।
ಧರಿಸಿ ಮೋಹಿನಿರೂಪ ಮಾನವ
ತರುಣಿಯೊಲು ನಸುನಗೆಯ ಬೀರುತ
ಹರಿಯ ಸನಿಹಕ್ಕೈದಿ ನುಡಿದಳು ನಾಚುಗೆಯ ತೋರಿ ॥೧೭॥

ನಿನಗುಮೆನಗುಂ ಸರಿಯು ಚತುರಾ
ನನನು ತಿಳಿದಿದ ಸೃಜಿಸಲೆಮ್ಮನು
ಮಣುವೆ ನಿನಗಾನೊಲಿದು ಬಂದಿಹೆನೆನ್ನ ನೀನೋಡು ।
ಎನಗೆ ಮೆಚ್ಚಿದ ಪುರುಷರಾರಿಹ
ರೆನಗೆ ನಿನ್ನಲಿ ಚಿತ್ತ ನೆಲಸಿತು
ವಿನುತ ನಾನು ಕುಮಾರಿಯಾಗಿಹೆನೆಂದಳಾ ಕುಟಿಲೆ ॥೧೮॥

ನಗುತ ಸೀತೆಯ ನೋಡಿ ರಘುಪತಿ
ಮುಗುಧೆ ತಪ್ಪಿದೆಯೆನ್ನ ಬಯಸುತ
ಜಗದೊಳೊರ್ವಳೆ ಸತಿಯುಮೆನಗುಂ ಮತ್ತೆ ಲಕ್ಷ್ಮಣನು ।
ಸಿಗುವನೌ ಸುಂದರನು ತರಳನು
ಮುಗುಧನೊರ್ವನೆ ವಿಪಿನದಲ್ಲಿಹ
ನೊಗುವ ತೋಷದೊಳೊಲಿವ ನಡೆಯೆನೆ ಬಂದಳೋಡುತಲಿ ॥೧೯॥

ಅರಿತು ಹರಿಯಿಂಗಿತವ ನುಡಿದನು
ಪರರಧೀನನು ನಾನು ದಾಸನು
ಧರಣಿಜಾ–ರಾಮರಿಗೆ ಸುಂದರನಾ ರಘೂತ್ತಮನು ।
ತೆರಳು ಮೋಹಿಸುತವನ ಸುಖವಡೆ
ಕರಿವರನು ಸಿಂಗಕ್ಕೆ ಸಾಟಿಯೆ
ಸರಿಯೆ ಗರುಡಗೆ ಪಕ್ಷಿಯಂತೀ ಸ್ವಾಮಿಭೃತ್ಯರಲಿ ॥೨೦॥

ಪಡೆವನೇ ಸುಖ ಪರರದಾಸ್ಯದಿ
ಪಡೆವನೇ ಕಡುದುಃಖಿ ಧನಮಂ
ಕೊಡುವನೇನು ಭಿಕಾರಿ ಸೇವಕನಿಂದ ಸೊಗವಃಹುದೆ ।
ಕಡುಕುರೂಪಿಗೆ ರೂಪವರಿವುದೆ
ಕೆಡದಿರೆನ್ನನು ಪಡೆದು ರಾಘವ
ನೊಡೆಯನಹನವನೊಡನೆ ಸಂತತ ಸುಖವು ಹೋಗೆಂದ ॥೨೧॥

ಹೆಳವ ಕುರುಡ ಕುರೂಪಿ ಲೋಭಿಗ
ಳೆಲಗೆ ಪಾಲ್ಗರೆದಂತೆ ನಭವಿಂ
ದೊಲಿದೆನಗೆ ನೀ ದಾಸಿಯಾಗುವೆ ರಾಮಜನಕಜೆಗೆ ।
ತೊಲಗು ರಘುಪತಿ ಸಾಟಿ ನಿನಗೆನೆ
ಬಳುಕುತಲಿ ನಡೆತರಲು ರಾಘವ
ನೆಳೆಯ ತಮ್ಮನ ಹೊರೆಗೆ ಕಳುಹಿದ ಮತ್ತೆ ಸಂತವಿಸಿ ॥೨೨॥

ಸೇವಕನ ಸತಿಯಾಗಿ ಬಾಳುವೆ
ಹೇವಮಲ್ಲವೆ ಮೂರು ಲೋಕದ
ದೇವ ರಾಮನ ಕರವ ಪಿಡಿ ನಡೆ ದಾಸನಹೆ ನಾನು |
ದೇವಿ ನಡೆಯೆನೆ ರಾಮ ಸೀತಾ
ದೇವಿಯಂ ಬಿಡನೆಂದು ಕೊಂದೊಡ
ನೋವಿ ಕರವಿಡಿದೊಲಿವನೆಂದಾ ಕುಟಿಲೆ ಭಾವಿಸುತ ||೨೩||

ದುರುಳೆ ರಕ್ಕಸಿಯಾಗಿ ಪಲ್ಗಳ
ಕಿರಿದು ಕೇಶವ ಕೆದರಿ ಘರ್ಜಿಸಿ
ಧರಣಿಜಾತೆಯ ಕಡೆಗೆ ಬರುತಿರೆ ಸೀತೆ ಬಲು ಬೆದರೆ |
ಅರಿತು ರಾಮನ ಬೆರಳ ಸನ್ನೆಯ
ತಳಳ ಕೋಪಾಗ್ನಿಯಲಿ ಬಂದನು
ಹಿರಿದ ಖಡ್ಗದಿ ಶೂರ್ಪನಖಿಯಂ ತಡೆದು ಹಲುವೊರೆದು ||೨೪||

ಕತ್ತರಿಸಿ ಕಿವಿಮೂಗುಗಳ ತಾ
ನಿತ್ತನಾಮಂತ್ರಣವ ಮರಣಕೆ
ಹತ್ತುತಲೆ ದುರುಳಂಗೆ ರಾಕ್ಷಸನಿಕರ ಹತಿಗಾಗಿ |
ಇತ್ತ ವಿಕೃತಿಯ ಪೊಂದಿ ರಕ್ಕಸಿ
ಕಿತ್ತ ಕಿವಿ ಮೂಗುಗಳ ಘಾಯದಿ
ರಕ್ತ ಸೋರಲು ನೋವಿನಿಂದರಚಿದಳು ಭಯವಾಗಿ ||೨೫||

ಬೆಟ್ಟದಿಂ ಬಹ ಮಂದ ಜಲದೊಲು
ಕಟ್ಟಿ ರಕುತವು ಹರಿವುತಿರ್ದುದು
ಸೊಟ್ಟನೋರೆಯ ದುರುಳೆ ಖರದೂಷಣರ ಸೇರಿದಳು |
ಸುಟ್ಟುರಿಯದೇ ಬಲ ಪರಾಕ್ರಮ
ಕೆಟ್ಟಿನೇ ನಿಮ್ಮಿಂದಲೆಂದಾ
ದುಷ್ಟೆ ಘರ್ಜಿಸೆ ದುಃಖದಿಂ ಹೊರಳಿದಳು ಭೂಮಿಯಲಿ ||೨೬||

ದುರುಳ ಖರದೂಷಣರು ತಂಗಿಯು
ಕರೆದು ವಿಷಯವ ಕೇಳಿ ಸೇನೆಯ
ಕರೆಸಿ ಹದಿನಾಲ್ಕಕ್ಕುಸಾವಿರ ಯೋಧರೊಡಗೊಂಡು ।
ಹೊರಟು ಬಂದರು ಕನಸು ಮನಸಿನೊ
ಳರಿಯರಸುರರು ಸೋಲನೆಂದುಂ
ಧುರದಿ ಬೆನ್ನನು ಹಾಯ್ಕಿದವರವರಲ್ಲವೆಂದೆಂದು ॥೨೭॥

ಬರುವ ರಕ್ಕಸ ನಿಕರ ಕಜ್ಜಲ
ಗಿರಿಯು ಪಕ್ಷವ ಧರಿಸುತೋಡುವ
ತೆರದಿ ತೋರ್ದುದು ಕುಳಿತು ನಾನಾವಾಹನಂಗಳಲಿ ।
ಧರಿಸಿ ಕಾರ್ಮುಕ ಶಸ್ತ್ರ ನಾನಾ
ಪರಿಯು ರೂಪದೊಳವರು ನಡೆದರು
ಸರಸಿಜಾಕ್ಷನ ಕಡೆಗೆ ದುರುಳರು ಬಹಳ ಸಂಖ್ಯೆಯಲಿ ॥೨೮॥

ಮೇಘ ವರ್ಣದ ಶಸ್ತ್ರ ಸಾಲುಗ
ಳಾಗಸದಿ ಸುರಚಾಪವುದಿಸಿತೊ
ಸಾಗಿ ಬಂದುದೊ ಬೆಟ್ಟ ಸಾಲುಗಳೆಂಬ ಪರಿಯಿಂದ ।
ಮೂಗು ಕಿವಿಗಳ ನೀಗಿ ರಕ್ಕಸಿ
ರಾಘವಂಗಿದಿರಾಗುತಶುಭದ
ಭಾಗದಲಿ ತಾನಿಂದು ನಡೆಸುತ ಬಹಳು ವಹಿಲದಲಿ ॥೨೯॥

ಅವರವರ ಭುಜಬಲದ ಪರಿಮಿತಿ
ಯವರು ಪೇಳುತ ಭೇರಿ ಮೊಳಗಲು
ಜವನ ಜವಗೆಡಿಸುತಲಿ ಬಹರಾ ಕಾಮರೂಪಿಗಳು ।
ಅವರು ಗಣಿಸದೆ ದುಷ್ಟ ಶಕುನಗ
ಳವಘಡವ ನೂಂಕುತ್ತ ಬರುತಲಿ
ಜವನ ಕೈತುತ್ತಾದರಾಗಳು ತೋಳ್ವಲವ ನಂಬಿ ॥೩೦॥

ಸೆರೆವಿಡಿದು ಕೊಲ್ಲುವರನಿರ್ವರ
ತರುಣಿಯನ್ನಪಹರಿಸು ಬಿಡದಿರು
ಕರುಣತೋರದಿರವರ ರಕ್ತವ ಹೀರಿ ಕೈದೋರಿ ।
ಅರಿವರವರಿಂದೆಮ್ಮ ಧೀರರ
ಪರಮವಿರದ ಕೈಮೆಸ್ಸೈಮೆಯ
ನರಿಯಲವರಿಂದೆಮ್ಮ ಶಸ್ತ್ರದೊಳೆಂದರವರಾಗ ॥೩೧॥

ಧೂಳಿಯೆದ್ದುದು ಮುಸುಕುತಾಗಸ
ಖೂಳ ರಕ್ಕಸ ಪಡೆಯ ತುಳಿತದಿ
ದಾಳಿಯೆಬ್ಬಿಸಲಾಗ ತಮ್ಮನ ಕರೆದು ರಘುವೀರ ।
ಏಳು ಸೀತೆಯುಬಳಿಯೊಳಿರು ದು
ಷ್ಟಾಳಿ ಬರುತಿದೆ ಕತ್ತಲೆಬ್ಬಿಸಿ
ಧೂಳಿಪಟಮಾಡುವೆನು ನಿಮಿಷದೊಳೆಂದನಾ ರಾಮ ॥೩೨॥

ನಿಂದ ಲಕ್ಷ್ಮಣ ಸೀತೆ ರಕ್ಷಣೆ
ಗೆಂದು ಕಾರ್ಮುಕವಿಡಿದು ಭಾನುಕು
ಲೇಂದ್ರ ನಾಮಸ್ಮರಣೆಯಲಿ ಹೊಗಲತ್ತ ಗಂಹರವ ।
ಬಂದುದಿತ್ತಲು ಕವಿದು ರಾಕ್ಷಸ
ವೃಂದ ಕೋರೆಯುದಾಡೆದೋರಿ ಮು
ಕುಂದ ಲಕ್ಷ್ಮಣ ಸೀತೆಯುರನರಸುತ್ತ ವಿಪಿನದಲಿ ॥೩೩॥

ಪಿಡಿದು ಕೋದಂಡವನು ಕಟ್ಟಿತ
ಜಡೆಯು ರಘುಪತಿ ಶೋಭಿಸಿದ ಹೊಳೆ
ದೊಡನೆ ಮರಕತಮಣಿ ಶಿಖರದಲಿ ಮಿಂಚುಹೊಡೆದಂತೆ ।
ಹೆಡೆಗಳುಳ್ಳ ಶರಾಸನಂಗಳ
ಸಿಡಿಲಬಾಣವ ತುಂಬಿ ಧರಿಸಿದ
ಪಿಡಿದು ಖಡ್ಗವ ನಗುವ, ಕೇಸರಿ ಗಜವ ಕಂಡಂತೆ ॥೩೪॥

ಹೋರಿ ಹುಲಿ ಸಿಂಹದೊಲು ದೈತ್ಯರು
ಸಾರು ಪಿಡಿ ಕಟ್ಟುವರ ಬಿಡದಿರು.
ನಾರಿಯಂ ಭಂಗಿಸಿದನಾವನು ಹಿಡಿಯಿರೆನ್ನುತಲಿ ।
ಏರಿ ಬಂದರು ಬಾಲಸೂರ್ಯನ
ಘೋರದನುಜರು ಮುತ್ತಿದರು ರಣ
ಧೀರನಂ ಕೊಲ್ಲಲ್ಕೆ ಮನದಾತುರದಿ ಸಾಹಸದಿ ॥೩೫॥

ಬೆದರಿದುಧು ಖಗ ಚದರಿದುದು ಮಿಗ
ಮದನ ಮೋಹನರೂಪ ರಘುಪತಿ
ಯೆದೆಗೆ ಬಾಣವ ಬಿಡಲು ಮರೆತರು ಮೊಗವ ನೋಡುತಲಿ ।
ಕದಡಿದುದು ಮತಿ ಮುಂದನರಿಯದೆ
ಚದುರ ಮಂತ್ರಿಯು ಖರನು ಕರೆಸಿದ
ಬುಧನೆ ನರಭೂಷಣನು ಸುಂದರ ರೂಪನಿವನಾರೋ ? ॥೩೬॥

ಸುರನರೋರಗರಸುರ ಮುನಿ ಕಿ
ನ್ನರರ ನೋಡಿಹೆನವರ ಕೊಂದಿಹೆ
ನರರೆ ರಾಘವನೊಲು ಸುರೂಪರ ಕಾಣೆ ಪುರುಷರೊಳು ।
ತರಳೆ ತಂಗಿಯ ಭಂಗಿಸಿದನಿವನಾ
ದರು ಮನೋಹರ ವಧೆಗೆ ಯೋಗ್ಯನೆ
ಮರಳುವೆವು ಸೌಂದರ್ಯ ವಾರಿಧಿವುಳಿಯಲಿನ್ನೇನು ॥೩೭॥

ಇತ್ತು ಪತ್ನಿಯನೆಮಗೆ ಬದುಕಲಿ
ಸತ್ತು ಕೆಡದಿರಲಿರ್ವರನ್ನುಳು
ಹುತ್ತ ಕಳುಹುವೆವೆಂದು ದೂತರ ಕರೆಸಿ ಹೇಳಿದನು ।
ಅತ್ತ ರಾಮಂಗಿದನು ನೀವ್ಪೊರೆ
ಯುತ್ತಲುತ್ತರತಹುದು ಶೀಘ್ರದೊ
ಳುತ್ತಮರೆ ನಡೆಯಿರೆನೆ ಬಂದರು ರಾಮುಸನ್ನಿಧಿಗೆ ॥೩೮॥

ಅರಿಯದಾ ರಘುವರನ ಪೌರುಷ
ಧುರುಳ ಪಡೆ ಯಮನೂರ ಮಾರ್ಗವ
ತೆರಪುಗೊಳಿಸುತ ಮಶಕ ತಿವಿಯಲು ಮೇರು ಕದಲುವುದೆ ।
ಬರುತ ರಕ್ಕಸ ದೂತರೊರೆದರು
ಖರನ ಭಾಷೆಯ ಕೇಳಿ ನಗುತಲಿ
ಬರಲಿ ಬವರದಿ ತಲೆಯ ಚೆಂಡಾಡುವೆನು ನಿಮಿಷದಲಿ ॥೩೯॥

ನಾವು ಪಾರ್ಥಿವರ್ಕೈ ಮೃಗಂಗಳ
ನಾವಗಂ ಬೇಂಟೆಯಲಿ ಕೊಲುವೆವು
ನಾವು ನಿಮ್ಮವೊಲಿರುವ ಖಗಮೃಗ ಪಡೆಯನರಸುವೆವು ।
ಜೀವಗಳ್ಳರು ನೀವು ನಿಮಗಿ
ನ್ನಾವು ಬೆದರೆವು ಧರ್ಮಪಾಲಕ
ರಾವು ಭುಜಬಲವರಿಯಿರ್ಕೈ ಯಮಗಾವುಯಮರೆಂದ ॥೪೦॥

ನಾವು ಮನುಜರು ದನುಜಕುಲವನ
ಪಾವಕರು ಮುನಿಪಾಲಕರು ಬರ
ಲಾ ವನೇಚರ ಖಳರು ಸಿಗಿವೆವು ಬಲಿಯನಿಕ್ಕುವೆವು ।
ಜೀವವುಳಿವೊಡೆ ಸಾಗಲಿಂದೇ
ಧಾವಿಸುತ ನಿಜನೆಲೆಗೆ ಯುದ್ಧದಿ
ಸಾವು ನಿಶ್ಚಯವೆಂದು ಪೇಳಿರಿ ಖರಗೆ ನೀವೆಂದ ॥೪೧॥

ರಣದಿ ಧನುವಿಡಿದಿಂತು ಕೈತವ
ಮನಕೆ ಕರುಣೆಯೆ ಶತ್ರುವೆಂಬೀ
ಘನ ಭಯಂಕರ ಹೇಡಿತನವೆಮಗಿಲ್ಲ ನಡೆಯಿರನೆ ।
ದನುಜದೂತರು ಬಂದು ಖರದೂ
ಷಣರ ಕಾಣಿಸಿಕೊಂಡು ನುಡಿಯಲು
ಕಣುಗಳಲಿ ಕಿಡಿಗಾರಿ ರೋಷಜ್ವಾಲೆ ಮುಖನಾದ ॥೪೨॥

ಹಿಡಿಯವನ ಬೆಂಬತ್ತು ನೀನೆಂ
ದೊಡನೆ ತೋಮರಶೂಲ ಕಾರ್ಮುಕ
ಕೊಡಲಿ ಪರಿಘ ಕೃಪಾಣ ಖಡ್ಗವ ಶಕ್ತಿ ಶರಗಳನು ।
ಪಿಡಿದು ಧಾವಿಸೆ ರಾಮ ಧನುವನು
ನುಡಿಸಿ ಟಂಕಾರವನು ಮಾಡಲು
ಕೆಡೆದರಾಗಲು ಭಯದೊಳಜ್ಞಾನದಲಿ ಎದೆಯೊಡೆದು

ಅರಿ ಭಯಂಕರನೆಂಬುದರಿಯುತ
ದುರುಳ ಮೋಹರ ಯುಕ್ತಿಯಿಂದಲಿ
ಕರೆದು ಶರವರ್ಷವನು ಕತ್ತಲುಗೈದು ಬರುತಿರಲು ।
ಹರಿಯು ಕೋದಂಡದಲಿ ಬಾಣವ
ಕರೆದು ಕತ್ತರಿಸಿದನು ತೃಣದೊಲು
ಮುರಿಯುತಂಗಾಂಗಗಳ ಧೃತಿ ಶಕ್ತಿಗಳ ಕೀಲಿಸಿದ ॥೪೪॥

ಬಿಟ್ಟ ಶರ ವಿಷ ಸರ್ಪದಂತಾ
ದುಷ್ಟ ರಕ್ಕಸರೆದೆಯ ನಾಟಿತು
ಸಿಟ್ಟುಗೊಂಡಿರೆ ರಾಮ ಸಮರದಿ ಕೆಂಗಿಡಿಯಕಾರಿ ।
ತೊಟ್ಟ ಸಾಯಕ ನೆಗೆದು ಶತ್ರುವ
ತಟ್ಟನೇ ಸೀಳುವುದು ಕೆಡಹುತ
ಸುಟ್ಟು ಜನ್ಮಾಂತರದ ಪುಣ್ಯದ ಲೋಕಗಳನೆಲ್ಲ ॥೪೫॥

ನೋಡಲಾರರು ಬರುವ ವಿಶಿಖವ
ಮೂಡಿದೇಹದಿ ಸೀಳುವಡೆದರೆ
ಹೇಡಿದೈತ್ಯರು ಚಿನ್ನ ತೆತ್ತರು ರಾಮಭಯದಿಂದ ।
ನೋಡಿ ತಾಯ್ತಂದೆವಿರ ಖಳಖರ
ನೀಡಿಹನು ಜವರಾಯಗೆಮ್ಮನು
ನೋಡಬಹುದೇ ರಾಮಬಾಣವನೆಂದು ಗೋಳಿಡುತ ॥೪೬॥

ವೀರಭಟರೋಡುತಿರೆ ಭಯದಿಂ
ಶೂರ ಖರದೂಷಣರು ಕರೆಯುತ
ಬಾರದಿರಲಾಂ ಕೊಲುವೆನೀಗಳೆ ನಿಮ್ಮನೆಂದೆನಲು ।
ಹೋರಿ ಸಾವುದು ಮೇಲು ರಣದಲಿ
ಸಾರಸಾಕ್ಷನ ಕರದಿ ಶಿಕ್ಷೆಯಿ
ದಾರ ಹೊರೆವುದು ನಡೆಯಿರೆನ್ನುತ ಕಳನ ಮುತ್ತಿದರು ॥೪೭॥

ಬಿಟ್ಟ ನಾನಾ ಶಸ್ತ್ರ ರಿಪುಗಳ
ಸುಟ್ಟು ರಾಘವ ನೋಡುತರಿಪಡೆ
ಸಿಟ್ಟುಗೊಂಡಿಹುದರಿದು ಕೋದಂಡವನು ಜೇವಡೆದು ।
ತೊಟ್ಟು ಬಾಣವ ತಲೆಗಳುರುಳಿಸಿ
ಬೆಟ್ಟ ಕೈ ತೊಡೆಕಾಲು ತೋಳ್ಗಳ
ನಟ್ಟಿಗಳ ಹೊಟ್ಟೆಗಳ ತುಂಡರಿಸಿಟ್ಟ ಚೆಲುವಾಗಿ ॥೪೮॥

ಶರವಿಘಾತಿಗೆ ನೊಂದು ಬೀಳುವ
ರರಚಿ ಕಳಚುವ ರುಂಡ ಮುಂಡದ
ಪೆರುವತವು ಮೇಲೆದ್ದುದಾ ರಣರಂಗ ಮರೆಯಾಗೆ ।
ಅರಿ ಶರೀರವ ಹೆಸರನಳಿಸಿದ
ನಿರಿದನಾದೊಡೆ ಮಾಯಬಲದಿಂ
ಮರಳಿ ಜೀವವ ಪಡೆಯುತೇಳ್ವವು ಸತ್ತ ಪೆಣನಿಕರ ॥೪೯॥

ರುಂಡ ನೆಗೆದುದು ಮುಂಡ ಕುಣಿದುದು
ದಿಂಡು ಗೆಡೆದುದು ದೇಹ ರಣದಲಿ
ತುಂಡು ತುಂಡಾಗಿರುವ ಭುಜ ಕೈಕಾಲು ಗಗನದಲಿ ।
ಅಂಡಲೆಯುತಿರುವಾಗಲವುಗಳ
ಕಂಡು ಕಾಕ ಶೃಗಾಲವೆರಗುತ
ತುಂಡರಿಸಿ ತಿನ್ನುತ್ತ ತೇಗಿದುವಾಗ ಸಂತಸದಿ ॥೫೦॥

ಒಡನೆ ರಣಹದ್ದುಗಳು ಜಂಬುಕ
ಪಡೆ ಪಿಶಾಚ ಪ್ರೇತಗಣ ಕುಡಿ
ಕುಡಿದು ಮೊಗೆಯುತ ನೆತ್ತರಂ ಮನದಣಿಯೆ ಸವಿಸವಿದು ।
ಒಡೆದು ಭುಜದಂಡಗಳ ರಾಮನು
ಕೆಡಹುತಿರೆ ಮತ್ತೆದ್ದು ಘರ್ಜಿಸಿ
ಹಿಡಿದು ಕೊಲ್ಲೆನುತಿರ್ದುವಲ್ಲಿಯ ಪೆಣದ ತುಂಡುಗಳು ||೫೧||

ಹಾರಿದುವು ಹದ್ದುಗಳು ಮಾಂಸದ
ಚೂರುಗಳ ಕೊಂಡೊಯ್ದು ಭೂತವು
ಸಾರಿದುದು ಹೆಣಹೆಕ್ಕಿ ಶಾಕಿನಿ ಡಾಕಿನಿಯರೀಸಿ ।
ಘೋರಸಂಗರ ಪುರದಿ ಪುಳುಗಳು
ಸಾರಿ ಬಂದವೊಲಾಯ್ತು ರಾಘವ
ಹಾರಿಸಿದ ರುಂಡಗಳ ಬಾಣಕೆ ಬಲಿಯಿನಿಕ್ಕುತಲಿ ||೫೨||

ಕೆಲವರೆದೆ ಸೀಳಿದುದು ಕೆಲವರು
ನೆಲವ ಕಚ್ಚಿದರಲ್ಲಿ ಮೂರ್ಛೆಯೊ
ಳಳಲಿ ಬಳಲಿದರಲ್ಲಿ ಮೋಹದೊಳಿಂತು ಸೋತಿರಲು ।
ಖಳ ಖರ ತ್ರಿಶಿರಸ್ಸು ದೂಷಣ
ರೆಳೆದು ಬಲವನು ಕರೆದು ಧೈರ್ಯದಿ
ನಿಲದೆ ರಾಮಂಗಿದಿರುವಂದರು ಕೋಪಗಿಡಿಯಿಂದ ||೫೩||

ಪಿಡಿದು ತೋಮರ ಶಕ್ತಿ ಕಾರ್ಮುಕ
ಕೊಡಲಿ ಶೂಲಕೃಪಾಣ ಬಾಣವ
ಕಡುಗಲಿಗಳೆಸೆದೆಲ್ಲ ಕೈದುಗಳೊಮ್ಮೆ ಬೀಸಿದೊಡೆ ||
ತೊಡುತ ಕೂರಲುಗಿಂದ ನಿಮಿಷದೊ
ಳಡಗಿಸಿದ ಶಸ್ತ್ರಾಸ್ತ್ರವುಬ್ಬಟೆ
ಯೊಡೆದ ರಕ್ಕಸರೆದೆಯ ಕೋಲ್ಮೊನೆಯಿಂದ ದಾಶರಥಿ ||೫೪||

ಬೀಳುತೇಳುತ ಸಾವುಗಾಣದೆ
ಖೂಳರಕ್ಕಸ ನಿಕರ ಮಾಯದಿ
ಬಾಳುತಿರೆ ಸುರಜಾಲ ಬೆದರಿತು ರಾಮನೊಬ್ಬನಿರೆ ।
ದಾಳಿಯಲಿ ಹದಿನಾಲ್ಕು ಸಾವಿರ
ವಾಳು ಕವಿಯಲು ಭಯದಿ ಚಿಂತಿಸೆ
ಲೀಲೆಯಿಂ ರಘುರಾಮ ಹೊಕ್ಕನು ಸಕಲದೇಹದಲಿ ॥೫೫॥

ಒಬ್ಬನೊಬ್ಬನ ರಾಮರೂಪವ
ನುಬ್ಬಿ ಕಾಣುತ ಶತ್ರುವೆನುತಲಿ
ಕೊಬ್ಬಿ ತಿವಿಯುತ ಕೆಡಹಿ ಸೈನ್ಯವನಿಂತು ತುಂಡರಿಸೆ ।
ಹಬ್ಬಿದುದು ರಘುರಾಮ ನಿಸ್ವನ
ಕಬ್ಬ ಸಾಯುತ್ತಿರುವ ಬಾಯಲಿ
ತಬ್ಬಿದರು ಮುಕ್ತಾಂಗನೆಯ ರಘುವರನ ಕರುಣದಲಿ ॥೫೬॥

ಖರನ ಶಿರಹಾರಿದುದು ದೂಷಣ
ಮರಣ-ಪಟ್ಟವನೇರೆ ರಘುಪತಿ
ಚರಣದಿ ತ್ರಿಶಿರಸ್ಸು ಮಡಿದನು ರಾಮಜಾನದಲಿ ।
ಹರಿಯರಿಯ ಹೃದಯದಲಿ ಕಾಣಿಸಿ
ತರಿದ ನಿಮಿಷದಿ ಶತ್ರುನಿಕರವ
ಸುರರ ಸಲಹಿದ ಮುನಿಗಳುಳುಹಿದ ದೇವ ಕರುಣದಲಿ ॥೫೭॥

ಆರಿದುದು ರಿಪುವೃಂದ ತಾವೇ
ಹೀರಿಕೊಂಡರು ಜೀವ ಮಾಯೆಯ
ಬೀರಿ ಕೆಡಹಿದ ರಾಮ ಸುರಪಡೆ ಸುಮವ ಸೂಸಿದುದು ।
ಹಾರಿದರು ಹೊಗಳಿದರು ವಾದ್ಯವ
ಬಾರಿಸುತ ಸನ್ಮಾನಿಸಿದರಾ
ಸಾರಸಾಕ್ಷನ ರಾಮಚಂದ್ರನ ಮಹಿಮೆ ಕೊಂಡಾಡಿ ॥೫೮॥

# ವಿಶ್ರಾಮ ೪

ಸೂ॥ ಹರಿಣವಂ ಬೆಂಬತ್ತಿ ರಘುಪತಿ
ತೆರಳೆ ರಾವಣ ಸೀತೆಯನ್ನಪ
ಹರಿಸಿ ಕೊಂದು ಜಟಾಯುವಂ ಖಳ ಲಂಕೆಗೈತಂದ ॥

ಕೊಂದು ರಾಕ್ಷಸಗಣವ ಸುರಮುನಿ
ವೃಂದ ಭಯಪರಿಹರಿಸಿ ರಘುಪತಿ
ನಿಂದಿರಲು ಸೀತಾಸಹಿತ ಲಕ್ಷ್ಮಣನು ನಡೆತಂದು ।
ವಂದಿಸಲು ಪಿಡಿದೆತ್ತಿ ತಮ್ಮನ
ಚೆಂದದಿಂದಾಲಿಂಗಿಸಿದ ಜವ
ದಿಂದ ಜಾನಕಿ ವಿಜಯಿಯಾಗಿಹ ಪತಿಯನೋಡಿದಳು ॥೧॥

ಹರುಷಮುಕ್ಕಿತು ನೋಟಸಿಕ್ಕಿತು
ಹರಿಯನೋಡುತ ತನ್ನ ಮರೆತಳು
ಹರಿಯೆ ಪರಮಪ್ರೇಮ ಹೃದಯದೊಳತ್ತ ಶೂರ್ಪನಖಿ ।
ಉರಿಯುತಿರೆ ಹೃದಯಾಗ್ನಿ ಸೋದರ
ಮರಣ ತನ್ನಯ ಸೋಲು ಪೆರ್ಚಲು
ಮೊರೆದು ರಾವಣನೆಡೆಯ ಸಾರ್ದಳು ಧಿಕ್ಕುಗಾಣದೆಯೆ ॥೨॥

ಉಕ್ಕಿಬಹ ಕುಡುಕೋಪವನು ಮುಂ
ದಿಕ್ಕಿ ಘರ್ಜಿಸಿ ದೇಶಕೋಶವ
ಲಕ್ಕಿಸದೆ ನೈವುರೆದು ರಾವಣ ಮದ್ಯಪಾನದಲಿ ।
ಸೊಕ್ಕಿ ನಿಶಿದಿನ ನಿದ್ರೆಯಿಂದಿರೆ
ನೆಕ್ಕುವರುನೆತ್ತರನು ರಿಪುಗಳು
ಕಕ್ಕುಲಿತೆಯೇಕಿನ್ನು ಮನುಜರು ಸೋಲಿಪರು ನಿನ್ನ ॥೩॥

ಯತಿಕುಸಂಗದಿ ಮತಿಕುಡಿತದಿಂ
ಕ್ಷಿತಿಪ ಮಂತ್ರಿಗಳಿಂದ ಸದ್ಗುಣ
ಮತಿ ಮದವಿಯುವಿನಯದಿ ಪ್ರೀತಿಯು ಕೆಡುಗು ಶೀಘ್ರದಲಿ ।
ಸತತ ಮದ್ಯವಸವಿದು ನಾರೀ
ತತಿಯನೊಲಿಸುತ ನಮ್ಮ ರಕ್ಷಿಪ
ಮತಿಯುಗಾಣವೆ ಮರೆತೆಯೆನ್ನುತ ಬಿಳ್ದಳಾದನುಜೆ ||೪||

ಮೂರು ಲೋಕದ ಗಂಡ ಬದುಕಿರೆ
ಬಾರದಿಹ ಬಹು ಕಷ್ಟವೊದವಿತು
ಜಾರಿತೇ ಬಲ ಭುಜಗಳಿಂದೆನೆ ನೋಡಿ ರಾವಣನು ।
ಆರು ಭಂಗಿಸಿದವರು ಧಿನ್ನನ
ದಾರು ಕೆಣಕಿದರರರೆ ಧೈರ್ಯವಿ
ದಾರ ಹೊಕ್ಕಿತು ಕೊಯ್ದರೇ ಕಿವಿಮೂಗುಗಳನೆಂದ ||೫||

ಪುರುಷ ಸಿಂಹನಯೋಧ್ಯೆ ಪುರವರ
ದರಸ ರಾಮನು ಸಂಚರಿಸುತಲಿ
ತರುಣಿಯನುಜರ್ವೆರಸಿ ದಂಡಕವನದಿ ನೆಲೆಸಿಹನು ।
ತರಳರಿರ್ವರು ಪರಮವೀರರು
ಧರೆಯ ಧರ್ಮಗಳರಿತವರು ಸುರ
ನರರ ಮುನಿಸುಖದಾಯಕರು ಸೌಂದರ್ಯನಿಧಿಯವರು ||೬||

ಹಿರಿಯನೇ ರಘುರಾಮನವರೊಳು
ತರಳೆ ಜಾನಕಿಯತಿ ಸುರೂಪಿಣಿ
ಧರೆಯೊಳಿಹರೇ ಸುಂದರಿಯರಾ ಸೀತೆಯೊಲು ಮತ್ತೆ ।
ಅರಿತು ನಿನಗಾಂ ತಂಗಿಯೆಂಬುದ
ನಿರಿದು ಕಿವಿಮೂಗುಗಳ ಲಕ್ಷ್ಮಣ
ಹರಿದು ನೂಕಿದನೆನ್ನ ವಧುವೆಂದುಳುಹಿದನು ಕೊಲದೆ ||೭||

ಅಳುತಲಾಂ ಮೊರೆಯಿಡಲು ಕರುಣದಿ
ಕಳನೊಳಗೆ ಖರದೂಷಣಾದ್ಯರು
ಬಲಸಹಿತ ಘನಘೋರಯುದ್ಧವ ಮಾಡಿದರು ಬಲಿದು |
ಬಿಲ್ಲುವಿಡಿದು ಹದಿನಾಲ್ಕು ಸಾವಿರ
ಬಲವ ಕೊಂದನು ರಾಮ ನಿಮಿಸದಿ
ಸುಲಭದಿಂದೆನೆ ಕಿಡಿಯ ಕಾರಿದನಾಗ ರಾವಣನು ||೮||

ತಂಗಿಯಂ ಸಂತವಿಸಿ ತೋಳ ಬ
ಲಂಗಳಂ ವಿವರಿಸುತಲೊದವಿದ
ಭಂಗಗಳ ನೆನೆಯುತ್ತೆ ರೋಷದಿ ನಡೆದನರಮನೆಗೆ |
ಕಂಗಳುರಿಗಾರುತಿರೆ ರಾವಣ
ಹಿಂಗಿದನು ದುಃಖದಲಿ ಮರುಗುತ
ತಂಗಿದನು ಮರೆಯುತ್ತ ನಿದ್ರೆಯ ಕೋಪವಶನಾಗಿ ||೯||

ದನುಜ ಸುರನರನಾಗ ಖಚರರೊ
ಳೆನಗೆ ಸಮರಾರಿಹರು ಶೌರ್ಯದೊ
ಳನುಜರಾ ಖರದೂಷಣ ತ್ರಿಶಿರಸ್ಸುಗಳನುಳಿದು |
ಸೆಣಸಿ ಬದುಕುವರಾರು ರಾಕ್ಷಸ
ರಣದಿ ಮಾನವಗೆಣೆಯೆ ಯುದ್ಧದಿ
ಮಣಿವರೇ ಭಗವಂತನಲ್ಲದೆ ಶಕ್ತರಿನ್ನಿಹರೆ ||೧೦||

ಅವತರಿಸಿ ನರರೂಪದಲಿ ಶ್ರೀಹರಿ
ಬುವಿಯ ಭಾರವನಿಳುಹೆ ಬಂದಿರ
ಲವನ ಹಗೆಯಿಂದೊಲಿಸಿಕೊಂಬೆನು ಛಲದಿ ನೋಡುವೆನು |
ಅವನ ಕರುಣಾಪಥದ ಬಾಣದಿ
ಭವ ಸಮುದ್ರವ ಹಾಯ್ದು ಜನ್ಮವ
ಸವೆದು ಮುಕ್ತಿಯ ಕರವ ಪಿಡಿಯುವೆನೆಂದು ಚಿಂತಿಸಿದ ||೧೧||

ನೆನೆಯ ಬಹುದೇ ಹರಿಯ ತಾಮಸ
ತನುವ ಧರಿಸುತಲಾನು ಹರಿಯೊಳು
ಸೆಣಸಿ ಬದುಕುವೆನೇ ರಘೂತ್ತಮನೆನಗೆ ಸೋಲುವನೆ ।
ವನದಿ ವಂಚಿಸುತವನ ಮೋಸದಿ
ವನಿತೆ ಸೀತೆಯನಪಹರಿಸಿ ತಹೆ
ನೆನುತ ಪಾಪವ ನೆನೆದ ಮೃತ್ಯುವಿಗಾತಣಸನಿಕ್ಕಿ ॥೧೨॥

ಹಲವು ರೂಪಕ್ಷಣದಿ ಧರಿಸುತ
ಸುಲಭದಿಂದೊಲಿಸುವನು ಮೋಸದಿ
ಬಲಕೆ ಬೆದರುವನಲ್ಲ ಬಾಲಕ ನಮ್ಮ ಮಾರೀಚ ।
ಹಳುವದಿರಗಳ ಬಲ್ಲ ಮಾನವ
ಲಲನೆಯರ ಗುಣ ಬಲ್ಲ ಸೀತೆಗೆ
ಚೆಲುವು ಕನಕಾಮೃಗದಿ ಮೋಹವು ಗೆಲವಿದಾಯ್ತೆಂದ ॥೧೩॥

ತೆರಳಿದನು ಮಾರೀಚನೆಡೆಗಾ
ದುರುಳ ಸೀತಾಮೋಹವಶದಲಿ
ಮರೆತು ಧರ್ಮವ ಭುಜಪರಾಕ್ರಮ ಕೆಚ್ಚಿನಿಂ ನಡೆದು ।
ಗಿರಿಜೆ ಕೇಳಾ ರಾಮನೆಸಗಿದ
ಪರಮ ಘನಲೀಲೆಗಳ ಸೀತೆಯು
ಕರೆಯುತೊರೆದ ರಹಸ್ಯದಲಿ ಭೂಭಾರ ಕಾರಣವ ॥೧೪॥

ವರಕೃಪಾಸುಖವೃಂದ ಜಾನಕಿ
ಕರವಿಡಿದು ತಾನೆಂದ ನಗುತಲಿ
ತರಳೆ ಹದಿಬದೆಯರಲಿ ಪಾವನೆ ಪರಮಘನಶೀಲೆ ।
ಧರೆಯ ಭಾರವ ಕಳೆವೆ ನೀನಿ
ನ್ನಿರದೆ ಪಾವಕ ರಕ್ಷೆಯಲ್ಲಿರು
ದುರುಳರಂ ಕೊಲುವನಕ ಕಣ್ಮರೆಯಾಗು ಬೇಗೆಂದ ॥೧೫॥

ಪತಿ ರಹಸ್ಯಗಳರಿತು ಬಿಂಬವ
ಹುತವಹನ ರಕ್ಷಣೆಯೊಳಿಡುತ
ಕ್ಷಿತಿಜೆ ಮಾಯಾರೂಪದಿಂ ಧರೆಗಿಳಿದಳಿನ್ನೊಮ್ಮೆ ।
ಮತಿ ಮನದಿ ನಿಜಗುಣದಿ ಸೀತೆಯು
ಗತಿಯನೇ ಹೋಲುತ್ತ ನಿಂದಳು
ಪತಿಯು ನರನಾಟಕದಿ ಪಾತ್ರವ ತಾನೆ ರಚಿಸಿದಳು ॥೧೬॥

ಅರಿಯನೀ ಮಾಯೆಗಳ ಲಕ್ಷ್ಮಣ
ನರಿವರೇನುಳಿದವರು ಸೀತೆಯು
ಪರಮಘನ ಮಾಯೆಗಳ ಸುಲಭಗುಣಗಳನು ।
ಇರುತಿರಲ್ಕೀ ರೀತಿಯೆತ್ತಲು
ದುರುಳ ರಾವಣನತ್ತ ಕಾಣುತ
ಭರದಿ ಮಾರೀಚನಿಗೆ ನಮಿಸಿದ ಕುಶಲವನು ಕೇಳಿ ॥೧೭॥

ಉರಗ ಚಾಪಾಂಕುಶ ಬಿಡಾಲದ
ತೆರದಿ ದುಷ್ಟರ ನಮನವಹಿತವು
ದುರುಳರಾ ಪ್ರಿಯವಚನ ಭಯದಾಯಕವು ಧರಣಿಯಲಿ ।
ಕರೆದು ಸತ್ಕರಿಸುತಲಿ ದಶಕಂ
ಧರನ ಪದುಳದಿ ಕೇಳ್ದ ತಂದೆಯೆ
ಬರವಿದೇನಿದು ದುಗುಡವಿದು ನಿನಗೇಕೆ ಹೇಳೆಂದ ॥೧೮॥

ಬಂದಕಾರ್ಯವನೊರೆದು ಸೋದರ
ಬಂಧುವರ್ಗದ ಪರಿಭವವನೊರೆ
ದೆಂದ ರಾವಣ ಕನಕಮೃಗ ರೂಪವನು ನೀತಾಳ್ದು ।
ಇಂದುಮುಖಿಯೆಡೆಗೈದಿ ಸುಳಿಯುತ
ಲಿಂದು ಮೃಗಪಡೆವಾಸೆ ಪೆರ್ಚಲು
ತಂದೆ ಸೋದರರಿರ್ವರಂ ಸೆಳೆದೂರ ಕಾನನದಿ ॥೧೯॥

ಅನಿತರಲಿ ಸಂನ್ಯಾಸಿ ವೇಷದಿ
ಜನಕಜೆಯನಪಹರಿಸಿ ಲಂಕೆಯ
ಮನೆಯ ಸೇರುವೆ ಪತ್ನಿವಿರಹದಿ ರಾಕ್ಷಸರೆ ಭಯದಿ ।
ಮನುಜ ಶತ್ರುಗಳಳಿವರ್ಕೆ ನೀನಿ
ನ್ನೆನಗೆ ಸಾಧಕನಾಗು ನಡೆನಡೆ
ಮುನಿಯದಿರು ನೆನೆದೆಮ್ಮ ಸೋದರ ಹಗೆಯ ಹರಿಬಗಳ ॥೨೦॥

ಎನಲು ಬಿಡು ಬಿಡು ರಾಮನಲಿ ಹಗೆ
ತನವ ಮಾಡದಿರೆಲೆಲೆ ರಾವಣ
ಮನುಜನಾದೊಡವೇನು ಸಚರಾಚರಕೊಡೆಯನಹನು ।
ನಿನಗೆ ಮರುಳೇನೆಸಗಿ ಕೈತವ
ಕೆಣಕಿ ರಾಮನ ಸಾವಮಂತ್ರವ
ದನುಜಪತಿ ನಿನಗೊರೆದರಾವರು ನಮ್ಮ ಬಳಗದಲಿ ॥೨೧॥

ಬದುಕಬಲ್ಲೆಯ ಕೆಣಕಿ ರಾಮನ
ನಿದಿರುಗೊಂಡರೆ ಮುಕ್ತಿಯಲ್ಲದೆ
ಪದವಿಗಿದವಿಯ ಮರೆವುದೊಂದೇ ಕಾರ್ಯನಿನಗಿನ್ನು ।
ಮದಿಸಿದಾ ಖರದೂಷಣಾದ್ಯರ
ಕದನಮುಖದೊಳಗೊರ್ವನೇ ಮುರಿ
ದುದನು ನೀನೇ ಬಲ್ಲೆ ರಾಮನ ತೊಡಕು ಬೇಡೆಂದ ॥೨೨॥

ಹಿಂದೆ ವಿಶ್ವಾಮಿತ್ರಯಾಗದಿ
ಬಂದ ಭಂಗವನೇನನುಸುರಲಿ
ತಂದೆ ಕೊಂದ ಸುಬಾಹು ದನುಜನನೆನ್ನನುಳುಹಿದನು ।
ಒಂದು ಬಾಣದೊಳೆನ್ನ ನೂಕಲು
ಬಂದು ಬಿದ್ದೆನು ಜಲಧಿ ಮಧ್ಯದೊ
ಳಿಂದು ಕೋದಂಡವನು ಮರೆವೆನೆ ಮರಳು ಪುರಕೆಂದ ॥೨೩॥

ಆ ದಿವಸ ಪರ್ಯಂತ ಮನದಲಿ
ಸೋದರರ ಭಯರೂಪಮಲ್ಲದೆ
ಬೋಧೆಯಾಗದು ಬೇರೆ ಬೆಸಸುತಲಿಂತು ಕೊಲ್ಲದಿರು ।
ಭೇದಮೆಣಿಸದಿರಿನ್ನು ನರನೆಂ
ದಾದೊಡಂ ಮಾಯಾವಿ ರಾಕ್ಷಸ
ಬಾಧೆ ಕಳೆಯಲು ಬಂದ ಯಮ ಸಮಗಿವನು ತಿಳಿಯೆಂದ ॥೨೪॥

ಕೊಂದನಾ ತಾಟಕೆ ಸುಬಾಹುವ
ನಿಂದುಧರ ಧನು ಮುರಿದು ನಿನ್ನಯ
ಬಂಧುಗಳ ಖರ ದೂಷಣಾದ್ಯರ ಬಿಲುಹನೊರೆಸಿದನು ।
ತಂದೆಯಿವ ನರನಲ್ಲ ರಾಕ್ಷಸ
ವೃಂದ ಯಮ ಮನದಂದ ಬಯಕೆಯ
ನಿಂದು ಮರೆ ಕುಲದನುವ ನೆನೆ ನೀನೆಂದು ಬೋಧಿಸಿದ ॥೨೫॥

ಆಡದಿರು ಬಾಹಿರವ ಯುದ್ಧದೊ
ಳೋಡಿದರೆ ನೀನಂದು ಮನುಜರ
ಬಾಡು ತಿಂಬುವ ರಕ್ಕಸರಿಗಿದಿರಹರೆ ಲಂಕೆಯಲಿ ।
ಮೋಡಿಯಲಿ ಧನು ಮುರಿದ ಬಗೆಯನು
ನೋಡಿ ನಡುಗುವೆಯೇಕೆ ಎನ್ನೀ
ಜಾಡನರಿಯದೆ ನುಡಿವೆ ನಡೆ ಮಾರೀಚ ಹೋಗೆಂದ ॥೨೬॥

ಮರುಳಲಾ ನಿನಗಿಂದು ಸೀತೆಯ
ನರಸುವರೆ ಮೋಸದಲಿ ನಿನಗಿದ
ನೊರೆದನಾವನು ದನುಜಕುಲದಾವಾಗ್ನಿಯಾರವನು ।
ಮರಣ ನಿಶ್ಚಯಮೆನಗೆ ರಾಮನ
ಕರದೊಳಾದೊಡೆ ನಮ್ಮ ಮೂಲವ
ನೊರೆಸದಿಹನೇ ನೆನೆಯ ಬೇಡಿದನೆಂದ ಮಾರೀಚ ॥೨೭॥

ಉಕ್ಕಿದುದು ಕಡುರೋಷ ನಿನ್ನನು
ಕುಕ್ಕಿ ನೆತ್ತರ ಭೂತಕಿಕ್ಕುವೆ
ಸೊಕ್ಕಿನಿಂದೆನಗೊರೆವೆ ಬುದ್ಧಿಯ ಮಾತನವಿಧೇಯ |
ಕಕ್ಕುಲಿತೆಯೇಕಿನ್ನು ಮರಿತೆಯ
ರಕ್ಕಸಾಧಿಪನಿರವ ಯಮನಗ
ರಕ್ಕೆ ಪಯಣವ ಕಳುಹುವೆನು ಹೋಗದಿರೆ ಶೀಘ್ರದಲಿ ||೨೮||

ಹೊಗಳುಭಟ ಸಿರಿವಂತ ಭೇಷಜ
ಸುಗುಣಿ ಸಾಧ್ವಿ ವಿವೇಕಿ ಕವಿ ಮ
ರ್ಮಿಗಳ ಮೂರ್ಖ ಸ್ವಾಮಿ ಶಸ್ತ್ರೀ ಜನರ ಹಗೆಯೇಕೆ |
ಹೊಗದಿರಲು ಕೊಲ್ಲುವನು ರಾವಣ
ನಗಧರನು ಹೀರುವನು ನಡೆದೊಡೆ
ಮಗುಳೆ ಮುಕ್ತಿಗೆ ಸಲುವೆ ರಾಮನ ಬಾಣಕೆರವಾಗೆ ||೨೯||

ಹೊರಟ ರಾವಣನೊಡನೆ ರಾಮನ
ಚರಣಗಳ ನೆನೆಯುತ್ತ ಮನದಲಿ
ಪರಮ ಹರುಷವ ತಳೆದು ಬಾಹ್ಯವನುಳಿದು ವೈಮರೆದು |
ದುರುಳನಿವನರಿದಿಲ್ಲ ರಾಮನ
ಸರಸಿ ಜಾಂಘ್ರಿಯ ಮಹಿಮೆ ಸೀತೆಯ
ಪರಮಪಾವನ ಚರಿತೆಯರಿವನೆಯೆಂದು ಚಿಂತಿಸುತ ||೩೦||

ಬಹುದಿನದ ನೆನವಿಂದು ಫಲಿಸಿತು
ತಹುದು ಮೋಕ್ಷವನೊಂದು ಬಾಣದೊ
ಳಿಹಪರದಕೃತಿ ಸಿದ್ಧಿಯಾದುದು ಸೇವೆಸಂದುದಲಾ |
ಅಹಹ ರಾಕ್ಷಸ ಜನ್ಮ ಸಾಕಿ
ನ್ನಹಿಶಯನ ದರ್ಶನದಿ ಪಾಪದ
ಕಹಿಯ ನೀಗುವೆನಿಂತು ರಾವಣನಾಜ್ಞೆ ಪಾಲಿಸುವೆ ||೩೧||

ಕನಕ ಮೃಗ ರೂಪದಲಿ ಸೀತೆಯು
ಮನವ ಸೆಳೆಯಲ್ಕೆನ್ನ ಪಿಡಿಯಲು
ಧನುವಿಡಿದು ಬಹನೆನ್ನ ಹಿಂಬಾಲಿಸುತ ರಾಘವನು ।
ಅನಘ ಭಕ್ತಿಗೆ ಮೆಚ್ಚಿ ಬಾರನೆ
ವನದೊಳೋಡುತ ಮುಕ್ತಿ ಮಾರ್ಗವ
ನೆನಗೆ ಕಲ್ಪಿಸಿ ನೋಡದಿಹನೇನೆಂದು ಚಿಂತಿಸಿದ ॥೩೨॥

ಅನುಜ ಸತಿಯರ್ವೆರಸಿ ಮುನಿಯಂ
ತನಘನಿರಲಾಶ್ರಮವ ಹೊಕ್ಕನು
ಮನದ ಬಯಕೆಯು ನೆನೆದು ರಾವಣ ಕೈತವದಿ ಬಂದು ।
ಕನಕಮೃಗ ಮಾರೀಚನಾದನು
ನೆನೆದ ಮಾತ್ರದಿ ಹೇಳಲೇನದ
ಮಿನುಗಿ ಕಣ್ಮನ ಸೆಳೆಯುತಿರ್ದನು ತನ್ನ ನೋಡಿದರ ॥೩೩॥

ಥಳಥಳಿಸಿ ಕಣ್ಣುಗಳಿಗೆ ರಘುಪತಿ
ಬಳಿಯೊಳಿಹ ಜಾನಕಿಯು ಮುಂದೆಸೆ
ದೊಲಿಸಿ ವೈವರ್ಣದಲಿ ಚಂಚಲ ನೋಟದಿರಗಳಲಿ ।
ಹೊಳೆವ ಕಾಂಚನ ಮೃಗವು ಮೆಲ್ಲನೆ
ಸುಳಿಯಲಾಶ್ರಮದಲ್ಲಿ ಮಿಗದಾ
ಚೆಲುವಿಕೆಗೆ ಮನಸೋತು ಬಯಸಿದಳದನು ಹಿಡಿಯಲ್ಕೆ ॥೩೪॥

ಪರಮ ಪುಣ್ಯಶ್ಲೋಕ ನೋಡದೊ
ಬರುವ ಸುಂದರಮೃಗವ ಪಿಡಿತಹು
ದೆರಳೆಯಂ ಕೆಳೆಯಾಯ್ತು ಹಳುವದೊಳೊರ್ವಳಾನಿರಲು ।
ಪೊರೆವೆನೆಡವಿಡದಂತೆ ಮತ್ತೊ
ಯ್ದರಮನೆಗೆ ತೋರುವೆನು ಸೋದರಿ
ಯರಿಗೆ ಕಾನನವಾಸ ಕುರುಹನು ಬೇಗತಾರೆನಲು ॥೩೫॥

ಹರಿಣ ನೆಪದಿಂ ಸುರರಪೊರೆವಾ
ತುರದಿ ಕೊಂಡನು ಚಾಪ ಹೊದೆಗಳ
ನೆರಳೆಯಂ ಪಿಡಿದೀಗ ತರುವೆನು ಸಿಕ್ಕದಿರಲೋಡಿ |
ಅರಸಿ ಯುಕ್ತಿಯೊಳದನು ಪಿಡಿವೆನು
ಧರಣಿಜೆಯ ಬಳಿಯೊಳಿರು ಲಕ್ಷ್ಮಣ
ತೆರಳದಿರು ನೀನೆನ್ನುತೆಚ್ಚರಿಸಿದನು ರಾಘವನು ||೩೬||

ಸುಲಭವೇನಿದ ತಹುದು ಹೋಗುವೆ
ಹಳುವದಲಿ ರಕ್ಕಸರು ಹಲವರು
ಸುಳಿಯುವರು ನಾವಿಲ್ಲದಿಹ ಸಮಯದಲಿ ಭೀತಿಯಲಿ |
ತಳುವದಾನಿದ ಪಿಡಿದು ತರುವೆನು
ಇಳೆಯ ಮಗಳೊಡನಿರ್ದು ಕಾದಿಹು
ದಲಘುಮತಿ-ಹೋಗದಿರೆನುತ ಹಿಂಬಾಲಿಸಿದ ಮೃಗವ ||೩೭||

ಹರುಷ ವಿಸ್ಮಯದಿಂದ ಸುರರಾ
ದರಿಸಲತ್ತಲು ಹರಿಣವಿತ್ತಲು
ಹರಿಯು ಬೆಂಬತ್ತಿದುದನರಿಯುತ ನಿಲ್ಲದೋಡಿದುದು |
ಹರ ಹೃದಯ ಚಿನ್ಮೂರ್ತಿ ನಿಗಮಗ
ಳೊರೆವ ನೇತಿ ಸುವರ್ಣ ಮೃಗಮಂ
ತರಲು ಸುಳಿದನು ಪಂಚವಟಿಯಂ ದಾಂಟಿ ದೂರದಲಿ ||೩೮||

ಸಿಗದು ಸಿಕ್ಕಿತು ಪೊದರ ಹೊಕ್ಕಿತು
ಮಿಗದ ಬಗೆಯಿದು ಪಿಡಿವನಿತರಲಿ
ನೆಗೆದು ದೂರದಿ ನಿಂದು ಕರೆವಂತಾತುರದಿ ನೋಡಿ |
ರಘುವರನು ಕಂಡೊಡನೆ ಮಾರ್ಗದ
ಬಗೆಯುರಿಯದೊಲು ಹರಿದು ಕಾರ್ಗಾ
ಡುಗಳ ಮಧ್ಯದಿ ದೂರಕೊಯ್ದುದು ಹರಿಯ ಮನಸೆಳೆದು ||೩೯||

ಇದು ಮಿಗದ ಬಗೆಯಲ್ಲ ಮೋಸದ
ಹದನೊ ರಾಕ್ಷಸಮಾಯವೋ ಕೊಂ
ದಿದನು ತರುವೆನು ಸಿಗದು ಪಿಡಿಯಲ್ಕಿಗಲೆನ್ನುತಲಿ ।
ಮದಿಸಿದಾ ಮೃಗವನ್ನು ಕೆಡಹಿದ
ನೊದೆದು ಬಾಣವ ರಾಮು ಖಳ ಮರ
ಣದಲಿ ಕೂಗಿದನಿಂತು ಹಾ ಸೌಮಿತ್ರಿ ಹಾ ಸೀತೆ ॥೪೦॥

ಅರರೆ ಕೂಗಿದುದೇಕೆ ಮಿಗಮೆಂ
ದರಿಸಿ ಮಾರೀಚನ ಶರೀರವ
ಹರಿಯು ಕಂಡನು ಮುಕ್ತಿಗೇರಿಸಿ ಮತ್ತೆ ತಿರುಗಿದನು ।
ಎರಳೆಯಿಂತಳಿಯಲ್ಕೆ ಲಕ್ಷ್ಮಣ
ಧರೆಯ ಮಗಳಿದನಾಲಿಸಿದೊಡೆ
ಹರನೆ ಗತಿಯೇನೆಂದು ನೆನೆಯುತ ರಾಮು ನಡೆತಂದ ॥೪೧॥

ಕೇಳುತಾರ್ತಧ್ವನಿಯ ಬಿಳ್ದಳು
ಧೂಳಿಯಲಿ ಸೌಮಿತ್ರಿ ಹೋಗೈ
ಕೇಳದೇ ರಘುರಾಮನಾರ್ತಸ್ವರದಿ ಕರೆಯುತಿಹ ।
ಹಾಳುಮಿಗದಾಸೆಯಲಿ ರಾಮನ
ಬಾಳುಗೆಡಿಸಿದೆ ತಂದೆ ಹೋಗೈ
ತಾಳದಿರು ಹೋಗೆಂದು ಜಾನಕಿ ದುಃಖದಿಂ ನುಡಿಯೆ ॥೪೨॥

ದೇವಿ ರಕ್ಕಸ ಮೋಸವಿದು ಕಾಂಚನ
ಭಾವದಲಿ ಕೊಂಡೊಯ್ದು ರಾಮನ
ಹೇವಗೊಳಿಸಲ್ಕೆಮ್ಮನಾರೋ ಕೈತವದೊಳಿಂತು ।
ದೇವರಂ ಸೆಳೆದೊಯ್ದು ರಾಮಂ
ಗಾವ ಭಯ ಲೋಕೈಕವೀರನ
ದಾವ ಭೀತಿಯನರಿಯ ಸ್ಮರಿಸು ಧೈರ್ಯವಡೆಯೆಂದ ॥೪೩॥

ನಿನ್ನ ರಕ್ಷಣೆಗಿರಿಸಿ ತೆರಳಿಹ
ನೆನ್ನನದರಿಂ ನಿನ್ನ ಬಿಟ್ಟು
ನಿನ್ನು ಕಾಡೊಳು ಹೋಹುದನುಚಿತ ನಿನಗಹಿತವೆನಲು ।
ಎನ್ನ ಬಯಸುವೆ ನೀನು ರಾಮನ
ಬನ್ನವಂ ನೆನೆಯುವೆಯು ದುರ್ಮತಿ
ಗೆನ್ನೊಳಾದುದೆ ಮೋಹ ಹೋಗೆಂದೊರೆದ ಬಿರುನುಡಿಯ ॥೪೪॥

ಕೇಳಿ ನುಡಿಯದಿರೆಲೆಲೆ ಮಾತೆಯೆ
ಹಾಳುಹೊರದಿಹುದೇ ವಿರೋಧಿಗ
ಳಾಳು ಕಾದಿಹರಿಲ್ಲಿ ದಿಕ್ಪಾಲಕರು ರಕ್ಷಿಸಲಿ ।
ಹೇಳದಿರು ಬಿರುನುಡಿಯ ರಾಘವ
ನಾಳುತನವನ್ನರಿಯೆ ನೀನೆಂ
ದಾಲಿಸಿದೆ ಮರುಮಾತನೆಳೆದನು ಗೆರೆಯನಾಲ್ದೆಸೆಗೆ ॥೪೫॥

ಗೆರೆಯ ಮೀರಿದೊಡಹುದು ದುರ್ಗತಿ
ಬರದಿರಿದ ದಾಂಟುತಲಿ ರಾಮನ
ನರಸಿ ಶೀಘ್ರದಿ ಬಹೆನೆನುತ ಡೋಲಾಯಮಾನದಲಿ ।
ಧರಣಿಜೆಯ ನೆನವೊಂದು ಕಡೆ ರಘು
ವರನ ಪರಿಯೊಂದುಕಡೆ ಹೃದಯದೊ
ಳುರಿಯು ಹೊಗೆದೋರಿದುದು ಲಕ್ಷ್ಮಣ ಮುಂದೆ ನಡೆದಿರಲು ॥೪೬॥

ಇತ್ತಲಾರಿಲ್ಲದಿಹ ಸಮಯದೊ
ಳತ್ತ ರಾವಣ ಸೀತೆಯನ್ನರ
ಸುತ್ತ ಹೊಕ್ಕನು ರಾಮನಾಶ್ರಮ ಕಪಟಯತಿಯಾಗಿ ।
ಅತ್ಯಧಿಕ ಬಲನಿಂತು ಮೋಹದಿ
ಸತ್ವ ಬಲಗಳ ನೀಗಿ ಲೋಕದ
ಮೊತ್ತವಳಿಸುವ ಶಕ್ತಿ ಸಾಲದೆ ಮೋಸದಲಿ ಬಂದ ॥೪೭॥

ಭುವಿ ಭಯಂಕರ ಶುನಕನಂದದೊ
ಳವನಿಜಾತೆಯು ಬಳಿಯು ಸಾರ್ದನು
ತವಗೆ ಸರಿಯಾತೆಂದು ನೆಮ್ಮಿದ ಬಲವ ಮರೆಯುತಲಿ |
ಅವನಿಯಲಿ ದುರ್ಮಾರ್ಗಗಾಮಿಗೆ
ಸವನಿಸದು ಬುದ್ಧಿ ಬಲ ಸಮಯದಿ
ಕವಿದಿರಲು ಮಾಯಾದಿ ದುರ್ಮತಿ ಹೃದಯವಾವರಿಸಿ ||೪೮||

ಛಲ ಚತುರ ಯುಕ್ತಿಯಲಿ ಮಾಯಾ
ಬಲದಿ ರಾವಣ ಬಿಕ್ಕೆ ಬೇಡಿದ
ನಳಿನಮುಖಿಯೊಳು ಚತುರ ಮಾತಿನೊಳೊಲಿಸಿ ಹಲತೆರದಿ |
ತಿಳಿಯುತವನನ್ನತಿಥಿಯೆಂದೇ
ಫಲವ ನೀಡಿದೊಡವಳು ವಿನಯದಿ
ಖಳನು ಕೊಳ್ಳದೆ ಮತ್ತೆ ಮತ್ತೊರೆಯುವನು ನೀತಿಗಳ ||೪೯||

ಎಲೆಲೆ ಸುಂದರಿ ನಿಯತಭಿಕ್ಷವ
ಕೊಳೆನು ಹೋಗೆನೆ ಸೀತೆ ವಿಧಿಗತಿ
ಗಳಿಗೆ ಸಿಲ್ಕುತ ರಾಹುಕಾಲದಿ ಲಕ್ಷ್ಮಣನ ಗೆರೆಯ |
ಕಳೆದು ದಾಟುತ ಹೊರಗೆ ಬಂದಳು
ಕಳೆಯೆ ಧಾರುಣಿ ದುಷ್ಟ ರಾಕ್ಷಸ
ಕುಲವ ದಹಿಸುತ ವಿಶ್ವಪಾಲನ ಕಾರ್ಯಕನುವಾಗಿ ||೫೦||

ಆ ವಿಲಗನುಡಿಗೇಳಿ ವೋಸವ
ದೇವಿಯರಿಯದೆ ನಿಂದಿರಲು ಮಾ
ಯಾವಿಳನು ಬಹುರಾಜನೀತಿಯನೊರೆದ ಕಥೆಗಳನು |
ರಾವಣನು ಸುಖಲಾಲಸೆಯ ಪೇ
ಳ್ದಾ ವನಿತೆಯನ್ನೊಲಿಸೆ ಚಂಚಲ
ಭಾವನೆಯ ಭಯಪ್ರೇಮ ನುಡಿಯಿಂ ದುಷ್ಟಮಾರ್ಗದಲಿ ||೫೧||

ಇಳೆಯೊಳಿಂತೊರೆಯುವರೆ ಯತಿಗಳು
ಲಲನೆಯರ ಮೋಹದಲಿ ಮಾಯಾ
ವಿಳನೆ ನುಡಿಯದಿರೆನಲು ರಾವಣ ನೈಜ ರೂಪವನು ।
ಇಳೆಯಮಗಳಿಗೆ ತೋರಿ ರಾವಣ
ನಿಳೆ ಭಯಂಕರ ತಾನೆ ನಾನಿನ
ಗೊಲಿದು ಬಂದಿಹೆನೆಂದು ನಿಂದನು ನಗುತ ದಶಮುಖದಿ ॥೫೨॥

ಮೂಡಿದುದು ಭಯದುಃಖವೊಮ್ಮೆಗೆ
ಕಾಡಿ ಲಕ್ಷ್ಮಣನನ್ನು ಕಳುಹಿದೆ
ಕಾಡ ಮಿಗದಾಸೆಯಲಿ ಪತಿಯನ್ನಟ್ಟಿದೆನು ದೂರ ।
ಮಾಡಲಿನ್ನೇನೆನುತ ಧೈರ್ಯದಿ
ಮೂಢ ಬಲಿಯಾಗದಿರು ರಾಮನ
ಗಾಢ ಕೋಪಕೆ ಹೆಣ್ಣ ಕದಿಯುವ ಹರಿಬ ನಿನಗೇಕೆ ॥೫೩॥

ಮೊಲಕೆ ಸಿಂಹದ ಮೋಹ ಭಾಸ್ಕರ
ಕುಲದ ಕೇಸರಿ ಸತಿಯ ತೊಡಕಿದ
ಬಳಿಕ ನೀನುಳಿವಾಸೆ ಮುಗಿದುದು ತೊಲಗು ಶೀಘ್ರದಲಿ ।
ಜಲಧಿಯೆನಿಪುದೆ ನದಿಯು ವಾಯಸ
ಬಲದಿ ಗರುಡಂಗೆಣೆಯೆ ಗಾರ್ದಭ
ವೆಳಸೆ ಸುರಧೇನಹುದೆ ರಾಮಂಗೆಣೆಯೆ ನೀನೆನಲು ॥೫೪॥

ಕೇಳಿ ಲಜ್ಜಾಭರದೊಳಾ ಮಾ
ಲೋಲ ಸತಿಯಂ ನಮಿಸಿ ಮನದಲಿ
ತಾಳಿ ರೋಷವನೊಡನೆ ಸೀತೆಯ ಬಂಧಿಸುತ ಸೆಳೆದು ।
ಖೂಳ ಪುಷ್ಪ ವಿಮಾನದಲಿ ಹರಿ
ದಾಳಿ ಭಯದಿಂ ಹಾರಿನಡೆದನು
ನೀಲಲೋಚನೆಯಾಡಿತವನಾಲಿಸದೆ ವಿಹಲದಲಿ ॥೫೫॥

ಭೂವಧೂಸುತೆ ಭಯದಿ ಹಾ ರಘು.
ದೇವ ಹಾ ಜಗದೀಶ ನಾನಿ
ನ್ನಾವ ತಪ್ಪೆಣಿಸಿದೆನು ಹಾ ಹಾರಾಮ ಹಾರಾಮ |
ದೇವ ರವಿಕುಲ ಕಮಲ ಭಾಸ್ಕರ
ಪಾವನಾಶ್ರಿತ ಚರಣ ಸುಖಕರ
ರಾವಣಂಗೆರವಾದೆ ರಕ್ಷಿಸನಾಥೆಯನು ಬೇಗ ||೫೬||

ಹಾ ಸುಮಿತ್ರಾತನಯ ಲಕ್ಷ್ಮಣ
ದೋಷಮಿಲ್ಲದೆ ನಿನ್ನ ದೂಷಿಸಿ
ಘಾಸಿಯಾದೆನು ಗೆರೆಯಮೀರಿದೆ ನಿನ್ನನವಗಡಿಸಿ |
ಆಸೆವಡೆದಾ ಕೈಕೆ ಸುಖಿಸಲಿ
ಮೋಸದಲಿ ವಿಧಿ ದುಃಖವೊಡ್ಡಿದ
ವಿಾಸಲಾದೆನೆ ದನುಜಪಡೆಗೆಂದೊರಲಿದಳು ಸೀತೆ ||೫೭||

ಪಂಚವಟಿಯಲಿ ನಲಿವ ಪಕ್ಷಿಗ
ಳಿಂಚರವ ಮರೆತಿಹವು ಮಿಗಗಣ
ಮಿಂಚಿ ಹೋದವಗಡದಿ ಕಣ್ಣೀರ್ಗರೆದು ಮರುಗಿದುವು |
ಚಂಚಲಾಕ್ಷಿಯು ಹಲವು ಪರಿಯಿಂ
ಪಂಚಭೂತಕೆ ಮೊರೆಯನಿಟ್ಟಳು
ವಂಚಿಸಿದ ವಿಧಿ ಸೆಳೆದು ಸೋದರರಿರ್ವರಂ ದೂರ ||೫೮||

ಎನ್ನ ಬನ್ನಮನಾರು ತಿಳುಹುವ
ರಿನ್ನು ರಾಮಗೆ ಯಾಗ ಪಾಯಸ
ವನ್ನು ಗಾರ್ದಭ ತಿನ್ನಬಯಸುವ ತೆರದೊಳಾಯ್ತೆಂದು |
ತನ್ನೊಳಗೆ ಮರುಗುತಿರೆ ಜಾನಕಿ
ಯನ್ನು ನೋಡಿ ಚರಾಚರಂಗಳು
ನನ್ನಿಯಿಂ ಕಣ್ಣೀರಗರೆದುವು ಬರುವ ದುಃಖದಲಿ ||೫೯||

ಮುಂದೆ ಗತಿಯೇನೆಂದು ಧರಣಿಜೆ
ಯೆಂದೊರಲೆ ದಶಕಂಠ ಲೆಕ್ಕಿಸ
ದಿಂದುವದನೆಯು ಸಹಿತ ಹರಿದೈದಿದನು ಗಗನದಲಿ ।
ಇಂದುಮೌಳಿ ವಿರಿಂಚಿ ವರದಲಿ
ಬಂದ ಬಲದಿಂ ಮೆರೆದು ಮೃತ್ಯುವ
ಕೊಂದು ಬದುಕುವೆನೆಂದು ಬಗೆದನು ರಾವಣನು ಮನದಿ ॥೬೦॥

ಅಳುವ ದನಿಯ ಜಟಾಯುವಾಲಿಸು
ತಿಳಿದು ಮರದಿಂ ಕಂಡು ರಾಮನ
ಲಲನೆಯೊರಲುವ ಸರವುನರಿಯುತ ನೋಡಿದನು ಮೇಲೆ ।
ಕೊಲೆಗಡಿಗ ರಾವಣನ ಸೆರೆಯುಲಿ
ಬಳಲುವಳು ಪಶುವಂತೆ ಶಿವಶಿವ
ಖಳನ ಕೊಲ್ಲದೆ ಬಿಡೆನೆನುತ ಹಾರಿದನು ನಭಕಾಗ ॥೬೧॥

ಮೊದಲ ಬಲವೆನಗಿಲ್ಲ ವಯದಲಿ
ಮುದುಪನಾಂ ರಕ್ಕಸನ ಬಲ
ಮದವ ನೋಡುವೆನಾದೊಡಂ ಯುದ್ಧದಲಿ ತಡೆಯುವೆನು ।
ಸುದತಿ ಸೀತೆ ಜಟಾಯು ನಾನಿರ
ಲೊದರುವರೆ ಖಳನಿವನ ಮುರಿಯುವೆ
ನದರ ಬಗೆಗಳನೋಡು ಬಿಡಿಸುವೆ ಮಗಳೆ ಸೆರೆಯೆಂದ ॥೬೨॥

ಬರುವ ವೇಗದಿ ವಜ್ರ ಶಿಖರವ
ನುರುಳಿಸುವವೊಲು ಗೃಧ್ರರಾಜನು
ದುರುಳನಂ ಬೆಂಬತ್ತಿ ರಾವಣ ನೀಚರಧಿನಾಥ ।
ತರುಣಿಚೋರ ವಿರಾಧ ವೈರಿಯು
ನರಿಯೆ ನೋಡೆನ್ನತುಲ ಬಲವೆಂ
ದೊರೆದ ಪಕ್ಷಿಯು ಬರವ ರಾವಣ ಕಂಡ ದೂರದಲಿ ॥೬೩॥

ಬರುವನಿವನಂತಕನೊ ಹಾರುವ
ಗಿರಿಯೊ ಮೈನಾಕಮಿದೊ ಖಗಪತಿ
ಗರುಡನೋ ಮೇಣಾರೆನುತಲನುಮಾನದಲಿ ನೋಡಿ ।
ಗರುಡ ಹರಿ ಶಿವರರಿವರೆನ್ನಯ
ಕರ ಬಲವನಿವನಾರೆನುತ ಖಳ
ನರಿದ ಬಂದ ಜಟಾಯು ಮುದಿ ಖಗಮಕಟ ಬಲಿಯಾಯ್ತು ॥೬೪॥

ಎಲೆಲೆ ಪಕ್ಕಿಯೆ ಸಮರವೇ ನಿನ
ಗಳವಿಯೆನ್ನೊಳು ಸಾಯದಿರು ಹೋ
ಗೆಲವೊ ತೋಟಿಯೆ ಸಾಕು ರಾವಣನಾರು ನೀನರಿಯೆ ।
ಬಲಿಗೊಡುವೆ ಕೆಣಕಿದರೆ ನಿಜಕರ
ಜಲದಿ ತೀರ್ಥಾಂಜಲಿಯ ನೀಡುವೆ
ಸುಲಭದಿಂ ಯಮನಿಲಯ ಸಾರದಿರೆಂದ ದಶಕಂಠ ॥೬೫॥

ಬರಿಯ ಮಾತಿನ ಭಂಡ ವೀರರು
ತರುಣಿಯರನಪಹರಿಸುವರೆ ಬಿಡು
ಸೆರೆಯ ವಂಶವನೊರೆಸದಿರು ಬಿಡು ಧಾರುಣೀಸುತೆಯ ।
ಹರಿಯ-ಲಕ್ಷ್ಮಣರನ್ನು ವಂಚಿಸಿ
ಧರೆಯಮೇಲಿನ್ನಿರಲುಬಹುದೇ
ಮರುಳೆ ರಾಕ್ಷಸ ಕುಲಕುಠಾರನೆ ಮೃತ್ಯುವಾಯ್ತೆಂದ ॥೬೬॥

ಹತ್ತಿ ಪುಷ್ಪಕ ಕೋಪಶಿಖಿಯಲಿ
ಕಿತ್ತು ಮಕುಟಗಳೆಳೆದು ರಥದಿಂ
ದೊತ್ತರಿಸೆ ರಾವಣನು ಧೊಪ್ಪನೆ ಕೆಡೆದನವನಿಯಲಿ ।
ಮತ್ತೆ ಸೀತೆಯನಿಳಿಸಿ ದೂರದೊ
ಳತ್ತ ಕೂರಿಸೆ ದನುಜಗಿದಿರಾ
ಗುತ್ತ ಘರ್ಜಿಸಿ ನಿಂದ ಗೃಧ್ರಾಧಿಪತಿ ಖಾತಿಯಲಿ ॥೬೭॥

ಎದ್ದು ರಾವಣ ಚಾಪಹೊದೆಗಳ
ಸಿದ್ಧ ಮಾಡಲು ಪಕ್ಷಿರಾಜನು
ಬಿದ್ದು ದುರುಳನ ಮೇಲೆ ಮುರಿದನು ಬಿಲ್ಲು ಬಾಣಗಳ ।
ಹೆದ್ದು ಗೂಗೆಗೆ ಬಿದ್ದಿನನು ಬದು
ಕಿದ್ದರಲ್ಲವೆ ಸೀತೆಯಾಸೆಯು
ಬದ್ದವಣ ಹೊಡೆಸುತಿಹ ಕಾಲನು ನಿನ್ನ ಪಯಣದಲಿ ॥೬೮॥

ಕೊಕ್ಕಿನಲಿ ಕಚ್ಚಿದನು ರೋಷದಿ
ರೆಕ್ಕೆಯಿಂ ಬಡಿದುರುಳಿಸಲು ಖಳ
ಕಕ್ಕಿ ನೆತ್ತರ ಸಂದ ಮೂರ್ಛೆಗೆ ಮತ್ತೆ ತಿಳಿದೆದ್ದು ।
ರೆಕ್ಕೆಗಳ ಬಲವರಿತು ತಳುವದೆ
ರಕ್ಕಸನು ಕತ್ತರಿಸೆ ಪಕ್ಷವ
ನೆಕ್ಕಿ ಮಣ್ಣನು ಧರೆಯೊಳುರುಳಿದ ರಾಮನಂ ನೆನೆದು ॥೬೯॥

ರಾಮಸೇವೆಯ ನೆಪದಿ ರಾವಣ
ಭೀಮ ವಿಕ್ರಮಕಾನು ಸಂದೆನು
ಕಾಮಿನಿಯ ಬಿಡದಾದನೇ ಹಾಯೆಂದು ಮರುಗುತಲಿ ।
ಭೂಮಿಗೊರಗಲ್ಕತ್ತ ದಶಶಿರ
ಭೂಮಿಜೆಯ ರಥಕೇರಿಸುತ ಸಿರಿ
ರಾಮಭಯದಿಂ ನಡೆದ ವೇಗದಿ ಗಗನಮಾರ್ಗದಲಿ ॥೭೦॥

ಬಲೆಗೆ ಸಿಕ್ಕಿದ ಹರಿಣಿಯೊಲು ಬಾಂ
ದಳದಿ ವಿಲಪಿಸಿ ಹಲವು ಬಗೆಯಲಿ
ಕೆಳಗೆ ಶಿಖರದಿ ಕಪಿನಿಕರವಿರೆ ಕಾಣುತೊಡವೆಗಳ ।
ತಿಳಿಯದಂತಿರೆ ಸೆರಗ ಹರಿಯುತ
ಲಲನೆ ಕಟ್ಟುತಲೆಸೆದಳಾ ಕಪಿ
ಬಲದ ಮಧ್ಯದೊಳಿತ್ತ ರಾವಣ ಹಾಯ್ದು ಪಯಣದಲಿ ॥೭೧॥

ದನುಜ ಲಂಕೆಯು ಸೇರಿ ನಿಲಿಸಿದ
ವನಜಮುಖಿಯನಶೋಕ ಬನದಲಿ
ಮಣಿವ ತೆರದಲಿ ಮಾಡೆ ರಾಕ್ಷಸವನಿತೆಯರ ನಿಲಿಸಿ |
ಮನದಿ ಜಿಂಕೆಯ ಹಿಂದೆ ನಡೆದಾ
ಘನಮಹಿಮ ಶ್ರೀರಾಮಚಂದ್ರನ
ನೆನೆಯುತಿರ್ದಳು ಸೀತೆ ಮತ್ತೊಂದರಿಯದಿರುತಿಹಳು ||೭೨||

## ವಿಶ್ರಾಮ ೫

ಸೂ|| ಅರಸಿ ಸೀತೆಯ ವನದಿ ಕಾಣದೆ
ಚರಿಸಿ ಕಂಡು ಜಟಾಯು ಮರಣದಿ
ಕೊರಗಿ ಶಬರಿಯ ಸೇವೆಕೊಂಡನು ಕರುಣದಲಿ ರಾಮ ||

ದುರುಳ ಮಾರೀಚಾವಸಾನದಿ
ಧರಣಿಜೆಯ ಲಕ್ಷ್ಮಣರನಾರ್ತ
ಸ್ವರದಿ ಕೂಗಿದನರರೆ ಮುಂದೇನಹುದೊ ಎನುತಿರಲು |
ಅರಸಿ ಬಂದನು ಹರಿಯ ಲಕ್ಷ್ಮಣ
ಬಿರಿದುದೆದೆ ಸೋದರನ ಕಾಣುತ
ಬರಬಹುದೆ ನುಡಿಮಾರಿ ಸೀತೆಯನುಳಿದು ಕಾನನದಿ ||೧||

ಭಯದೊಳಮ್ಮದೆ ಕಣ್ಮರೆಸಿ ಸೀ
ತೆಯನು ಕದ್ದೊಯ್ಯೆ ಕಾಯ್ವರು,
ನಯವ ನೀನೆನೆದಿಲ್ಲ ಲಕ್ಷ್ಮಣ, ಲಲನೆಯಿನ್ನಿಹಳೆ |
ಭಯಮೆ ನನಗಿನ್ನಡವಿಯಲಿ ನಿ
ರ್ಣಯವು ರಾಮನ ಬಾಣವೊಂದರಿ
ಯೆಯ ಸಹೋದರ ಮರೆತೆ ಬಂದಾಪತ್ಸಮಯದಲಿ ||೨||

ಅಣ್ಣನಡಿಗಳಿಗೆರಗಿ ಜಾನಕಿ
ತನ್ನ ಬಿರುನುಡಿಯಿಂದಲಟ್ಟಿದ
ಬನ್ನಮಂ ವಿವರಿಸಲು ಬಂದರು ಪುಡುಕುತಾಶ್ರಮಕೆ ।
ತನ್ನ ಸತಿಯಲ್ಲಿಲ್ಲ ಎಲೆವನೆ
ಯನ್ನು ಹೊಕ್ಕರೆ ಸುಳಿವ ಕಾಣರು
ತನ್ನ ಮರೆಸಿನ್ನಲ್ಲಿ ಹೋಗುವಳಾ ತಳೋದರಿಯು ॥೩॥

ವನವೆ ಕಮಲಾಕರವು ರಘುಪತಿ
ಜನಕಜೆಯರೇ ವರಚಕೋರಕ
ಘನತರದಿ ನಲಿದಾಡಿ ಹರ್ಷಿಸುತಿರ್ದ ಬನಮದುವು ।
ದನುಜ ರಾವಣನೆಂಬ ರಾತ್ರಿಯ
ಮನದ ದುಃಖದಿ ನೊಂದು ಕಳೆದರು
ನೆನೆದು ಸೀತಾಗುಣವನವಳನ್ನರಸುವಗೆಗಳನು ॥೪॥

ಹಾ ಧರಾತ್ಮಜೆ ಸೀತೆ ಸುಗುಣಿ ವಿ
ನೋದ ವಿನಯ ಸುಶೀಲೆ ಮಂಗಳೆ
ಬಾಧೆಯಾದುದೆ ಮೃಗದ ಸುಳಿವಿಂದೊಡ್ಡಿದುದೆ ಬಲೆಯು ।
ಕಾದಿ ಗೆಲಲರಿಯದಿರೆ ವಂಚಿಸು
ತೀ ದುರಾಗ್ರಹದಿಂದ ದುಷ್ಟರು
ಸಾಧಿಸಿದರೇ ಹಗೆಯನೆಂದಾ ಹರಿಯು ವಿಲಪಿಸಿದ ॥೫॥

ಎಲೆಲೆ ಖಗಮಿಗವೆಲೆಲೆ ಮಧುಕರಿ
ಲಲನೆ ಮೃಗಲೋಚನೆಯ ಕಂಡಿರೆ
ಎಲೆಲೆ ಖಂಜನ ಶುಕಕಪೋತವೆ ಹರಿಣ ಮತ್ಸ್ಯಗಳೇ ।
ಖಳನ ಭಯದಿಂ ನಿಜಮನೊರೆಯದ
ಕುಲವ ಸುಡುವೆನು ಪಿಕ ಮರಾಳವೆ
ಲಲನೆಯಿರವಂ ನೀವರಿಯಿರೇ ನಿಮ್ಮಗೆಳತಿಯನು ॥೬॥

ಶರದ ಸರಸಿಜ ನಾಗ ಭಾಮಿನಿ
ಯರೆ ಸುಲೋಚನೆಯಲ್ಲಿ ಎಲಿಶಶಿ
ವರುಣಪಾಶ ಮನೋಜಕಾರ್ಮುಕ ಹಂಸಗಜಸಿಂಹ ।
ಅರರೆ ಜಾನಕಿಯೆಲ್ಲಿ ಪೇಳಿರಿ
ತರಳೆಯಿಲ್ಲದ ದಿವಸಗಳೆಯು
ಲ್ಕರಿವುದೆಂತೋ ಸೀತೆ ಬಾ ಬಾರೆಂದು ಮರುಗಿದನು ॥೭॥

ಹೊಳೆಯಲೀ ವನವಸ್ತು ರಾಜ್ಯವ
ಗೆಲುವವೊಲು ಸಂತಸದಿ ನಾನಿದ
ಗೆಲುವುದೆಂತೋ ರಮಣಿಯಡಗಿಹೆಯೆಲ್ಲಿ ಬಿನದದಲಿ ।
ಸುಲಿದ ಮಣಿಯಿಂ ನೊಂದ ಫಣಿವೊಲು
ಜಲವ ಕಾಣದ ಮೀನಿದಂದದೊ
ಳಳುವ ರಾಮನ ಕಂಡು ಲಕ್ಷ್ಮಣ ಮರೆತ ದೇಹವನು ॥೮॥

ವಿನಯದಿಂದಡಿಗೆರಗಿ ಧೈರ್ಯದಿ
ಘನಮಹಿಮ ನೀನಿಂತಳುವರೇ
ಜನಕಜೆಯನರಸುವೆವು ನಾವೆನೆ ದುಃಖ ಪೆರ್ಚಿದುದು ।
ಅನುಜನೊಡಗೊಂಡಡವಿಯರಸುತ
ಲನಘ ಲೋಕದ ವಿರಹಿಯೊಲು ಭೂ
ತನುಜೆಯಂ ನೆನೆನೆನೆದು ಹಂಬಲಿಸುತ್ತ ಮುಂದರಿದ ॥೯॥

ಪರಮ ಸುಖಮಯ ಪೂರ್ಣಕಾಮನು
ನರಚರಿತೆಗಳ ಗೈವನಭವನು
ಪರಮಪುರುಷನು ನಿಶ್ಚಲನು ರಘುರಾಮನವಿನಾಶಿ ।
ಅರಸಿ ಕೊಳಗಳ ಶಿಖರ ಗಿರಿ ಗುಹೆ
ತರು ಸಮುಚ್ಚಯ ಹೊದರುಗಳ ಸಂ
ಚರಿಸುತಿರ್ವರು ಮೂಲೆಮೂಲೆಯನರಸಿ ಬರುತಿರಲು ॥೧೦॥

ಮುರಿದ ಕಾರ್ಮುಕ ಹೊದೆಯ ಕಂಡರು
ಹರಿಯುತಿರೆ ಕೆನ್ನೀರುವುಕ್ಕುತ
ವರುಷಕಾಲದ ನದಿಯೊಲಾ ಕಾರ್ಗಾಡ ಮಧ್ಯದಲಿ ।
ಧುರವು ಸಂಘಟವಾಯ್ತೊ ನೀಚರು
ಧರಣಿಜೆಯ ಸಂಹರಿಸಿ ತಿಂದರೊ
ತರಳ ಕೋದಂಡವನು ತೊಡುವೆನು ಸುಡುವೆ ಲೋಕವನು ॥೧೧॥

ರಾಮರಾಮೆಂದೊರೆದು ನರಳ
ಲ್ಕಾ ಮಹಾ ಗೃಧಪನ ಕಂಡರು
ರಾಮ ನೊಂದ ಜಟಾಯುವೆಂಬುದನರಿತು ವೈದೆಡವಿ ।
ಕಾಮರೂಪರು ಕೊಂದರೇ ಯಮ
ಧಾಮಕಡರಿದನೇ ವಿಹಂಗಮ
ರಾಮನೆಂಥಾ ಪಾಪಿಯೆಂದಳಲಿದನು ಮನಕರಗಿ ॥೧೨॥

ಅನಿತರಲಿ ಖಗನರಿದು ರಾಮನ
ವನಜ ಮುಖಮಂ ನೋಡೆ ತೋರಿದ
ಚಿನುಮಯನು ಚಿದ್ರೂಪ ಗೃಧಪಗೊಲಿಯುತಾಕ್ಷಣದಿ ।
ಘನಮಹಿಮ ಪೊಂದಿದೆನು ಪುಣ್ಯವ
ನನಘನಿನ್ನರಘಳಿಗೆಯಲಿ ಪದ
ವನಜ ಸೇರುವೆನಾದೊಡಾ ಜಾನಕಿಯ ಪರಿಕೇಳು ॥೧೩॥

ಖಳನು ರಾವಣನೆಂಬ ರಕ್ಕಸ
ತಳೆದು ಯತಿವೇಷವನು ವಂಚಿಸಿ
ಸೆಳೆದು ಕೊಂಡೋಡುತಿರೆ ಸೀತೆಯು, ತಡೆದೆ ಮಾರ್ಗವನು ।
ಹಲವು ಪರಿಯಲಿ ಕಾದಿ ಪರಿಭವ
ಗೊಳಿಸಿ ತಡೆದನು ಮುರಿಯೆ ರೆಕ್ಕೆಗ
ಳಿಳೆಗೆ ಬಿದ್ದೆನು ದುರುಳ ಹಾಯ್ದನು ಮುಂದೆ ವಧುಸಹಿತ ॥೧೪॥

ಕದ್ದು ಸೀತೆಯ ತೆಂಕದೆಸೆಯನು
ಹೊದ್ದಿದನು ಹರಿ ನಿನ್ನ ಸೇವಕ
ನಿದ್ದು ಬಿಡಿಸದೆ ಹೋದೆ ಕೈವಿರಾರಿತ್ತು ಬಲವೆನಗೆ ।
ಸಿದ್ಧ ಪುರುಷರು ಕಾಣದಾ ನಿರ
ವದ್ಯ ರೂಪವ ಕಂಡೆ ಜನ್ಮವ
ಪೊರ್ದಿರಲು ಹಿತಮಾಯ್ತು ಹೋಗುವೆನೆಂದು ಖಗನುಡಿದ ॥೧೫॥

ಅಧಮನಾದರು ಮುಕ್ತಿಯಪ್ಪುದು
ಪದುಮನಾಭನು ಕಣ್ಣಮುಂದಿರೆ
ಬದುಕು ಪಾವನವಾಯ್ತು ಪೂರ್ವದ ನೈಜ ಕುಲಕೋಟಿ ।
ಮುದದಿ ಸದ್ಗತಿ ಕಂಡುದ್ಬೈ ಹರಿ
ಹೃದಯ ನಿರ್ಮಲವಾಯ್ತು ಹೋಗುವೆ
ನುದಧಿ ಶಯನ ವಿರಾಗದಿಂದಾಣತಿಯ ನೀಡೆಂದ ॥೧೬॥

ಆಯಿತ್ತೆ ಶುಭಗತಿಯು ಖಗ ಗರು
ವಾಯಿಗೆಡಿಸಿದನಾರು ರಾಮನ
ದಾಯವರಿಯದೆ ಕೆಟ್ಟನೇ ನಿನಗೀ ವಿಧಿಯುನಿತ್ತು ।
ಆಯಿತ್ತೆ ಸನ್ಮುಕ್ತಿ ನಿನ್ನತು
ಳಾಯತಿಕೆಯೇನೆಂಬೆ ಖಗಕುಲ
ರಾಯ ನಿನಗೇನೀಯಲಾಶಾ ಪೂರ್ಣನಾಗಿರಲು ॥೧೭॥

ಅನಿತರಲಿ ರಾಘವನನೀಕ್ಷಿಸು
ತನಘ ದೇಹವ ತೊರೆಯೆ ದುಃಖದೊ
ಳಿನಕುಲೋದ್ಭವ ದೇಹ ಸಂಸ್ಕಾರಗಳ ನಡೆಸಿದನು ।
ವನದಿ ಖಗಕುಲದಲ್ಲಿ ಪುಟ್ಟಿದ
ವಿನಯವರಿಯದ ಹಕ್ಕಿಯೊಂದಕೆ
ಘನಪದವಿ ದೊರಕಿಸಿದ ರಾಮನ ಕರುಣೆಯಿನ್ನೆನಿತೊ ॥೧೮॥

ಹರಿಯು ನೆನವಂ ಮರೆಯುತಾವನು
ದುರಿತಲಂಪಟನಾದ ಮಾನವ
ದುರುಳ ಭಾಗ್ಯವಿಹೀನನಂತ್ಯಜ ಪಾಪಿ ಕಡುಮೂರ್ಖ ।
ಅರಸಿ ಸೀತೆಯ ನಡೆದು ಪಯಣದಿ
ತರಳ ಲಕ್ಷ್ಮಣನೊಡನೆ ಪಕ್ಷಿಯ
ಪರಮಹಿತವಮಂ ಹೊಗಳಿ ಮೆಚ್ಚಿದನವನ ಸದ್ಗುಣವ ॥೧೯॥

ಕಟ್ಟಡವಿಯಲಿ ಹೊದರು ತರುಲತೆ
ದಟ್ಟವಾಗಿರಲೇರುತಿಳಿಯುತ
ಬಟ್ಟೆಯೊಳು ಗಜಸಿಂಹ ಸರ್ಪ ಕ್ರೂರ ಮೃಗಗಳಿರೆ ।
ನೆಟ್ಟನಾ ವನ ಹೊಕ್ಕು ನಡೆದಿರೆ
ದುಷ್ಟನಾವನೊ ಸೆಳೆದವೊಲು ಕಂ
ಗೆಟ್ಟು ಭೂಮಿಯೆ ತಿರುಗಿದಂತಾಯ್ತಾಗಲುಭಯರಿಗೆ ॥೨೦॥

ಇರಲು ನಿಮಿಷದೊಳಸುರನೊಬ್ಬನ
ಕರದಿ ಕಂಡರು ತಮ್ಮ ತಿನ್ನಲು
ತೆರೆದ ಬಾಯನು ನೋಡಿ ಶೀಘ್ರದೊಳವನಸುವ ಹೀರೆ ।
ಮರಣವಾಗಲು ದುರುಳ ಜನ್ಮವು
ಹರಿದು ವರ ಗಂಧರ್ವರೂಪದಿ
ಹರಿಯ ಮುಂದೊಗೆಯುತ್ತಲೊರೆದನು ಪೂರ್ವಸಂಗತಿಯ ॥೨೧॥

ಹಿಂದೆ ದೂರ್ವಾಸಮುನಿ ಶಪಿಸಿದ
ನಿಂದು ನಿನ್ನನು ಕಂಡು ಪಾಪವು
ಬೆಂದು ಮುಕ್ತಿಯ ಕಂಡೆನೆನ್ನಲು ಕೇಳು ಗಂಧರ್ವ ।
ಒಂದು ನಿಮಿಸವು ಸಹಿಸೆ ವಿಪ್ರರ
ನಿಂದೆ ವಿಪ್ರದ್ರೋಹಿಗೆಂತಾಂ
ಬಂದು ನೆರೆಯಲಿ ಮುಕ್ತಿಯಾಗದುಯೆಂದನಾ ರಾಮ ॥೨೨॥

ಕರಣವೂರರೊಳವರ ಸೇವೆಯ
ನರಿದು ಮಾಡುವ ನರಗೆ ವಿಧಿ ಶಿವ
ಹರಿಯು ಮೂವರು ವಶರು ಸುರರಾಣತಿಯ ಕಾಯುವರು ।
ಧರುಮವಿಂತಿಹುದೆಂದು ಬೋಧಿಸೆ
ಹರುಷದಿಂ ಗಂಧರ್ವನೆರಗುತ
ತೆರಳಿದನು ನಿಜವಾಸಕತ್ತಲು ಗಗನಮಾರ್ಗದಲಿ ॥೨೩॥

ಮುಂದೆ ಪಯಣದಿ ಶಬರಿಕಾಶ್ರಮ
ದಂದವನು ನೋಡುತ್ತ ಬಹುದಿನ
ದಿಂದ ಕಾಯುವ ಭಕ್ತಳನ್ನರಸುತ್ತಲಾತುರದಿ ।
ಎಂದಿಗಹುದೋ ಶಬರಿದರ್ಶನ
ವೆಂದು ಪಯಣವೊಳೋಡುತೋಡುತ
ಬಂದು ಭಾವಿಸಿ ವನದ ಸರವೋ ಶಬರಿ ಕರೆಯೆಂದು ॥೨೪॥

ಗುರುವೊರೆದ ರಘುರಾಮ ಬರುವನು
ದರುಶನವ ನೀಡುವನು ನಿನಗೆಂ
ದುರುತರದೊಳುಪದೇಶ ಮಾಡಿದ ಹಲವು ಕಾಲಕ್ಕೆ ।
ಧರಿಸುತೀ ದೇಹವನು ನೋಡಿದೆ
ಜರೆಯು ಹಿರಿದಾಯ್ತೆನಗೆ ಬಾರನೆ
ಕರುಣವಾರಿಧಿಯೆಲ್ಲಿಹನೊ ಮರೆದಿಹನೊ ಶಬರಿಯನು ॥೨೫॥

ಅದುವೆ ಕಾಲಿನ ಸಬುದ ಗಗನದೊ
ಳದಕೊ ರಾಮನ ಬಿಂಬ ಕೋದಂ
ಡದಲಿ ಝೇಂಕೃತಿಯಾಗುತಿದೆಕೋ ರಾಮ ಬರುತಿಹನು ।
ಮುದುಕಿಯೊರ್ವಳ ಮನೆಗೆ ನಡೆಯುತ
ಪದುಮ ಚರಣವ ದಣಿಸಿ ಬರುವನು
ಸದಯನೆಂದಾತುರದಿ ನಾಲ್ದೆಸೆ ನೋಡಿ ಹಿಗುವಳು ॥೨೬॥

ಹರಿಯು ಬರುವವಧಿಯುಲಿಯೊಂದಿನ
ಮರಳಿತಿನ್ನೇಂ ನಾಳೆ ನಾಡಿದು
ಹರಿದು ಬಹನೆಂದಿಂತು ಕಳೆದಳು ಹಲವು ವರ್ಷಗಳ |
ಗುರು ಮತಂಗನ ನುಡಿಗೆ ಸಟೆಯೇ
ತ್ವರದಿ ಬಂದನು ರಾಮು ಶಬರಿಯು
ನರಸಿ ನಿಂದನು ಮುಂದೆ ಕೋದಂಡವನು ಕರವಿಡಿದು ||೨೭||

ವನಜಲೋಚನ ಬಾಹುವಿಸ್ತರ
ತನುವು ಗೌರಶ್ಯಾಮ ಶಿರದೊಳು
ಹೆಣೆದ ಜಟೆಯು ಕಿರೀಟ ತುಲಸೀಹಾರ ಶೃಂಗಾರ |
ವಿನುತ ರೂಪವ ಕಂಡು ಚರಣದಿ
ತನುವನೀಡಾಡಿದಳು ಕುಣಿಯುತ
ಲನಘನಂ ಬಲವಂದು ಹಾರಿದಳಬಲೆ ಪುಳಕದಲಿ ||೨೮||

ಅರಿಯುದೇನಂ ಬಾರಿಬಾರಿಗು
ಚರಣಕೆರಗುತ ವಿಮಲಜಲದಲಿ
ಸರಿಸಿಜಾಂಘ್ರಿಯು ತೊಳೆಯುತಾಸನವಿತ್ತು ಕುಳ್ಳಿರಿಸಿ |
ಇರಲಿ ರಾಮಂಗೆನ್ನುತಿರಿಸಿದ
ತರತರದ ಸವಿವಣ್ಗಳನು ರಘು
ವರಗೆ ಕಾಣಿಕೆಯಿತ್ತೊಡಾ ಫಲಗಳನು ತಾ ಕೊಂಡು ||೨೯||

ಅಹಹ ಸವಿಯೆಂತಿಹುದು ಶಬರಿಯು
ಬಹುಮುಮತೆ ಹುದುಗಿಹುದು ಧರಣಿಯ
ಲಿಹುದೆ ಸವಿರುಚಿಯಿಂತು ಫಲಗಳಿಗೆಂದು ತಿನ್ನುತಿರೆ |
ಸಹನೆವೊಡೆದುದು ಭಕ್ತಿಯುಕ್ಕಿತು
ಮಹಿಯೊಳಾನುಂ ನೀಚಕುಲಜಳು
ವಿಹಿತ ಸೇವೆಯ ಮಾಡಲರಿಯೆನು-ಹೊಗಳಲರಿವಿಲ್ಲ ||೩೦||

ಅಧಮ ಸಂಗದೊಳಧಮ ವಧುನಾ
ನಧಮಳಧಮಳು ಮಂದಮತಿಯೆನ
ಗೊದವಿದೀ ಸೌಭಾಗ್ಯವೆಂದಾ ಶಬರಿನುಡಿಗೇಳಿ ।
ಒದಗಿದೆನು ನಿಜಭಕ್ತಿಗಾನೊದ
ಗಿದೆನು ತಪ ಬಲ್ಮೆಯಲಿ ಕುಲಗಿಲ
ಮದರ ಹೆಚ್ಚಿಗೆಯೇನು ಕುಂದೇ ನಿನಗೆ ವಂಶದಲಿ ॥೩೧॥

ವರಮತಂಗರು ಗುರುವು ತಪದಲಿ
ಜರೆಯಕಂಡಿಹೆ ಭಕ್ತಿಸೂತ್ರವ
ನರಿವೆ ದೇವರನೊಲಿಸಿಕೊಳ್ಳುವ ಬಗೆಯನರಿತಿರುವೆ ।
ಕರುಮ ಧರ್ಮದ ಮರ್ಮ ಕರಗತ
ವಿರಲು ನಿನಗಾರೊಳರು ಕುಲಛಲ
ದಿರಕೆ ಸಿಗುವೆನೆಯೆಂದ ಶಬರಿಗೆ ರಾಮನೊಲವಿಂದ ॥೩೨॥

ಯೋಗಿ ದುರ್ಲಭವಾದ ಪದವಿಯ
ನೀಗ ಪಡೆದಿಹೆ ತಪದೊಳನುಪಮ
ಳಾಗಿ ದರ್ಶನವಡೆದೆ ಸತ್ಫಲ ದೊರೆಕುದೌ ತಾಯೆ ।
ಯೋಗಿನಿಯು ನೀ ಭಾಗ್ಯಶಾಲಿನಿ
ಬೇಗ ಪರರೂಪದಲಿ ಮಾಯುವ
ಳೀಗು ಮೆರೆದು ಚಿದಾತ್ಮ ರೂಪದೊಳೆಂದನಾ ರಾಮ ॥೩೩॥

ಎನ್ನ ಚರಣವ ನಂಬಿರುವ ವಧು
ನಿನ್ನ ನೆನೆಯುತ ನಿನ್ನ ಮಹಿಮೆಗ
ಳನ್ನು ತಿಳಿಯುವ ನರನು ಲೋಕದಿ ಭಾಗ್ಯಶಾಲಿಯಲಾ ।
ಎನ್ನುತವಳಂ ಸ್ತುತಿಸಿ ಜಾನಕಿ
ಯನ್ನು ತಿಳಿವೆಯ ಸುಳಿವನರಿವೆಯ
ನೆನ್ನಲಾ ವರಶಬರಿ ಪಂಪಾಸರದಯಿರವೊರೆದು ॥೩೪॥

ತೆರಳು ಪಂಪಾಸರಕೆ ಮುನಿಜನ
ವರರ ದರುಶನವಹುದು ಋಷಿ
ವರ ಮತಂಗನ ಮಹಿಮೆ ಹಿರಿದೈ ತಂದೆಯಾವನದಿ ।
ಸರುವ ಸಚರಾಚರವು ವೈರವ
ತೊರೆದು ಹಗೆಗಳ ಮಮತೆಯಿಂದಲಿ
ಕರೆದು ನೇಹವ ಬೆಳೆಸಿ ನೆಲೆಸಿಹವಲ್ಲಿ ಮೈತ್ರಿಯಲಿ ॥೩೫॥

ಅಲ್ಲಿ ಶಿಖರದಿ ವನಸುಮಂಗಳು
ಸಲ್ಲಲಿತವಾಗಿಹವು ಖಗಮೃಗ
ಮೆಲ್ಲ ನಿನಗನುಕೂಲಮಪ್ಪವು ತೆರಳಿ ಮುನಿಗಳಿಗೆ ।
ಅಲ್ಲಿ ದರುಶನವಿತ್ತು ಕಪಿಕುಲ
ದಲ್ಲಿ ಸುಗ್ರೀವಾದಿ ನಾಮಕ
ರೆಲ್ಲರಾತುರದಿಂದ ಕಾದಿಹರಲ್ಲಿಗೈತಹುದು ॥೩೬॥

ತೆರಳು ವರಸುಗ್ರೀವನಲ್ಲಿಗೆ
ಧರಣಿಜೆಯನರಸಿಸುವ ವಾನರ
ರರಸ ಬಲಯುತ ಋಷ್ಯಮೂಕದೊಳಿರುವನನವರತ ।
ಅರಿವೆ ಭಕ್ತರ ದೈವ ರಘುವರ
ನರಿದೆ ನಿನ್ನಯ ಘನಮಹಿಮೆಗಳ
ಗುರು ಮತಂಗರ ಮುಖದೊಳೆಂದಳು ಶಬರಿ ಕೈಮುಗಿದು ॥೩೭॥

ನಿಲಿಸಿ ಹೃದಯದಿ ರಾಮರೂಪವ
ಲಲನೆ ಯೋಗಾಗ್ನಿಯಲಿ ದೇಹವ
ನಳಿಸಿ ವೈಕುಂಠವನು ಸೇರ್ದಳು ಶಬರಿ ಭಕ್ತಿಯಲಿ ।
ಹಲವು ಪರಿಯಿಂ ಪರರ ಕೇಡಿಂ
ಗೊಲಿವ ಮನಮಂ ಮಥಿಸಿ ಬಂಧಿಸಿ
ನಿಲಿಸೆ ರಾಮನ ಪಾದಮೂಲದಿ ಮುಕುತಿ ಕೈಗೊಳದೆ ॥೩೮॥

ದುಷ್ಟಜಾತಿಯ ಪಾಪ ಜನುಮದಿ
ಪುಟ್ಟಿದಾ ಬೇಡಿತಿಗೆ ಮೋಕ್ಷವ
ಕೊಟ್ಟ ಪಾವನಮೂರ್ತಿಯೊಲಿಯುತಲವಳ ನಮ್ರತೆಗೆ ।
ಕೆಟ್ಟ ಮನವೇ ಮರವೆಯೇಕೀ
ಶಿಷ್ಟ ದೈವವ ಸುಖವಪೇಕ್ಷಿಸಿ
ಸುಟ್ಟು ಹೋಗುವೆ ತಿಳಿಯೆ ನೀನಾರೆಂದು ನೋಡದಿಹೆ ॥೩೯॥

ಆ ವನವ ಬೀಳ್ಕೊಂಡು ಮುಂದಕೆ
ಧಾವಿಸುತ ಪಯಣದಲಿ ಶಬರಿಯ
ಪಾವನಾತ್ಮವ ನೆನೆದು ಜಾನಕಿ ಬಗೆಯ ಚಿಂತಿಸುತ ।
ದೇವ ದುಃಖವ ನಟಿಸಿ ತಮ್ಮನ
ಸೇವೆಯಲಿ ಸೈರಿಸುತ ಭಕ್ತರ
ಕಾವ ರಘುಪತಿ ನಡೆದ ಸುಗ್ರೀವನ ವಿಚಾರಿಸುತ ॥೪೦॥

## ವಿಶ್ರಾಮ ೬

ಸೊ॥ ಐದಿ ಪಂಪಾಸರಸಿ ತೀರಕೆ
ಸಾಧು ಸುರವೃಂದವನು ಮನ್ನಿಸಿ
ಸಾಧು ಲಕ್ಷಣವೊರೆದ ನಾರದಮುನಿಗೆ ರಘುರಾಮ ॥

ನೋಡು ಲಕ್ಷ್ಮಣ ವನದ ಶೋಭೆಯ
ನೋಡಿದೊಡೆ ಮನ ಚಲಿಸದಿಹುದೇ
ಕಾಡ ಖಗಮಿಗಮಾದೊಡೇಂ ಸತಿವೆರಸಿ ನಲಿಯುವುವು ।
ನೋಡದೋ ಮೌನದಲಿ ನಿಂದಿಸು
ತೋಡುತಿವೆ ಕಂಡೆಮ್ಮ ಭಯದಲಿ
ಕಾಡಿನಲಿ ಪೆಣ್ಗಳೆದ ನೀಚನನೆನ್ನನೀಕ್ಷಿಸದೆ ॥೧॥

ಅವುಗಳನು ನಿಲ್ಲಿಸುತ ಹರಿಣಿಯೊ
ರೆವುದು ನೀವೇಕಿವರ ಕಂಡೋ
ಡುವಿರಿ ಭಯವೆಳ್ಳನಿತು ಬೇಡಿವರಿಂದರಣ್ಯದಲಿ ।
ಅವನಿಜೆಯನರಸುತ್ತ ಬಂದಿಹ
ರಿವರ ಕಾಂಚನಮೃಗವು ವಂಚಿಸಿ
ಬವಣೆಗೊಳಿಸಿಹುದೆಂದು ನುಡಿವುದ ನೋಡು ಸೌಮಿತ್ರಿ ॥೨॥

ಕರಿ ಕರಿಣಿ ಸಂಗದಲಿ ವಿಹರಿಸು
ತೊರೆವುತಿದೆ ನೀತಿಗಳ ನೋಡಾ
ವರವಸಂತದ ಬೆಡಗ ಸೂಸುತ್ತಿರುವ ಕಾಂತಿಗಳ ।
ತೊರೆದು ಪತ್ನಿಯನಿಂತು ಸಮಯದೊ
ಳಿರಬಹುದೆ ಕಡುಭೀತಿ ತೋರದೆ
ತರಳ ಲಕ್ಷ್ಮಣ ನಗನೆ ನೋಡಿ ವಸಂತ ಮಾರುತನು ॥೩॥

ವಿರಹಶೋಕಕ್ಕೀಡು ಮಾಡುತ
ಲುರುವ ಸಂಕಟಗೊಳಿಸಿ ಮನ್ಮಥ
ನೆರೆಸುತಳಿಕುಲ ವಿಹಗ ಮೃಗಮಿಥುನಗಳ ನೆರವಿಯಲಿ ।
ಅರಸಿ ಬಂದಿಹನೆನ್ನ ಹೃದಯವ
ನಿರಿವ ಸುಮಬಾಣದಲಿ ನೋಡಾ
ವರಲತೆಯನಪ್ಪಿಹುದು ವೃಕ್ಷವು ಮದನನಲ್ಲಿಹನು ॥೪॥

ಬ್ಬಿಡುತ ಸುಮಶರ ನಗುತ ಸುಸ್ವರ
ದೊಡನೆ ಸಂಗೀತದಲಿ ಮುಳುಗಿಹ
ಮಿಡಿದು ವೀಣೆಯನಿದನು ನೋಡಿವ ನರನ ಹೃದಯದಲಿ ।
ಅಡಗಿರುವ ಸನ್ಮೋಹವೊಡೆಯದೆ
ಕೆಡಿಸಿ ಮನುಜರನೆಂತು ಕುಸುಮಗ
ಳೊಡನೆ ನಿಂದಿಹ ವಿವಿಧ ತರುರಾಜಿಗಳ ನೋಡೆಂದ ॥೫॥

ಕದಳಿ ತಾಳಧ್ವಜಪತಾಕಗ
ಳದುಭುತವ ನೀ ನೋಡದೋ ವಿಧ
ವಿಧದ ವರ್ಣದ ಕುಸುಮ ತರುಗಳೆ ಸೈನ್ಯ ಮನ್ಮಥಗೆ ।
ಮದಿಸಿ ಬೆಳೆದಾ ವಿಟಪ ವೃಂದವೆ
ಮದದ ಯೋಧರು ಸೈನ್ಯ ರಕ್ಷಕ
ರದನು ನೋಡಾ ತಮ್ಮ ಭೇರಿಯು ಮಧುಕರ ಧ್ವನಿಯು ॥೬॥

ಬರುವ ಮಂದ ಸುಗಂಧ ಶೀತಲ
ಮರುತನೇ ಸೇವಕನು ರತಿಪತಿ
ಚರಿಸುವನು ಚತುರಂಗ ಸೇನಾಸಹಿತ ಸೊರ್ಕಿನಲಿ ।
ವಿರಹಿಗಳ ದುಃಖಾಗ್ನಿಗಾಹುತಿ
ಯೆರೆದು ಕೆಡಿಸುತ ನಲಿವನಾತನ
ಕರಕೆ ಸಿಲುಕದ ಸುರನರೋರಗರುಂಟೆ ಹೇಳೆಂದ ॥೭॥

ಸ್ಮರನ ವೈಗಾಣಿಕೆಯ ಮೋಹದ
ಭರವ ನೋಡಿದೊಡೇನು ಸಾಲದೆ
ನರರ ಮನದ ಸ್ಥಿರತೆಯುಳಿಸುತ ಮಾನಮಂ ನಿಲಿಸಿ ।
ಸ್ಮರಗೆ ಸತಿಯೇ ಶಕ್ತಿಯವಳಿಂ
ಸರಿದು ಮನಮಂ ಗೆಲುವ ಧೀರನೆ
ಪರಮ ಯೋಧನು ವತ್ಸನವನೇ ಯೋಗಸಾಧಕನು ॥೮॥

ಜಗದಿ ಕಾಮಕ್ರೋಧ ಲೋಭಾ
ದಿಗಳೆ ಹಗೆ ಸುಜ್ಞಾನ ನಿಷ್ಠರ
ಮುಗುಧರಂ ಮಾಡುವುವು ತೊರೆಯುವುದಿವನು ಲೆಕ್ಕಿಸದೆ ।
ಬಗೆಯಲಾಸೆಯೆ ಡಂಭ ಲೋಭಕೆ
ಸಿಗುವ ಬಲಿ ವಧು ಮೋಹಕಾರಣ
ಹಗೆಯು ಪರುಷದ ನುಡಿಯೆ ಕೋಪಕೆ ಬಲವು ಕೇಳೆಂದ ॥೯॥

ಸರುವ ಲೋಕಾಧಿಪತಿ ಮನುಮಥ
ನುರವಣೆಗೆ ಸಿಲ್ಕಿದೊಲು ನಟಿಸುವ
ನರರ ಭಾವನೆಯೆರಕದೋರುವ ಕಪಟ ನಾಟಕದಿ ।
ವಿರಹವೇ ಹರಿಗಿಂತು ಮಾಯಾ
ಭರದ ದೇವಂಗಿರದ ಗುಣವೋ
ತರದು ಲೋಕಕೆ ಲೀಲೆ ತೋರುವ ಗಿರಿಜೆ ಕೇಳೆಂದ ॥೧೦॥

ಕಾಮ ಲೋಭ ಕ್ರೋಧಗಳು ರಘು
ರಾಮ ಕೃಪೆಯಿಂ ನಾಶಮಪ್ಪವು
ರಾಮನಂ ಸೆರೆಗೊಂಬವೇ ಮಾಯಾದಿ ಜಾಲಗಳು ।
ಈ ಮಹಾಮಾಯಗಳ ನಟಿಸುವ
ರಾಮ ಕೃಪೆಗಳಿಸಿದೊಡೆ ಭಕ್ತಿಯೊ
ಳಾ ಮನುಜ ದಾಟುವನು ಮೋಹಾದಿ ಬಂಧನವ ॥೧೧॥

ಅನುಭವದ ವಾಣಿಯಿದು ಪಾರ್ವತಿ
ನಿನಗಿದೊರೆದೆನು ರಾಮಚಂದ್ರನ
ಗುಣವರಿತು ಭಜಿಸುವುದೆ ಸಂಪದ ಸತ್ಯ ಲೋಕದಲಿ ।
ಇನಕುಲಜನಿಂತಾ ಧರಾತ್ಮಜೆ
ಯನು ನೆನೆದು ಪಂಪಾ ಸರೋವರ
ವನಕೆ ಬಂದ ಗಭೀರ ಸುಂದರ ನೋಟದಿಂ ನಲಿದು ॥೧೨॥

ಸರಳ ಹೃದಯದೊಳಾ ಸರೋವರ
ಮೆರೆದೆಸೆಯೆ ಸೋಪಾನಗಳ ಬಳಿ
ಯರೆಯ ಸೊಗದಿಂ ನಾಲ್ಕುದೆಸೆಯೊಳ್ ಸ್ನಾನಘಟ್ಟಗಳು ।
ನೆರೆದು ಮೃಗಸಂಕುಲವು ನಿಂ
ದಿರಲು ನೀರ್ಗುಡಿವುದಕೆ ತೀರದಿ
ಧರುಮ ಪುರುಷನ ಮನೆಯ ಭಿಕ್ಕೆಗೆ ನಿಂದ ತಿರುಕರೊಲು ॥೧೩॥

ನೆಗೆದ್ದು ಮೀನುಗಳೊಂದುಗೂಡುತ
ನಗುತಲಿಹವಾ ಸರದಿ ಸಂತರು
ಸೊಗದಿ ದಿವಸವ ಕಳೆಯುವಂತಾ ಮತ್ಸ್ಯವಿಹವಲ್ಲಿ |
ನಗುವ ನಾನಾಪರಿಯ ಕಮಲದೊ
ಳೊಗುವ ಮಧುರಸ ಸವಿವ ಭೃಂಗಾ
ಳಿಗಳು ನೀರ್ವಕ್ಕಿ ಶುಕ ಪಿಕ ಹಂಸಾದಿಗಳು ನಲಿಯೆ ||೧೪||

ಬರುವ ರಾಮನ ಕಂಡು ನುತಿಸುವ
ತೆರದಿ ದನಿಗೈಯುತ್ತಲೀಸುತ
ಲಿರೆ ಖಗಾದಿಗಳತ್ತ ಪಾಂಥರ ಕರೆವವೊಲು ವನದ |
ತರು ಸಮುಚ್ಚಯ ತಂಪನೀಯುತ
ಕರೆದು ಮಧುಫಲ ನೀಡುತಿಹವಾ
ವಿರಹಿಯಂ ಸಂತವಿಪ ಯೋಗಿಯ ತೆರದಿ ವನಮಿರವು ||೧೫||

ಹಲಸು ಮುತ್ತುಗ ಮಾವು ವಕುಳ ಕ
ದಳಿ ಕದಂಬ ತಮಾಲ ಪಾಟಲ
ಹೊಳೆವ ಚಂಪಕ ತಳಿರು ಸುಮಭರದಿಂದ ಶೋಭಿಪವು |
ಅಳಿಯ ಝೇಂಕೃತಿ ಖಗಗಳಿಂಚರ
ವಳಿಸಿದುವು ಹರಿವಿರಹ ಹಂಪೆಗೆ
ಸುಳಿದ ಮನುಜಂಗುಳಿವುದೇ ದುಃಖಾದಿ ಬಾಧೆಗಳು ||೧೬||

ಶೀತ ಮಂದ ಸುಗಂಧ ಮಾರುತ
ನಾ ತಪೋವನದಲ್ಲಿ ಸುಳಿಯಲು
ಮಾತನಾಡಿ ಕುಹೂ ಕುಹೂ ರವದಿಂದ ಪಿಕನಿಕರ |
ಸೋತು ಬೆಡಗಿಗೆ ಕಂಡು ಮೌನಿ
ವ್ರಾತ ದನಿಯಾಲಿಸುವ ಮನದಲಿ
ಹಾತೊರೆಯರೇ ಜಗದಿ ಪಂಪಾಸರದ ಸೊಗಕೆಣೆಯೆ ||೧೭||

ಸಿರಿದೊರೆಯೆ ಸಂತಂಗೆ ಬಾಗುವ
ತೆರದಿ ಫಲಭಾರದಲಿ ಬಾಗುತ
ಧರಣಿಗರ್ಪಿಸುತಿಹವು ನಿನ್ನೀ ರಸವ ಕೊಳ್ಳೆನುತ |
ಸರಸಿಜಾಕರದಲ್ಲಿ ರಘುವರ
ವಿರಹವೇದನೆ ಕಳೆಯ ಮಿಂದನು
ವಿರಮಿಸಿರಲಾ ವನಕೆ ಬಂದುದು ಮೌನಿಸುರವೃಂದ ||೧೮||

ಸುರರು ಕೊಂಡಾಡುತಿರೆ ರಘುಪತಿ
ಹರುಷ ಮುಖದಿಂ ಸರಸ ಕತೆಗಳ
ನೊರೆಯುತಿರ್ದನು ಲಕ್ಷ್ಮಣಗೆ ಸೋಪಾನದಲಿ ಕುಳಿತು |
ಹರಿಯ ವಿರಹವ್ಯಥೆಯನರಿದಾ
ಸುನಮುನಿಯು ಬಹು ನೊಂದ ಮನದಲಿ
ಪರಿತಪಿಸಿ ನಡೆತಂದ ರಾಮನ ದರ್ಶನಾತುರದಿ ||೧೯||

ಶಾಪವಂಗೀಕರಿಸಿ ಲೋಕದ
ತಾಪ ಸಹಿಸಿದನೆನ್ನ ತಪ್ಪಿದು
ಪಾಪವೆಸಗಿದೆ ಮೋಹಪರವಶನಾಗಿ ಹಿಂದಾನು |
ಶ್ರೀಪತಿಯ ನೋಡುವೆನು ದರ್ಶನ
ಕೀ ಪವಿತ್ರದ ಸಮಯವುಳಿದೊಡೆ
ನಾ ಪಡೆವೆನೇ ರಘುರಾಮಸೇವೆಯನೆಂದು ಹರಿತಂದ ||೨೦||

ಕರದ ವೀಣೆಯ ನುಡಿಸಿ ರಾಮನ
ಚರಣ ಗುಣಗಾನದಲಿ ಬಂದೊಡ
ನರೆ ನಗುವಿನಿಂದಿರ್ದ ರಘುಪತಿ ಮೊಗವ ನೋಡಿದನು |
ಕರೆದು ಕುಶಲವ ಕೇಳಿ ಕೂರಿಸಿ
ಹರಿಯನುಜನಾ ಮುನಿಯ ಪದಯುಗ
ವರವ ತೊಳೆದನು ಪಾದ್ಯ ಮಧುಪರ್ಕಾದಿಗಳನಿತ್ತು ||೨೧||

ಹರುಷ ಚಿತ್ತದೊಳವನು ಕೈಕೊಂ
ಡರರೆ ನರನಾಟಕವನಭಿನಯ
ವೆರಸಿ ತೋರುವ ಭರವಸವ ನೋಡಿದೆನು ರಘುನಾಥ |
ಪರಮ ಸುಂದರನಗಮ ಸುಗಮನೆ
ವರ ಮನೋರಥ ಸಲಿಸಿ ಕಾಪಿಡು
ನಿರುತ ಸುಖದಾಯಕನೆ ಪರಮೋಧಾರ ಗಂಭೀರ ||೨೨||

ನಿನ್ನ ಭೃತ್ಯರನರಿವ ಗುಣ ಸಂ
ಪನ್ನ ನೋಡೆನೆ ಭಕ್ತರಂ ತೊರೆ
ದೆನ್ನ ದೈವತ್ವಗಳು ನಿಲುವುದೆ ನಿಜವ ನೀನರಿಯೆ |
ಅನ್ಯ ಬಯಕೆಯದೇನು ಭಕ್ತರಿ
ಗಿನ್ನು ನೀಡದ ವರಮದಾವುದು
ಸನ್ನುತನೆ ಹೊಸಪರಿಯನೆಸಗುವೆಯೆಂದು ಬೇಡುತಲಿ ||೨೩||

ಎಂಬ ನಂಬುಗೆ ಮರೆಯದಿರು ನೀ
ನಂಬು ಮನವನು ಬಿಚ್ಚಿ ಪೇಳುವ
ದೆಂಬ ನಿರ್ಭಯ ವಚನವಾಲಿಸಿ ದೇವಮುನಿಯೆಂದ |
ಕಂಬುಕಂಧರ ನಾಮವೆಷ್ಟಿಹು
ದೆಂಬುದರಿಯೆನು ನಾಮ ನಿಕರದಿ
ನಂಬಬಹುದೇ ಒಂದರಿಂದೊಂದಧಿಕಮೆಂದೆನುತ ||೨೪||

ಆದೊಡೇಂ ವರರಾಮನಾಮವೆ
ಶೋಧಿಸಲು ಲೋಕದಲಿ ಪಾವನ
ಸಾಧಿಸುತಲಘುಪಕ್ಷಿ ಹಾರಿ ವಿರಾಗ ಮಾರ್ಗದಲಿ |
ಮಾಧವನು ತಲೆದೂಗಿ ಮುನಿಜನ
ರಾದರದೊಳೊಪ್ಪಿದರೆ ವರದೇ
ವಾದಿಗಳು ಕೊಂಡಾಡಲಹುದೆಂದನು ರಘೂತ್ತಮನು ||೨೫||

ಅತಿ ಹರುಷದಿಂದಿರಲು ನಾರದ
ನುತಿಸಿ ಕರವುಗಿದೆಂದ ವಿನಯದಿ
ಪತಿತಪಾವನನೆನ್ನ ಮೋಹದಿ ಕೆಡಹಿ ಮಾಯೆಯಲಿ ।
ಸತಿಯ ವಡೆವಾಸೆಯಲಿ ಮೆಚ್ಚಿಸಿ
ಹಿತವ ತೋರದೆ ವಿಘ್ನವೊಡ್ಡುತ
ಸತಿಯ ನೀನಪಹರಿಸಿ ನಡೆದಾ ಬಗೆಯ ಗುಟ್ಟೇನು ॥೨೬॥

ಭಕ್ತರಿಗೆ ಗುರು ನಾನು ಭಕ್ತರ
ಮುಕ್ತಿಯೆನ್ನೊಳಗಿಹುದು ವಿ
ರಕ್ತ ಗುಣಮಂ ಕೊಟ್ಟು ಕಾವ ಕೃಪಾಳುವೆನಿಸುವೆನು ।
ಚಿತ್ತವರಿಯದ ಶಿಶುವು ಕೆಂಡವ
ನತ್ತ ಹಿಡಿದೊಡೆ ತಾಯಿ ತಡೆಯುವ
ಉತ್ತಮದ ಮಾರ್ಗದಲಿ ಬಿಡುವೆನು ಭಕ್ತರನ್ನೆತ್ತಿ ॥೨೭॥

ಪ್ರೌಢರಾಗಲು ತೊಡೆಯ ಶಿಶುಗಳ
ನಾಡೆ ವಾತ್ಸಲ್ಯದಲಿ ನೋಡುತ
ಮಾಡಳವಳು ನವೀನ ರಕ್ಷಣೆಯರಿವ ನೀಡಿರಲು ।
ಪ್ರೌಢರಿದನರಿಯುತ್ತ ಭಜಿಪರು
ನೋಡು ಸುಜ್ಞಾನದಲಿ ಸನ್ಮತಿ
ನೀಡಿರಲು ಭಕ್ತಿಯನು ಬಿಡದಿರು ನಿಜವನರಿಯೆಂದ ॥೨೮॥

ಜಗದಿ ಕಾಮಕ್ರೋಧ ಮದ ಲೋ
ಭಗಳು ಮೋಹದ ತವರು ಸಿಲುಕಿರ
ಲಗಣಿತದ ದುಃಖದಲಿ ಮಾಯಾಸಾರ ಪಾಪದಲಿ ।
ಒಗೆಯುವಳು ಮುನಿ ನೀತಿವಂತರು
ನಿಗಮವಿತಿಹಾಸಗಳು ನುಡಿಯುವೆ
ಜಗದ ಮೋಹಾರಣ್ಯಕೀ ವಧು ಮಧು ಸಮಯವೆಂದು ॥೨೯॥

ನಿಯಮ ಜಪತಪ ಯೋಗ ನಿಷ್ಠಾ
ಚಯ ಸರೋವರ ಗ್ರೀಷ್ಮಋತುವೀ
ನಿಯಮ ಸಾರವನ್ನೆಲ್ಲ ಹಿಂಗುವ ಬೇಸಗೆಯು ನಾರಿ |
ಭಯದ ಕಾಮಕ್ರೋಧ ಮತ್ಸರ
ಚಯವೆ ಭೇಕ ಕರಾಲ ವರ್ಷೋ
ದಯವೆ ವನಿತಾಭ್ಯುದಯ, ಷಡ್ವೈರಿಗಳು ಬೆಳೆವುದಕೆ ||೩೦||

ದುರುಳ ಕಾಮೋತ್ಕರುಷ ಕುಮುದಕೆ
ಶರದಋತು ವಧು ಮತ್ತೆ ಲೋಕದ
ಧರುಮ ಸರಸಿಜಕಿವಳು ಹಿಮಋತು ಬೆಳೆಸಿ ದರ್ಭೆಯನು |
ತಿರೆಗೆ ತೋರುವ ಶಿಶಿರಋತು ವಿಷ
ಶರಧಿ ಪುರುಷಗೆ ನಾರಿಯರಿಯಾ
ಕರುಷಿಣಿಯು ತರವಲ್ಲ ವನಿತಾಮೋಹ ನಿನಗೆಂದ ||೩೧||

ದುರಿತ ಗೂಬೆಗೆ ರಾತ್ರಿ ಮತಿಬಲ
ಪರಮ ಸತ್ಯ ಸುಶೀಲ ಮತ್ಸ್ಯವ
ನರೆವ ಯಂತ್ರವೆ ನಾರಿಯೆಂಬರು ಸುಜ್ಞರಿದನರಿದು |
ನರನ ದುಃಖದ ಮೂಲ ಕಾಮದ
ಸೆರೆಯು ಮುಕ್ತಿಯ ಮರೆಯು ನರಕದ
ಕರೆಯು ಮೋಹದ ನೆಲೆಯು ಮರುಕದ ಖನಿ ನಿತಂಬಿನಿಯು ||೩೨||

ಇದ ನಿವಾರಿಸಲಾನು ನಿನ್ನಾ
ವಧುವಿನಾಸೆಯ ತೊಡೆದೆ ನಾರದ
ಮದುವೆ ಬೇಕೇ ನಿನಗೆನಲು ರೋಮಾಂಚನದಿ ಮುನಿಗೆ |
ಉದುಭವಿಸೆ ಕಣ್ಣೀರು ರಾಘವ
ನದುಭುತದ ವಾಣಿಗಳ ನೆನೆಯುತ
ಹೃದಯ ವಿಕಸಿತವಾಗೆ ನಾರದನೆಂದನಿಂತೆಂದು ||೩೩||

ಸೇವಕರೊಳಿಷ್ಟೊಂದು ಮಮತೆಯ
ನಾವ ತೋರ್ಪನು ಬಿಮೆಯು ಮರೆಯುತ
ಲಾವ ಮಾನವ ಭಜಿಸದಿಹನೋ ಮೂರ್ಖನವನಹುದು ।
ಭಾವ ಶೂನ್ಯನು ಭಾಗ್ಯಹೀನನು
ದೈವದೂರನು ನೀತಿರಹಿತನು
ದೇವ ನಿನ್ನೀ ಗುಣಗಳರಿಯದ ನರನು ಮಾನವನೆ ||೩೪||

ಸಕಲ ಶಾಸ್ತ್ರದ ದೈವ ಕರುಣಿಸು
ಮುಕುತ ಪುರುಷರ ಲಕ್ಷಣವನೊರೆ
ಭಕುತ ಹೃದಯ ರಹಸ್ಯ ವೆಂತಿಹುದೆನಗೆ ಪೇಳೆನಲು ।
ಮುಕುತ ಭಕುತರ ಗುಣವ ಕೇಳೈ
ಸಕಲ ರೂಪದೊಳವರ ಹೃದಯದಿ
ವಿಕಸಿಸುವೆ ನೆನೆದಂತೆ ಮೂಡುವೆನವರ ಬುದ್ಧಿಯಲಿ ||೩೫||

ತೊರೆದು ಷಡ್ವೈರಿಗಳನಿಂದ್ರಿಯ
ಭರವ ನಿಲಿಸುತ ಭಜಿಪ ನಿಶ್ಚಲ
ನಿರುಮಲನು ಸುಖಧಾಮನನಘನಕಾಮ ಮಾನದನು ।
ಅರಿದು ಭವದುಃಖಗಳ ಸದ್ಗುಣ
ಶರಧಿ ಧೀರೋಧಾರ ಶಂಕರ
ಚರಣ ಕಮಲಪ್ರಿಯನು ಸಂಶಯರಹಿತ ನಿಜಭಕ್ತ ||೩೬||

ದೇಹಗೇಹ ಪ್ರೇಮವರಿಯನು
ಮೋಹಗೊಳ್ಳನು ನಿಜಗುಣ ಶ್ರವ
ಣಾಹಿ ಗರುಡನು ಪರಗುಣವನೊಪ್ಪುವನು ಹರ್ಷದಲಿ ।
ಮೋಹ ಪದದಿ ಕ್ಷಮೆ ನಿರಂತರ
ದಾಹ ಕರಣಾ ಭಕ್ತಿ ಶ್ರದ್ಧಾ
ರೋಹಿಯೊಪ್ಪುವ ಮೆರೆದು ಸೊಗಸದೆ ಸತ್ಪುರುಷವೃಂದ ||೩೭||

ವಿನಯ ವಿರತಿ ವಿವೇಕ ನೀತಿಯ
ಮನನ ವೇದ ಪುರಾಣ ಸಂಗತಿ
ಯನು ವಿಚಾರದೊಳರಿತು ಮದಮಾತ್ಸರ್ಯ ದಂಭಗಳ |
ನೆನೆಯರೈ ಮರೆದಾಡರಿದನೀ
ಮನುಜ ಸಂಕುಲ ಗಾನ ಮಾಡುತ
ಲನು ದಿನವು ನಿಜಲೀಲೆಗಳ ನಿಷ್ಕಾಮದಲಿ ನಲಿದು ||೩೮||

ನುಡಿಯಲಳವೇ ಸಂತಹೃದಯದೊ
ಳಡಗಿರುವ ಗುಣವಿಷ್ಟೆಂದು ವಾಣಿಯ
ನುಡಿಗೆ ನಿಲುಕದು ವೇದವರಿಯದು ಸಾಧು ಲಕ್ಷಣವ |
ಕೆಡುವರಿದನರಿಯದಲೆ ನರರೆನ
ಲಡಿಗೆರಗಿ ನಾರದನು ಗದ್ಗದ
ನುಡಿಯೊಳೊರೆದನು ವಿನಯಮತಿ ತಲೆವಾಗಿ ಕೈಮುಗಿದು ||೩೯||

ಧನ್ಯನಾದೆ ಪ್ರಭುವೆ ಗುಣಸಂ
ಪನ್ನರಿರಗಳನರಿದೆ ಮರೆದೆನು
ಮುನ್ನಿನಜ್ಞಾನಗಳ ನಿನ್ನ ವಿವೇಕ ನುಡಿಗಳಲಿ |
ನಿನ್ನ ಭಕ್ತರ ಗುಣವ ನೀನೇ
ಮಾನ್ಯವೆನ್ನಿಸುತಣುವನಗಣಿತ
ವೆನ್ನಿಸುವೆ ಹರಿ ನಿನ್ನ ಮಹಿಮೆಯನರಿವರಾರೆಂದ ||೪೦||

ದೇವರಾಮನ ಕೀರ್ತಿಗಾನವ
ನಾವ ಮಾನವನಚಲ ಭಾವದಿ
ಗೈವನೋ ಸುಶ್ರವಣ ಮಾಡುವನಾ ಮನುಜ ಧನ್ಯ |
ಪಾವನದ ವೈರಾಗ್ಯ ಯೋಗ ಜ
ಪಾವಳಿಯ ಮಾರ್ಗದಲಿ ಪಡೆಯುವ
ನಾ ವಿರಾಗಿಯು ರಾಮಭಕ್ತಿಯ ನೈಜಶೀಲದಲಿ ||೪೧||

ಯುವತಿ ದೀಪ ಜ್ಯೋತಿ ಹೊಳವಿಗೆ
ಕವಳವಾಗದಿರೆಲಿಲೆ ಮನವೇ
ಸವೆಯದಿರು ಕೆಡದಿರು ಪತಂಗದ ರೂಪ ತಾಳದಿರು ।
ಅವನ ಭಜಿಪುದು ಕಾಮ ಮದ ಬಿಡು
ತವನ ಭಕ್ತರ ಸಂಗದಲಿ ನಲಿ
ದವರ ಸೇವೆಯಮಾಡು ಜೀವನ್ಮುಕ್ತ ನೀನಾಗು ॥೪೨॥

ಸಕಲ ಕಲಿಮಲಹಾರಿ ಭಕ್ತರ
ಮುಕುರ ಮುಕ್ತರ ಶಿಖರ ಸನ್ಮತಿ
ನಿಕರ ರಘುಪತಿ ವಾಣಿ ತುಲಸೀದಾಸ ಸತ್ಕೃತಿಯು ।
ಸುಖದಿ ರಘುವರ ಚರಿತ ಮಾನಸ
ಭಕುತ ಬೃಂದಕ್ಕೊರೆದು ಹಾಡುತ
ಸಕಲ ಜಗಕಾನಂದವೆನಿಸಿದ ಕರುಣಿ ಗೋಸ್ವಾಮಿ ॥೪೩॥

---

# ಕಿಷ್ಕಿಂಧಾಕಾಂಡ

## ವಿಶ್ರಾಮ ೧

ಸೂ|| ಪಯಣ ಗತಿಯಲಿ ಋಷ್ಯಮೂಕಾ
ದ್ರಿಯಲಿ ಹನುಮನ ಕಂಡು ಕೀಶಪ
ತಿಯೊಳು ಮೈತ್ರಿಯ ಬೆಳೆಸಿ ವಾಲಿಯ ಕೊಂದನಾ ರಾಮ

ಶ್ರೀಕರಾಂಘ್ರಿ ಸರೋಜ ರಾಮ ಕೃ
ಪಾಕರೋತ್ತಮ ರಂಗಧಾಮ ಪಿ
ನಾಕಪಾಣಿ ಸುರಾದಿನುತ ಗಂಭೀರ ಧುರವೀರ |
ಲೋಕಪಾಲನ ಕರ್ತ ಸಹಸಾ
ನೇಕರೂಪ ವಿಶಾಲ ಶೀಲ ಗು
ಣಾಕರನೆ ರಘುರಾಮಚಂದ್ರ ಸುನೀಲ ಸಲಹೆಮ್ಮ ||೧||

ಕುಂದ ನೈದಿಲೆಯಂತೆ ಶೋಭಾ
ಸುಂದರರು ಭುಜಬಲರು ಭೂಸುರ
ವೃಂದ ಗೋಪ್ರಿಯ ನಿಗಮನುತ ವಿಜ್ಞಾನ ಧನ್ವಿಗಳು |
ಸಂದ ಭಕ್ತಿಪ್ರದರು ಮಿಥಿಲಾ
ನಂದನಾನ್ವೇಷಕರು ಜನಕಾ
ನಂದರೂಪರು ಧರ್ಮಕರ್ಮರು ಮನುಜರೂಪಿಗಳು ||೨||

ಕಲಿಮಲ ಪ್ರಧ್ವಂಸ ಭವರುಜೆ
ಗಳಿಗೆ ಮಧುರೌಷಧವು ಶಿವಮುಖ
ನಳಿನ ಸಂಶೋಭಿತನು ವೇದಾಂಭೋಧಿ ಭವನಜನು |
ಇಳೆಯ ಕುವರೀ ಜೀವನನು ರವಿ
ಕುಲಜ ನಾಮಾಮೃತವನೀಂಟಿ
ಲ್ಕೊಲವಿನಿಂದವನೇಸು ಧನ್ಯನೊ ಪುಣ್ಯಮಾನುಷನು ||೩||

ಮುಕ್ತಿನೆಲೆ ಸುಜ್ಞಾನಕಾಕರ
ಭಕ್ತರಘುಮಂ ಕಳಿಸ ಭೂಮಿ ವಿ
ರಕ್ತ ಶಂಭು ಭವಾನಿ ನಿಲಯದೊಳ್ ಸಿಲ್ಲಿಸಿಹೆ ।
ಯುಕ್ತಿಗಾಣದ ಸುರರನುಳುಹಲು
ಶಕ್ತಿಪತಿ ಬಿಸನುಂಗುತುಳುಹಿದ
ಭಕ್ತಿಯಿಂದೆಲೆ ಮನವೆ ಶಂಭುವನೇಕೆ ಮರೆತಿರುವೆ

ಪಯಣಗತಿಯಲಿ ಋಷ್ಯಮೂಕಾ
ದ್ರಿಯನು ಸೇರಲು ರಾಮ ಸೌಮಿ
ತ್ರಿಯರನಲ್ಲಿಹ ವಾನರಂ ಸುಗ್ರೀವ ನೋಡಿದನು ।
ಭಯದೊಳೆಲೆ ಹನುಮಂತ ಸುಂದರ
ನಯನ ಭುಜಬಲನಿಲಯರಿರ್ವರ
ನಯದೊಳರಿಯುತ ನಿಜವ ತಿಳಿಯೆೈ ವಿಪ್ರವೇಷದಲಿ

ವಾಲಿ ಕಳುಹಿರಲಿವರನಿಲ್ಲಿಗೆ
ಕಾಲದೆಗೆವೆನು ಗಿರಿಯ ತೊರೆವೆನು
ಕೇಳಿನಲು ಹನುಮಂತನೈದಿದ ವಿಪ್ರರೂಪದಲಿ ।
ಪೇಳಿ ನೀವಾರೇಕೆ ಹಳುವದಿ
ಬಾಳುವಿರಿ ಭುಜಶೌರ್ಯ ಶಕ್ತರು
ನೀಲ ಗೌರ ಶರೀರಿಗಳು ವೀರಕ್ಷತ್ರರೂಪಿಗಳು

ಸ್ವಾಮಿ ವನಸಂಚಾರವೇಕಿದು
ಭೂಮಿ ಕಲ್ಮುಳ್ಳಿಡಿದ ಕಠಿನಾ
ರಾಮ ಪದ ಮೃದು ಸಹಿಸಲೆಂತೀ ಬಿಸಿಲು ಗಾಳಿಗಳ ।
ಭೀಮ ವಿಕ್ರಮರಾರು ಗೌರೀ
ಪ್ರೇಮಧಾಮರೊ ವಿಧಿಯೊ ಲಕ್ಷ್ಮೀ
ಕಾಮನೆಯ ವರಹರಿಯೊ ನರನಾರಾಯಣರೊ ನೀವು ॥೭॥

ಜಗಕೆ ಕಾರಣ ಭವಕೆ ತಾರಣ
ಜಗದ ಭಾರವ ತೊಡೆವ ದೇವೆರೊ
ಜಗದೊಡೆಯರೋ ಮನುಜರೂಪಿಗಳಾರು ನೀವೆನಲು ।
ನಗುತ ರಘುಕುಲನಾಥನೊರೆದನು
ಬಗೆಯಲೆಂತೋ ಹಣೆಯ ಲಿಖಿತವ
ನುಗಿಯ ಬಲ್ಲವರಾರು ವಿಧಿಮಾರ್ಗದಲಿ ಬಂದಿಹೆವು ||೮||

ವಸುಮತಿಯೊಳಾ ಕೋಸಲೇಶ್ವರ
ದಶರಥಾತ್ಮಜರಾವು ಬಂದೆವು
ವಸುಮತೀ ಸುತೆವೆರಸಿ ವಿಪಿನಕೆ ಪಂಚವಟಿಯಲಿರೆ ।
ನಿಶಿಚರನು ಕದ್ದೊಯ್ದ ಸೀತೆಯ
ನುಸುಳುಗಾಣದೆ ಬಂದೆವರಸುತ
ವಸುಮತೀಸುರ ಪೇಳು ನೀನಾರೆಂದು ತಿಳುಹೆಮಗೆ ||೯||

ಅರಿತು ಸತ್ಯವ ಹನುಮ ರಾಮನ
ಚರಣದಲಿ ಮೈಮುರಿದು ಹೊರಳುತ
ಪರಮ ಸುಖದಲಿ ತನ್ನ ಮರೆದನು ತಿಳಿವರಾರದನು ।
ಬರದಿರಲು ಮಾತುಗಳು ರಾಮನ
ಪರಮ ರೂಪಾತಿಶಯ ರಚನೆಯ
ನರಿತು ರೋಮಾಂಚನವ ಪೊಂದಿದ ನಿತ್ಯದರ್ಶನದಿ ||೧೦||

ಮನದಿ ಧೈರ್ಯವ ತಳೆದು ಹೊಗಳುತ
ಹನುಮನರಿತ ಸ್ವಾಮಿಯೆಂಬುದ
ನನಘ ಸಂತಸವಡೆದು ತಿಳಿಯದೆ ನಿಮ್ಮ ಕೇಳಿದೆನು ।
ಮನುಜರೊಲು ನೀನೊರೆವೆ ಕೇಳುವೆ
ಮನ ವಿಮೋಹಕ್ಕೆರವು ಮಾಯದೊ
ಳನುವ ಮರೆಯುತ ನಿಮ್ಮನರಿದೆನೆ ದೇವರೆಂಬುದನು ||೧೧||

ಕೋಡಗನು ಕಡುಪೂರ್ವ ಭಕ್ತಿಯಿಂ
ಜಾಡನರಿಯೆ ಕುಮೋಹ ಜಡನಂ
ನೋಡದೇತಕೆ ಮರೆತೆ ರಾಘವ ದೀನಜನ ಶರಣ ।
ಮೂಡಿಹುದು ದುರ್ಗುಣವು ತೊರೆಯುದೆ
ನೋಡ ಬಯಸಿದೆ ನಿನ್ನ ಮಾಯದೊ
ಳಾಡುತಿಹುದೀ ಜೀವನುದ್ಧರಿಸೆನ್ನ ಬೇಗೆಂದ

ಮತ್ತೆ ಭಜನೋಪಾಯುಪರಿಯೆನು
ಪುತ್ರನಾಂ ಪಿತೃಮಾತೃ ಭರವಸೆ
ಯಿತ್ತು ಸಲಹೈ ದುಃಖಗಳಿದೆನು ನಿಮ್ಮ ನಂಬಿಹೆನು
ತೊತ್ತು ನಿಮಗಾನೆಂದು ಕಾಲ್ಗಳಿ
ಗೊತ್ತಿ ತಲೆಯಂ ನಮಿಸೆ ರಘುವರ
ನೆತ್ತಿತಾಲಿಂಗಿಸಿದ ಬಾಷ್ಪವ ಮಿಡಿದ ಮುದದಿಂದ

ಹನುಮ ಬಿಡು ಮನದೂಣೆಯಂ ನೀ
ನೆನಗೆ ಲಕ್ಷ್ಮಣಗೆರಡು ಮಡಿ ಹಿತ
ನನಘ ಜನ ಸಮದರ್ಶಿಯೆಂಬರು ಲೋಕದೊಳಗೆನ್ನ
ಎನಗಧಿಕನನ್ಯಗತಿಗಾಣದ
ಘನಮಹಿಮ ಸೇವಕನು ನಿರುತನ
ನನ್ಯ ಭಕ್ತನೆ ಧೃಢಮತಿಯು ನಿಶ್ಚಲನು ನಿಜನೆಂದ ॥೮॥

ಪರಮ ಸೇವಕ ತಾನು ಸಚರಾ
ಚರವೆ ಭಗವದ್ರೂಪವೆನುತಿರ
ಲರಿತ ಮಾರುತಿ ರಾಮ ತನುಗನುಕೂಲವೆಂಬುದನು ।
ಕರಮುಗಿದು ಮತ್ತೊರೆದ ನಾಥನೆ
ಗಿರಿಯೊಳಿಹ ಸುಗ್ರೀವ ಕಪಿಪತಿ
ಚರಣದಾಸನು ನಿನಗೆ ನೀನ್ನೆತಂದು ನ್ನೋಡುವನ ॥೧೫॥

ಅವನನಾಥನು ನೀಡುತಭಯುವ
ನವನ ಸಲಹೈ ಹುಡುಕಿಸುವನವ
ನವನಿಜಾತೆಯ ಕೋಟಿ ಮರ್ಕಟ ಪಡೆಯನಟ್ಟುತಲಿ ।
ಅವನಿಗೊರೆದು ಸಮಸ್ತ ಚರಿತೆಯ
ನವೆದ ಕಪಿಪತಿಯೆಡೆಗೆ ನೆಗೆದನು
ಜವದೊಳುಭಯರ ಪೆಗೆಲೊಳೇರಿಸಿ ಸೇರ್ದ ಗಿರಿಯನ್ನು ॥೧೬॥

ಬಂದು ರಾಮನ ಕಂಡು ಕಪಿಪತಿ
ಯಿಂದು ಜನಮ ಪವಿತ್ರಮಾದುದು
ತಂದೆ ದರುಶನದಿಂದಲೆಂದೆರಗಿದನು ಪದತಲದಿ ।
ಬಂದು ಸೇರಲ್ಕನುಜ ಸಹಿತ ಕ
ಬಂಧಸೂದನ, ಮನಕೆ ಸಂದೆಗ
ದಂದನಾ ಸುಗ್ರೀವ ಹಿತರೇನಿವರು ತನಗೆಂದು ॥೧೭॥

ಹನುಮನುಭಯರ ಕಥೆಗಳೊರೆಯುತ
ಲನಲ ಸಾಕ್ಷಿಯೊಳವರ ಮೈತ್ರಿಯ
ಲನಘ ಮಾಡಿಸುತುಭಯರ ಕ್ಷೇಮಗಳನವರವರು ।
ಮನದರಲು ಲಕ್ಷ್ಮಣನು ಮಿಥಿಲಾ
ತನಯೆ ಹರಣವನೊರೆಯೆ ಕೇಳುತ
ಕಣ್ಣುಗಳಲಿ ಜಲಮಿಡಿದ ವಾನರಯೂಥ ಸುಗ್ರೀವ ॥೧೮॥

ಅನಘ ನಿನ್ನಯ ದುಃಖಮೆನ್ನದು
ಜನಕಸುತೆ ಸಿಕ್ಕುವಳು ರಾಕ್ಷಸ
ಹನನ ಕಾರ್ಯದಿ ಗೆಲುವೆ ಸೀತೆಯನೊಂದು ದಿನ ನಾನು ।
ಘನವಿಚಾರದೊಳಿರಲು ನಭದಲಿ
ವನಿತೆಯೊರ್ವಳು ಚೀರಿ ಸೆರಗಿನ
ಕೊನೆಯ ಹರಿದಿದ ಹಾಯ್ಕಿದಳು ನೋಡೆಂದು ನೀಡಿದನು ॥೧೯॥

ರಾಮ ಹಾಹಾ ರಾಮನೆನ್ನುತ
ಕಾಮಿನೀಮಣಿ ಮೊರೆಯಿಡುತ್ತಿರೆ
ನಾ ಮನೋವ್ಯಥೆಯಿಂದ ನೋಡಲು ಬಿಸುಟಳಿದನೆನಲು
ರಾಮನಾ ವಸ್ತ್ರವನು ಕೈಗೊಂ
ಡಾ ಮನೋಹರೆಯನ್ನು ನೆನೆಯುತ
ವೈಮರೆಯುತೆಳ್ಚತ್ತು ಹೃದಯದೊಳಪ್ಪಿದನು ಮರುಗಿ ॥ ೨೦॥

ಬಿಡು ಮನೋವ್ಯಥೆಯೇಕೆ ಸೀತೆಯ
ಹುಡುಕಿ ತರುವೆನಿದೇಕೆ ಶೋಕವಿ
ದೊಡೆಯ ಕಿಂಕರನಾನು ಸೇವೆಯ ಸಲಿಸಿ ಬಾಳುವೆನು ।
ಪೊಡವಿ ಪಾತಾಳ ನಭ ನಾಕದಿ
ಪೊಡವಿ ಮಗಳೆಲ್ಲಿರಲಿ ವಾನರ
ಪಡೆಗೆ ಕಷ್ಟವೆ ತರುವೆ ನಿವಿಸದಿ ಸೀತೆ ವಾರ್ತೆಯನು ॥

ಎಂದ ಮಾತಿಗೆ ನಗುತ ಮರ್ಘು ಪ್ರ
ತೆಂದು ಹೊಗಳುತ ಹಿಂದೆ ಶಬರಿ ಕ
ಬಂಧರೆಂದುದನೊರೆದು ತಾನ್ಯೆತಂದ ಬಗೆಪೇಳ್ದು
ತಂದೆ ಕಡುಗಲಿಯಾಗಿ ಭೀತಿಯೊ
ಳಿಂದು ಮಿಗದೊಲು ವನದೊಳಿಹೆಯೇ
ಕೆಂದು ಕೇಳ್ದೊಡೆ ಬಂದ ಕಷ್ಟ ನಿವೇದಿಸಿದ ಪದದಿ ॥೨೨॥

ವಾಲಿಯೆನಗಗ್ರಜನು ರಾಜ್ಯವ
ನಾಳುತಿರೆ ಮಾಯಾವಿ ಮಯಸುತ
ಕಾಳಗಕೆ ವೈಯೊಡ್ಡಿ ಬಂದನು ಮಧ್ಯರಾತ್ರಿಯಲಿ
ಆಲಿಸುತ ಘರ್ಜನೆಯ ಕೋಪದಿ
ವಾಲಿಯೋಡಿದನವನ ಪಿಡಿಯಲು
ಕಾಲ ತೆಗೆದನು ದುರುಳನಲ್ಲಿಂದಡವಿ ಮಾರ್ಗದಲಿ ೨೩॥

ಹಿಂದೆ ನಾನೋಡುತಿರೆ ರಕ್ಕಸ
ನೊಂದು ಗುಹೆಯೊಳ ಹೊಗಲು ವಾಲಿಯು
ಬಂದು ತಾನೊಳಪೊಕ್ಕು ಕೊಲ್ಲುವೆನಿವನ ನಿಮಿಷದಲಿ ।
ಇಂದಿಗಾಂ ಹನ್ನೆರಡು ದಿನದಲಿ
ಬಂದು ನೋಡುವೆನಿಲ್ಲದೊಡಳಿದ
ನೆಂದು ಭಾವಿಸು ಮರಳಿ ಹೋಗುವುದೆನುತಲೊಳ ಹೊಕ್ಕ ॥೨೪॥

ದ್ವಾರದೊಳಗಾನಿರಲು ಮಾಸವು
ಮೀರಿದುದು ರುಧಿರಪ್ರವಾಹವು
ಘೋರತರದಿಂದುಕ್ಕುತಿರೆ ಭಯದಿಂದ ನಡುಗಿದೆನು ।
ಮಾರಣಕ ಹೋರಾಟದೊಳಗಸು
ಜಾರಿದುದು ಹಿರಿಯಣ್ಣಗೆನ್ನುತ
ಪಾರ ದುಃಖದಿ ನೊಂದೆ ರಘುವರ ವಿಧಿಯ ಬಗೆ ನೆನೆದು ॥೨೫॥

ಅಳಿಯಲಳವೇಂ ವಾಲಿಭುಜಬಲ
ಕಳನೊಳಗೆ ಕಾದಾಡಿ ಬದುಕುವ
ಛಲವೆ ಧೈರ್ಯಮದಾವ ವೀರನಿಗಿಹುದು ಜಗದಲ್ಲಿ ।
ಅಳಿದನಾದೊಡೆ ವಾಲಿ ರಕ್ಕಸ
ಖಳರು ಬಿಡುವರೆಯೆನ್ನ ಕೊರಳನು
ಕಳಚಿಕೊಲ್ಲದೆ ಮಾಣ್ಬರೇ ಹಾಯೆಂದು ಚಿಂತಿಸಿದೆ ॥೨೬॥

ಆ ಗುಹದ್ವಾರವನು ಬಂಧಿಸು
ತಾ ಗಿರಿಯ ಕಲ್ಗಳಲಿ ಮುಚ್ಚುತ
ಸಾಗಿದೆನು ಬಹುಪರಿಯ ಚಿಂತಾನಲನ ಬೇಗೆಯಲಿ ।
ಆಗ ಪಂಪಾಪುರದಿ ಸಚಿವರು
ಬೇಗ ಪಟ್ಟವನಿತ್ತು ಭೂಪತಿ
ಯಾಗಿ ಮಾಡಿದರೆನ್ನ ಕಿಷ್ಕಿಂಧಾಖ್ಯರಾಜ್ಯದಲಿ ॥೨೭॥

ಅತ್ತ ವಾಲಿ ಸಮಸ್ತ ದನುಜರ
ನೊತ್ತವಳಿಸುತ ಬಂದ ಪುರವರ
ಕಿತ್ತ ಸಿಂಹಾಸನದೊಳಾನಿರೆ ಕಂಡು ರೋಷದಲಿ ।
ಸತ್ತುದಾಗಳೆ ಸಹಜ ನಲುಮೆಯು
ಪಿತ್ತ ಕೆರಳಿತು ಕೋಪಮೂಡ
ಲ್ಕೆತ್ತಲೋ ಬೆನ್ನಿತ್ತು ಸಾರ್ದುದು ಪೂರ್ವವಾತ್ಸಲ್ಯ ॥೨೮॥

ವೈರಿಯೊಲು ದಂಡಿಸುತ ರಾಜ್ಯ
ದ್ವಾರದಿಂ ಹೊರವಡಿಸಿ ನಿಜಧನ
ದಾರವೈಶ್ವರ್ಯಗಳ ಕೊಂಡನು ವಾಲಿ ರೋಷದಲಿ ।
ಜಾರಿದೆನು ಭಯದಿಂದ ಕರುಣೆಯು
ಬಾರದಾ ಕಪಿಪತಿಗೆ ಶಾಪದ
ಭಾರದಿಂ ಬರನಿಲ್ಲಿಗೆಂದಾನಿಹೆನು ಗಿರಿಯಲ್ಲಿ ॥೨೯॥

ಎನುತಲೆರಗಲು ನೊಸಲ ನೆಗಹಿದ
ನನಘ ಬಿಡು ಬಿಡು ದುಃಖವೋಡಿತು
ಹನನವಾದನು ವಾಲಿಯಿನ್ನೇನೊಂದೆ ಬಾಣದಲಿ ।
ವಿನುತ ಹರ ವಿಧಿ ಬೆನ್ನ ಬಿದ್ದರು
ತನಗೆ ಬಂದೀ ವಿಪತಿಯಳಿಯದು
ನೆನೆಯಲಾರನುಪಾಯ ಜಯಸಿರಿಯೊಲಿವಳಿನ್ನೇನು ॥೩೦॥

ಮರುಗದಿಹರೇ ಸಖನ ದುಃಖಕೆ
ದುರುಳರವರನು ನೋಡಲಾಗದು
ಪರರ ದುಃಖವೆ ಮಿಗಿಲು ತನ್ನಯ ಕಷ್ಟವೆಳ್ಳನಿತು ।
ಪರುವತಕೆ ಸಮ ಮಿತ್ರ ಶೋಕಂ
ಪರಿಹರಿಪ ಮಾರ್ಗವನೆ ಚಿಂತಿಪ
ನರನೆ ನೇಹಿಗ ಸತ್ಯ ಧರ್ಮವಿದೆಂದನಾ ರಾಮ ॥೩೧॥

ರೂಢಿಯಿಂದಿದನರಿಯಲಾರದ
ಮೂಢಗೇತಕೆ ಮೈತ್ರಿ ಗೆಳೆಯನ
ಮೂಢಮಾರ್ಗವ ತಿದ್ದಿ ಸತ್ಪಂಥದಲಿ ನಡೆಸುವುದು ।
ಹಾಡುವುದು ಸುಗುಣಗಳನವಗುಣ
ಗೂಢದಿಂ ದೊರೆಯುವುದು ಮಿತ್ರನ
ಗಾಢಮಾರ್ಗವು ಕೇಶಪತಿ ಸಹಜಮಿದು ಸರ್ವರಿಗೆ ॥೩೨॥

ಕೊಡುವ ತೆಗೆಯುವ ಶಂಕೆದಾರದೆ
ಕಡು ಹಿತವ ಬಗೆಯುವನು ಕಷ್ಟದಿ
ಬಿಡದೆ ನೂರ್ಮಡಿ ಗುಣದಿ ಮೈತ್ರಿಯ ಬೆಳೆಸುವನು ಸುಗುಣಿ
ನುಡಿಯುತೊಳ್ಳಿತ ಸಮ್ಮುಖದಿ ಮ
ತ್ತೊಡನೆ ಬೆನ್ನೊಳು ಕಪಟಮೆಸಗುವ
ಸುಡುಮೊಗದ ನೇಹಿಗರ ತೊರೆವುದೆ ಪರಮ ಹಿತವೆಂದ ॥೩೩॥

ಪ್ರೀತಿಸುವ ಸಖ ವಿಮಲ ಹೃದಯದೊ
ಳಾತುರದೊಳಿನ್ನೇನ ನೆನೆಯನು
ಪಾತಕವ ಬಗೆಯುತ್ತ ಮರೆಮಾಜುವನು ಕಪಟಸಖ ।
ದೂತ ಶಠ ನೃಪ ಕೃಪಣ ಮಿತ್ರ
ವ್ರಾತ ಪಾತಕ ನಾರಿ ದುರ್ಮತಿ
ಜಾತಿಯಾದೊಡೆ ಶೂಲಸಮ ತೊರೆಯುವುದೆ ಹಿತವೆಂದ ॥೩೪॥

ಆಲಿಸಾದೊಡೆ ರಾಮ ಬಲಯುತ
ವಾಲಿ ಶರವೊಂದರಲಿ ಕೆಡಹುವ
ತಾಲ ವೃಕ್ಷವನೊಂದ ಮತ್ತೀ ದನುಜ ದುಂದುಭಿಯ ।
ಲೀಲೆಯಿಂ ಕೊಂದೊಡನೆ ಬಿಸುಟನು
ವಾಲಿ ಬಲವಿಂತೆಂದು ನುಡಿವೊಡೆ
ಸಾಲದೆನ್ನಯ ಮಾತು ಕೊಲ್ಲುವ ಬಗೆಯ ನೀನರಿಯ ॥೩೫॥

ಉಂಗುಟದೊಳೆತ್ತಿದನು ದುಂದುಭಿ
ಯಂಗ ಬೀಸಾಡಿದನು ನಭದಲಿ
ಭಂಗವಡೆಯುತ ಹತ್ತುಯೋಜನ ಹಾರಿದುದು ಮೇಲೆ ।
ತುಂಗ ವಿಕ್ರಮ ಬಾಣವೇರಿಸು
ತಂಗವಣೆಯಿಂ ಸಪ್ತತಾಲವ
ಭಂಗವಡಿಸಿದ ಚಣದೊಳಚ್ಚರಿಯಾಯ್ತು ಕಪಿಪತಿಗೆ ॥೩೬॥

ವಾಲಿಗಿಂದೇ ಮರಣವಡವಿಯ
ಬಾಳು ಮುಗಿದುದು ಹಲದಿನದ ಹಗೆ
ಕೋಳುವೋದುದು ಸತಿಯ ದುಗುಡದ ಬೇಗೆಯಾರಿದುದು ।
ತಾಳ ವೃಕ್ಷಗಳೇಳನೊಂದೇ
ಕೋಲವೊನೆಯಲಿ ಮುರಿದ ರಘುಪತಿ
ಯಾಳುತನಮಾರ್ಗುಂಟು ವಾಲಿಯ ಜೀವಮಾರಿದುದು ॥೩೭॥

ಅಡಿಗಡಿಗೆ ವಂದಿಸುವ ದೇಹವ
ಕೆಡೆಯುತೆಡಬಿಡದೀಕ್ಷಿಸುತ ನೃಪ
ನೊಡೆಯ ಸುಸ್ಥಿರಮಾಯ್ತು ಮನವೆನಗಿಂದು ಶಾಂತಿಯಲಿ ।
ಬಿಡುತಲಭಿಮಾನ ಸುಖ ಸರ್ವವ
ನಡಿಯೊಳರ್ಪಿಸುತೆನ್ನ ದೇಹವ
ನಿಡುಗೆಡೆದು ಪದಯುಗದಿ ಸೇವೆಯಗೈವೆ ಕರುಣಿಪುದು ॥೩೮॥

ಅಣ್ಣನಹಿತವೆ ತನಗೆ ಹಿತಮಾ
ಯ್ತಿನ್ನು ದೇವರ ಕಂಡೆ ಮೈತ್ರಿಯೊ
ಳುನ್ನತನು ತಾನಾದೆ ಮಾಯಾರಾಧನೆಯು ತರವೆ ।
ಬನ್ನ ಸುಖದುಃಖಗಳ ಮಿಶ್ರಣ
ತನ್ನ ತಾನರಿವನಿತು ಬುದ್ಧಿಯ
ಕಣ್ಣು ಕೆಡುವುದು ದೈವ ದೂರವಿದಹಿತ ಮಾನವಗೆ ॥೩೯॥

ಕೊರಳ ಕೊಯ್ದೊಡಲು ಕನಸುಗಾಣುತ
ಲರಿಯುತೆಚ್ಚರವಡೆದು ಚಿಂತಿಸಿ
ಮರುಗುವುದು ಮಾಯಾ ಪ್ರಪಂಚದ ಮೋಹದೊಂದೆಸಕ |
ಪರಮ ಘನ ನಿಸ್ಸೀಮ ನಿನ್ನಯ
ಚರಣ ಭಕ್ತಿಯ ನೀಡು ಲೋಕೋ
ದರನೆ ಹರಿ ಸಲಹೆಂದು ವೈರಾಗ್ಯದಲಿ ಬೇಡಿದನು ||೪೦||

ಸತ್ಯ ನೀನೆಂದಮಲ ವಚನಗ
ಳುತ್ತಮವು ಮೇಣಾನುವೊರೆದಾ
ಸತ್ಯ ನಿತ್ಯವು ಭಕ್ತಿಯೇ ಪರಮಾರ್ಥ ಕೇಳೆನುತ |
ಸತ್ಯ ಕಾಮನು ನಡೆದ ಕಪಿಯೊಡ
ನೆತ್ತ ಕೋದಂಡವನು ಜೇವಡೆ
ಯುತ್ತ ಕರೆ ವಾಲಿಯನು ಯುದ್ಧಕೆ ಬೇಗ ಸುಗ್ರೀವ ||೪೧||

ಕರೆಯಲಾ ವಾಲಿಯನು ಕಪಿಪತಿ
ಯುರುಬಿ ಘರ್ಜಿಸೆ ಕೇಳ್ದು ದನಿಯನು
ಉರುವ ಕೋಪದಿ ವಾಲಿಪೊರಡಲು ತಾರೆ ತಡೆಯುತಲಿ |
ಸರಿಯದರು ಧುರಕಿಂದು ಗಿರಿಯಲಿ
ಕಿರಿಯ ತಮ್ಮನು ವೀರರಿರ್ವರ
ಕರದ ಬಲದಿಂದುಬ್ಬಿ ಕರೆವನು ನಿನ್ನಸುವನುಗಿಯೆ ||೪೨|

ಧುರ ಭಯಂಕರರವರು ಕೋಸಲ
ನರಪ ತನುಜರು ರಾಮಲಕ್ಷ್ಮಣ
ವರರು ಹೃದಯದೊಳವರ ಜಾನಿಸಿ ಮೋಹ ಮರೆಯೆನಲು |
ತರುಣಿ ಭಯವಿಂತೇಕೆ ರಾಘವ
ನಿರುತ ಸಮದರ್ಶಿನಿ ನಿರಾಮಯ
ಧುರದಿ ಕೊಂದೊಡೆ ನೀಗಿ ಭವವಂ ಮುಕ್ತಿಗೇರುವೆನು ||೪೩||

ಅತ್ತ ನಡೆಯುತ ದೂರದಲಿ ಕರೆ
ಯುತ್ತ ನಿಂದಿರಲನುಜ ಕಂಡನು
ಮತ್ತ ಗಜದೊಲು ಧಾವಿಸಿದ ಕಡುರೋಷದಿಂ ವಾಲಿ !
ಮತ್ತೆ ಖಾಡಾಖಾಡಿಯಲಿ ಕಲೆ
ಯುತ್ತ ಕೈಗಳಚುತ್ತ ತಮ್ಮನ
ಪಿತ್ತವಿಳಿಸುತ ನೆತ್ತಿಯಪ್ಪಳಿಸುತ್ತ ಮರಗಿದನು ॥೪೪॥

ನೊಂದು ತಡೆಯದೆ ಯುದ್ಧ ಮರೆಯುತ
ಲಂದು ಕಾಲ್ದೆಗೆದತ್ತಲೋಡಿದ
ಬಂದು ಸೋದರನಿಂದಲೊಮ್ಮೆಗೆ ಬದುಕಿದೆನು ತಾನು !
ಎಂದ ಮಾತಿಗೆ ಮರುಗಿ ರಘುವರ
ನೊಂದ ಮೈಯನು ಸವರೆ ನೀಗಿದ
ನಂದು ದೇಹಾಯಾಸ ಶಕ್ತಿಯ ಪಡೆದ ಮುನ್ನಿನೊಲು ॥೪೫॥

ಎಲೆಲೆ ಕಪಿಪತಿ ನೀನು ವಾಲಿಯು
ಕಲೆತಿರಲು ಕುರುಹಾಗಲೊಲ್ಲದು
ತಿಳಿಸದಿರೆ ನೀ ಯಮಳರೆಂಬುದನೆಮಗೆ ಪೂರ್ವದಲಿ ।
ಹೊಳೆಯಲಿದೆಕೋ ಪುಷ್ಪಹಾರವು
ತಿಳಿವೆ ನೀನಾರೆಂದು ವಾಲಿಯ
ಕೊಳುಗುಳಕೆ ಕರೆ ಕೊಲುವೆನೀಗಳೆ ಹಗೆಯ ತೋರೆಂದ ॥೪೬॥

ಕರೆದು ವಾಲಿಯು ಮತ್ತೆ ಕಲೆತನು
ಹರಿಯು ಕರಬಲ ಕೆಚ್ಚಿನಿಂದಲಿ
ಮರದ ಮರೆಯೊಳು ನಿಂದು ನೋಡುತಲಿರ್ದನಾ ರಾಮ ।
ಗರುವದಲಿ ಕಾದಿದರು ಛಲದಿಂ
ಪರಚುತೊದೆಯುತ ಗುದ್ದುತಿರಲಾ
ಹರಿಯನಾಘಾತದಲಿ ನೋಯುವ ನೆನೆದು ರಾಘವನ ॥೪೭॥

ಹೊಡೆಯನೇತಕೆ ರಾಮನೆಂದಡಿ
ಗಡಿಗೆ ನೋಡುತಲಿರಲು ಕಾರ್ಮುಕ
ವಿಡಿದು ಸೆಳೆದಾಕರ್ಣಬಾಣನು ವಾಲಿಯೆದೆಗೆಸುತ ।
ಕೆಡಿಹಿದನು ನಿಮಿಷದಲಿ ಹೊರಳುತ
ಪುಡಿಯೊಳುರುಳಿದ ವೀರ, ಶರವಿದ
ಹೊಡೆದನಾವನೊಯೆಂದು ಕಂಡನು ರಾಮಚಂದ್ರಮನ ॥೪೮॥

ಶ್ಯಾಮಗಾತ್ರನು ಸರಸಿಜಾನನ
ರಾಮ ಕೋದಂಡವನು ಪಿಡಿದಭಿ
ರಾಮ ನಿಂದಿರೆ ಚರಣ ಕಮಲದಿ ಚಿತ್ತವಿರಿಸುತ್ತ ।
ಭೂಮಿಯೊಳು ಹೊರಳಿದನು ಪಾಪ ವಿ
ರಾಮವಾರ್ಯ್ಯಂದನನ ನೋಡುತ
ಲಾ ಮಹಾ ಕಪಿವೀರ ಪೇಳ್ದನು ರಘುಪನ ನೋಡಿ ॥೪೯॥

ಧರುಮಕಾರ್ಯ್ಯವತಾರ ರಘುಪತಿ
ಮರೆಯೊಳಿರ್ದು ವ್ಯಾಧನಂದದೊ
ಳಿರಿದೆ ಶರದಿಂದಾವ ಕಾರಣ ಹಗೆಯ ಸಾಧಿಸಿದೆ ।
ಕಿರಿಯನೊಳು ಕೆಳೆ ಹಿರಿಯನೊಳು ಹಗೆ
ತಿರೆಯ ಪಾಲಕ ನಿನಗೆ ಭೇದವೆ
ಧರುಮಗೆಲ್ಲಿಯ ನೀತಿ ತೋರಿದೆ ದೇವ ಹೇಳೆಂದ ॥೫೦॥

ಅನುಜವಧು ಸುತನರಸಿ ಮಿತ್ರನ
ವನಿತೆ ಭಗಿನೀ ಕನ್ನೆಯರು ಸಮ
ನೆನೆವರೇ ಸುಖಮಿವರ ಭೋಗಿಸೆ ತರವೆ ಧರುಮದಲಿ ।
ಅನುಜಸತಿಯಪಹರಿಸಿ ಸತ್ವವ
ಗನಲಗಾಹುತಿಯಿತ್ತೆ ಮರಣವೆ
ನಿನಗೆ ಪ್ರಾಯಶ್ಚಿತ್ತ ತಮ್ಮನ ಕೊಲ್ಲಲೆಳಸಿದಗೆ ॥೫೧॥

ಸ್ವಾಮಿ ನಿನ್ನೊಳು ತರ್ಕವೇ ತವ
ನಾಮ ಜಪಮಾಯ್ತೆನಗೆ ಪಾಪ ವಿ
ರಾಮವಲ್ಲವೆ ನೀನೆ ದರ್ಶವೀಯಲಂತಿಪುದಿ ।
ರಾಮ ಕೋಮಲವಾಣಿಯಿಂದಾ
ಭೀಮ ಬಲನಂ ತಲೆಯ ಸವರುತ
ನೀ ಮಹಾ ನಿಶ್ಚಲದ ಪದವಿಯ ಪಡೆದೆ ತಿಳಿಯೆಂದ ॥೫೬॥

ಜನುಮ ಜನುಮದಿ ಯತ್ನ ಮಾಳ್ಪರು
ಮುನಿಜನರು ತಮ್ಮಂತ್ಯಕಾಲದಿ
ನೆನೆಯೆ ನಾಮವ ನಾಮ ಬಲದಲಿ ಶಿವನು ಕಾಶಿಯಲಿ ।
ಜನಕೆ ಮೋಕ್ಷವನೀವ ಸಮಯದೊ
ಳನಘ ತಾನೇ ಬಂದು ತೋರಿದ
ನೆನಗೆ ಮಂಗಳರೂಪ ಕರುಣದಿ ದೋಷಪರಿಹರಿಸಿ ॥೫೭॥

ಎನ್ನ ಕಣ್ಮುಂದಿರುವ ದೇವನ
ನುನ್ನತದ ವೇದಗಳು ಹೊಗಳುವ
ವಿನ್ನು ಮುನಿಜನಯೋಗಿ ಸಿದ್ಧರು ಜಯಿಸುತಿಂದ್ರಿಯವ ।
ನಿನ್ನ ಮೂರ್ತಿಯನಿರಿಸಿ ಹೃದಯದಿ
ನಿನ್ನ ಕೀರ್ತಿಯ ಹಾಡಿ ನಲಿವರು
ರನ್ನ ಸುರತರುವಿರಲು ಶಾಲ್ಮಲಿಯೇಕೆ ತನಗೇಕೆ ॥೫೪॥

ಹರಿಯೆ ಕರುಣದಿ ನೋಡು ಭಕ್ತನ
ಕರೆಗೆ ಬಂದಿರೆ ಮುಂದೆ ನಿನ್ನಯ
ಚರಣ ಭಕ್ತಿಯ ನೀಡು ಕುಮತಿಯ ಸಲಹು ನೀನೊಲಿದು ।
ತರಳನಂಗದನೆನಗೆ ಸಮಬಲ
ಕಿರುವರೆಯನಾತನನು ನಿನ್ನಯ
ಚರಣದಾಸನ ಮಾಡಿಕೋ ಕೈವಿಡಿದು ಸಲಹೆಂದ ॥೫೯॥

ಸಲಿಸುತೀ ಕಡೆನುಡಿಯ ರಘುಪತಿ
ಸಲಹೆನುತ ನೆನೆಯುತ್ತ ರಾಘವ
ನೊಲವಿನಭಯವ ಪಡೆಯುತಸು ನೀಗಿದನು ಕಪಿಯೂಥ ।
ಸಲಗ ಮಾಲೆಯು ಬೀಳ್ವುದರಿವುದೆ
ಸುಲಭದಿಂದ ಕ್ಲೇಶವಿಲ್ಲದೆ
ತಳೆದ ಮುಕ್ತಿಯ ರಾಮಚಂದ್ರ ಕೃಪಾಪ್ರಸಾದದಲಿ ||೫೬||

# ವಿಶ್ರಾಮ ೨

ಸೂ|| ತಳೆದ ಕಪಿಪತಿ ರಾಜ್ಯಭಾರವ
ಕಳೆದು ವರ್ಷಾಕಾಲ ರಘುವರ
ಕಳುಹಿ ಸೌಮಿತ್ರಿಯನು ವಾನರಪತಿಯ ಕರೆಯಿಸಿದ ||

ವಾಲಿಯಗಲಿದ ವಾರ್ತೆ ಹರಹಿತು
ಕೇಳಿ ಪುರವಾಸಿಗಳು ನೊಂದರು
ತಾಳಿ ದುಃಖವ ತಾರೆ ಬಿಚ್ಚಿದ ಕೇಶರಾಶಿಯಲಿ ।
ವಾಲಿಯಂ ಬಿಗಿದಪ್ಪಿ ಮರೆತು ಮ
ರಾಳಗಮನೆಯು ಮುಖವನೀಕ್ಷಿಸಿ
ನಾಲಿಗೆಯ ಹೊರಚಾಚುತತ್ತಳು ಬಡಿಯುತೆದೆಯನ್ನು ||೧||

ಎಲೆ ರಮಣನೊಳ್ನುಡಿಯ ಕೇಳದೆ
ಸುಳಿಗೆ ಸಿಲ್ಕಿದೆ ಕಾಲವಶದಿಂ
ತಿಳುಹದಂಗದಗೀಗ ಸುರಪುರ ಪಯಣಕೆಯ್ದುವರೆ ।
ಅಳುತಿರುವ ತಾರೆಯನು ಸಂತವಿ
ಸಲಘುಮತಿ ಸುಜ್ಞಾನವೊರೆಯುತ
ಲಳಿಸಿ ಮಾಯೆಯನೊರೆದ ರಾಘವ ತತ್ವಮಾರ್ಗಗಳ ||೨||

ಜಲ ಸಮೀರ ಕ್ಷಿತಿ ಖ ಪಾವಕ
ಮಿಲನದಿಂದಾಯ್ತೀ ಶರೀರವು
ಮಲಗಿಹುದು ಕಣ್ಮುಂದೆ ನಿತ್ಯಸುಜೀವ ಸಾಯುವನೆ ।
ಅಳುವುದಾರ ನಿಮಿತ್ತ ಪೇಳೆನೆ
ಲಲನೆ ಸುಜ್ಞತೆಯಿಂದಲೆರಗುತ
ಜಲಜನಾಭನ ಭಕ್ತಿಯಂ ಬೇಡಿದಳು ವಿನಯದಲಿ ॥೩॥

ಗಿರಿಜೆ ಕೇಳಾ ದೇವ ಹಾಹೆಯ
ತೆರದಿ ಕುಣಿಸುವ ಜಗವ ನಡೆಸುವ
ನೊರೆದ ಸುಗ್ರೀವಂಗೆ ಸಂಸ್ಕಾರಗಳ ಮಾಡಲ್ಕೆ ।
ಹರಿಯನುಜ್ಞೆಯೊಳಂದು ಕಣ್ಣೀ
ರ್ಗರೆಯುತಣ್ಣನ ತನುವ ಚಿತೆಯೊಳ
ಗಿರಿಸಿ ಕರ್ಮವ ಮುಗಿಸಿ ಹಿರಿಯನ ನೆನವುತಿರುತಿರ್ದ ॥೪॥

ತೆರಳು ಪಂಪಾಪುರಕೆ ಲಕ್ಷ್ಮಣ
ಭರದಿ ನೀ ರಾಜ್ಯಾಭಿಷೇಕವ
ಕರಡಿ ಕಪಿವೆರಸುತ್ತ ಸುಗ್ರೀವಂಗೆ ಸಹಿಲದಲಿ ।
ವಿರಚಿಸೈ ಹೋಗೆನಲು ಕರೆಯಿಸಿ
ಪುರಜನರ ವಿಪ್ರರನು ವಾನರ
ವರಗೆ ರಾಜ್ಯವನಿತ್ತು ಸಿಂಹಾಸನದಿ ಮೆರೆಯಿಸಿದ ॥೫॥

ಭರದಿ ಯುವರಾಜ್ಯಾಭಿಷೇಚನ
ತರಳನಂಗದವರಗೆ ಮಾಡಿದ
ಹರಿಗೆ ಸಮಹಿತರಾರು ಸೋದರ ಬಂಧು ವರ್ಗದಲಿ ।
ಪೊರೆವ ತಾಯ್ತಂದೆಯರು ಗುರುಪಿತೃ
ವರರು ನೋಳ್ಪರೆ ದೇವ ಕರುಣದಿ
ಬೆರೆದು ಭಕ್ತರ ಕರೆಗೆ ಕಾಣಿಸಿಕೊಂಡು ಸಲಹುವನು ॥೬॥

ಒಲಿವರಲ್ಲವೆ ಕಾರ್ಯಸಾಧಿಸೆ
ಸುಳಿವರೇ ಜನ ಮತ್ತೆ ದೇವನ
ನಳಿನ ಪದವ ಸ್ವಾರ್ಥಕೋಸುಗ ಬಳಸುವರು ಜನರು ।
ಅಲೆಯುತಿರ್ದನು ವಾಲಿ ಭಯದಿಂ
ಹಳುವದಲಿ ಸುಗ್ರೀವ ಕರುಣದೊ
ಳೊಲಿದು ರಾಜ್ಯವನಿತ್ತು ಸಲಹಿದ ಬಂದು ರಾಘವನು ॥೭॥

ನೊಂದೊಡೇನಚ್ಚರಿಯೆ ಭಜಿಸದ
ಮಂದಿ ರಾಮನ ಮಹಿಮೆಯರಿಯದೆ
ನಿಂದಕರು ಬಿಳದಿಹರೆ ಕಷ್ಟದಿ ಗಿರಿಜೆ ಹೇಳೆನುತ ।
ಅಂದು ಕಪಿಯಂ ಕರೆದು ಧರ್ಮವ
ನಂದದಲಿ ವಿವರಿಸಿದ ಜನುಮದ
ಬಂಧನದ ಮುಕ್ತಿಗಳನೊರೆದನು ರಾಜನೀತಿಯನು ॥೮॥

ಹೊಳೆವ ವಿಮಲ ಸ್ಫಟಿಕ ಶಿಲೆಯಲಿ
ಕುಳಿತು ಮಾತಾಡುತಿರೆ ಕೇಳ
ಲ್ಕೊಲವಿನಿಂ ಮೃಗಪಕ್ಷಿ ಷಟ್ಪದ ರೂಪದಿಂ ಸುರರು ।
ನಲಿಯುತಿರೆ ಸಿದ್ಧಜನ ರಾಮನ
ನಳಿನಪದ ಸೇವೆಯಲಿ ನಿಂದರು
ತಿಳಿಯೆ ಸುಜ್ಞಾನಗಳ ವಿವರವ ರಾಜನೀತಿಗಳ ॥೯॥

ಅನುಜಗೊರೆವನು ಭಕ್ತಿ ವಿರತಿಯ
ನನಘ ಧರ್ಮಪುರಾಣ ಸಂಗತಿ
ಯನುನಯದೊಳಿಂತಿರಲು ಬಂದುದು ಮುಂದೆ ಮಳೆಗಾಲ ।
ಮಿನುಗಿ ಕೋಲ್ಮಿಂಚುಗಳು ಖಡಖಡ
ದನಿಯ ಸಿಡಿಲೊರೆಯುತಿರೆ ಗಳಗಳ
ಜಿನುಗಿ ಮಳೆಗರೆಯುತ್ತ ವರ್ಷಾಕಾಲ ರಭಸದಲಿ ॥೧೦॥

ಗುಡುಗುಗಳ ತಾಳಕ್ಕೆ ನವಿಲುಗ
ಳಡಿಯಿಡುತ ನರ್ತಿಸಲು ಮೇಘದ
ಗಡಣವಂ ನೋಡುತಲಿ ನಲಿವುವು ಸಂತಸವ ತಾಳಿ ।
ಸಡಗರದಿ ಹರಿಭಕ್ತ ದರ್ಶನ
ಕೊಡೆ ಗೃಹಸ್ಥನು ನಲಿವ ತೆರದೊಳು
ಪಡೆದು ಹರ್ಷವ ಕುಣಿವ ಶಿಖಿಗಳ ವತ್ಸ ನೋಡೆಂದ ॥೧೧॥

ನಡೆಯುತಿವೆ ಮೇಘಗಳು ಸಿಡಿಸಿಡಿ
ಸಿಡಿಲು ಘರ್ಜಿಸಿ ವಿರಹವೇದನೆ
ಯೊಡೆಯುತಿದೆ ಹೃದಯುವನು ಸೀತಾರಮಣಿಯನು ತೋರಿ ।
ನಡೆಯುತಡಗುತ ಬಹಳು ದಾಮಿನಿ
ಕೆಡಹಿ ಲೋಕವ ಭಯದಿ ದುರ್ಮತಿ
ಪಡುವನೇ ಭಯುಮುದರ ತೆರದಿಂ ಮಿಂಚುಹೊಳೆವುತಿದೆ ॥೧೨॥

ಸರಿಸರಿದು ಕಾರ್ಮೋಡ ಮಳೆಯನು
ಸುರಿಯುವುದು ಭೂಮಿಯಲಿ ಕೋವಿದ
ಪರಮ ಪಾಂಡಿತ್ಯದಲಿ ನಮ್ರತೆವಡೆವ ರೀತಿಯಲಿ ।
ಗಿರಿ ಶರಾಘಾತವನು ತಡೆಯುತ
ದುರುಳ ನುಡಿಗಳ ಸಾಧು ಸಹಿಸುವ
ತೆರದಿ ಬಗೆಯದನುಚಿತ ನಿಂದಿಹವರರೆ ವಿನಯದಲಿ ॥೧೩॥

ಧನಮದದ ಧನಿಕನೊಲು ಕಿರುನದಿ
ಘನತರದೊಳುಕ್ಕುತಲಿ ಹರಿವುದು
ಘನತೆಯನು ನೀಗುವುದು ನಿವಿಸದಿ ಪೆರ್ಮೆಯುನ್ನುಳಿದು ।
ವನ ಸರೋವರ ಹೊಗಲು ಘರ್ಜನೆ
ಘನತೆಯುಳಿವುದು ಸಾಧು ಸದ್ಗುಣ
ವಿನಯಶೀಲ ವಿಚಾರ ಸುಜ್ಞಾನದಲಿ ನಲಿವಂತೆ ॥೧೪॥

ಹರಿದು ನದಿನದ ಸೇರಿ ವಾರಿಧಿ
ಗರುವ ಮರೆವೊಲು ಮುಕ್ತ ಪುರುಷರು
ಹರಿಯ ಸಾಯುಜ್ಯದಲಿ ಸೇರುತಲಚಲರೆನಿಸುವರು ।
ಧರೆಯ ಮುಚ್ಚಲು ಹಸುರು ಹುಲ್ಲುಗ
ಳರಿಯಲಪ್ಪುದೆ ಹಾದಿಯುದರೊಲು
ದುರುಳವಾದದಿ ಲುಪ್ತಮಪ್ಪುದು ವಿದಿತ ಸದ್ಗ್ರಂಥ ||೧೫||

ಕೇಳುತಿದೆ ಕಪ್ಪೆಗಳ ದನಿ ವೇ
ದಾಳಿ ಮಂತ್ರವನೊರೆವ ವಟುವೊಲು
ಮೇಲೆ ಮೇಲೆ ವಿವೇಕ ಸಾಧಕ ಪಡೆವವೊಲು ತಳಿರು ।
ಸೀಳಿ ವೃಕ್ಷವ ಬರುತಿಹುದು ಮತ್ತಾ
ತಾಳೆ ಮೇಣರ್ಕದೊಳಗೆಲೆಗಳು
ಬಾಳಲಾರದ ತೆರದಿ ನಡೆಯುದು ದುಷ್ಟರುದ್ಯಮವು ||೧೬||

ದೊರೆವುದೇ ಪುಡಿ ತೊಡೆದು ಹೋಗಿರೆ
ಧರುಮ ಕಾಲೆತ್ತುವುದು ಕೋಪದ
ನೆರೆಗೆ ಸಿಲ್ಕುತ ಮತ್ತೆ ಸಸಿಸಂಪದವು ಪೆರ್ಚುವೊಲು ।
ಧರೆಯೊಳುಪಕಾರಿಗಳು ಮೆರೆವರು
ದುರುಳ ಪಾಷಂಡಿಗಳು ನಲಿವರು
ಭರದಿ ಮಿಂಚುಂಬುಳುವು ನಿಶಿಯಲಿ ಹೊಳೆವ ಪರಿಯಂತೆ ||೧೭||

ಹೊಲದ ಕೋಟರವಧಿಕ ಮಳೆಯಲಿ
ಕಳೆದು ಹೆಸರಡಗುವೊಲು ನಾರೀ
ವಲಯ ಕೆಡುವುದು ಪಡೆಯುತ ಸ್ವಾತಂತ್ರ್ಯ ಜಗದಲ್ಲಿ ।
ಹೊಲದ ಕಳೆಗಳನರಿತು ಕಾಲವ
ಕಿಳುವ ರೈತನ ತೆರದಿ ಬುಧಜನ
ಹಳಿವು ಮಾನಮದಾದಿ ತೊರೆವನು ಸುಜ್ಞತೆಯ ಬಲದಿ ||೧೮||

ನೋಡೆಸಿಗದು ಚಕೋರಮದರೊಲು
ಬಾಡದೇ ಸದ್ಧರ್ಮ ಕಲಿಯೊಳು
ಮೂಡದ್ಧೆ ಮರುಭೂಮಿಯೊಳು ತೃಣಮುದರ ತೆರನಂತೆ
ಕಾಡದಾಸೆಯು ಸಾಧು ಹೃದಯವ
ಕಾಡು ಮೆರೆವುದು ಜಂತು ಸಂಕುಲ
ಗೂಡಿ ಸೂನ್ಯಪ ರಾಜ್ಯ ಸತ್ಪ್ರಜೆಯಿಂದ ಪೆರ್ಚುವೊಲು

ಮಳೆಯ್ಕದೆಸೆಯಿಂ ಪಾಂಥದಣಿಯುತ
ನಿಲುವವೊಲು ದಣಿದಿಂದ್ರಿಯಂಗಳು
ತಿಳಿವಡೆದು ವೈರಾಗ್ಯ ವರ್ಷದಿ ಶಾಂತಮಾಗುವುವು ।
ಬೆಳಕಳಿಸೆ ಮೋಡದಲಿ ರವಿಯಿಂ
ಬೆಳಕು ಮೂಡ್ಲುವ ತೆರದೊಳಳಿವುದು
ತಿಳಿವು ಮತ್ತಾ ಸುಜನ ಸಂಗದಿ ಮೆರೆಯೆ ಸುಜ್ಞಾನ ॥೨೦॥

ಮಾರುತಾಘಾತದಲಿ ನೀರದ
ಹಾರಿ ಹರಿದೋಡುವೊಲು ಕುಲದಲಿ
ಸಾರುವುದು ಧನಧರ್ಮ ನೀತಿಯು ದುಷ್ಟ ಮಗನಿಂದ ।
ಆರೆ ವರ್ಷಾಕಾಲ ಶರದೃತು
ವೇರೆ ವಿಕಸಿತ ಪುಷ್ಪಚಯದಿಂ
ಭೂರಿ ಶೋಭೆಯ ಸೂಸುತಿರುವುದ ನೋಡು ಸೌಮಿತ್ರಿ ॥೨೧॥

ಉದಯುಮಾದುದಗಸ್ತ್ಯ ನೀರೊಣ
ಗಿದುದು ಮಾರ್ಗದಿ ಲೋಭಿ ಸಂತಸ
ಹುದುಗಿದೊಲು ಜಲವಾರಿ ನಿರ್ಮಲಮಾಯ್ತು ನೆಲವೆಲ್ಲ ।
ನದಿ ಸರೋವರವಿಹವು ವಿಮಲ ಜ
ಲದಲಿ ತುಂಬುತ ಸಾಧುಸಂತರ
ಹೃದಯ ಮದಮೋಹಗಳ ತೊರೆವಂತೆಸೆದು ಶೋಭಿಪವು ॥೨೨॥

ಸರಸಿ ನದಿಜಲ ಮೆಲ್ಲಮೆಲ್ಲನೆ
ಕರಗುವೊಲಹಂಕಾರ ಬಿಡುವರು
ಪರಮ ಸುಜ್ಞಾನಿಗಳು ಮತ್ತೀ ಶರದಋತು ಶೋಭೆ ।
ಮೆರೆವವೊಲು ಸುಕೃತಂಗಳೆಸೆವುದು
ಧರೆಯು ಮೆರೆವುದು ವತ್ಸ ನೋಡೀ
ಶರದ ಕಾಲದ ಸೊಬಗು ದೆಸೆದೆಸೆಯಲ್ಲಿ ಚೆಲ್ಲಿಹುದು ॥೨೩॥

ಧೂಳು ಕೆಸರಿಲ್ಲದಿರೆ ಭೂಮಿ ವಿ
ಶಾಲ ನಿರ್ಮಲಮಪ್ಪವೊಲು ಭೂ
ಪಾಲ ಮತಿಯುತನಾಗೆ ಕೀರ್ತಿ ವಿಶಾಲನಾಗುವನು ।
ಸೊಲದೇ ಝಷ ನೀರು ಬತ್ತಲು
ಬಾಳಿನಲಿ ಬಹುಸುತರ ಮೂರ್ಖರ
ಸಾಲಿನಲಿ ನೋಯುವ ಕುಟುಂಬಿಯು ಪರಮದುಃಖದಲಿ॥೨೪॥

ಮೋಡವಿಲ್ಲದ ಗಗನ ನಿರ್ಮಲ
ಬೀಡಿನಂತಿಹ ತೆರದಿ ಭಕ್ತರು
ದೂಡುತಾಶಾದಿಗಳ ಕೀರ್ತಿಯ ಮೆರೆವರೀ ತೆರದಿ ।
ನೋಡಲಪರೂಪದಲಿ ಮಳೆ ಬಂ
ದೋಡುವಂತೀ ತಿರೆಯ ಜನರೊಳು
ಮೂಡುವನು ಸದ್ಭಕ್ತನೊರ್ವನೆ ವಿಮಲ ಮಾನಸನು ॥೨೫॥

ಪುರವ ಬಿಡುತಲಿ ವಣಿಕ ತಾಪಸ
ನರಪ ಮೇಣು ಭಿಕಾರಿ ಹರುಷದಿ
ಪೊರಮಡುವವೊಲು ರಾಮಭಕ್ತರು ಪರಮ ಸಂತಸದಿ ।
ಅರಿಯಲಾಶ್ರಮ ಧರ್ಮ ನಡೆವರು
ತೊರೆಯುತ ಶ್ರಮಗಳನು ಪರಸುಖ
ಸರದಿ ಮಜ್ಜನ ಮಾಳ್ಪರೀ ಭೂಮಿಯಲಿ ನಲಿದೊಲಿದು ॥೨೬॥

ಹರುಷವಡೆವುದು ಮತ್ಸ್ಯ ತಾನಿರೆ
ಶರದ ಮಧ್ಯದೊಳದರ ಪರಿಯಲಿ
ಹರಿಯ ಶರಣರು ಬಾಧೆ ವಡೆಯರು ಆವ ಬಗೆಯಿಂದ ।
ಸರಸಿಜಾಕರ ಕಮಲ ವೃಂದದಿ
ಮೆರೆವವೊಲು ಹರಿಯಿರುವ ತೋರುವ
ಪರಮ ನಿರ್ಗುಣ ಬೊಮ್ಮ ಸಗುಣ ಬ್ರಹ್ಮರೂಪದಲಿ ॥೨೭॥

ಮೊರೆದು ಷಟ್ಪದ ವೃಂದ ಖಗಗಣ
ಮೆರೆದು ರಾತ್ರಿಯು ಬರಲು ಕೊರಗುತ
ಲಿರೆ ಚಕೋರಿಯು ಪರರ ಸಂಪದದಿಂದ ಕರುಬವೊಲು ॥
ಸೊರಗಿ ಬಾಯಾರುತ್ತೆ ಚಾದಗೆ
ತೆರದ ಬಾಯಲಿ ನವೆಯುವೊಲು ಬಲು
ನರಳುವರು ಶಿವ ವಿಮುಖ ಮನುಜರು ಸುಖವನರಿಯದೆಯೆ॥೨೮॥

ಶರದ ಬೇಗೆಯ ತೊಡೆವ ನಿಶಿಶಶಿ
ಹರಿಯ ಭಕ್ತರ ದರ್ಶನದಿ ನಿಜ
ದುರಿತ ಹರಿವುದು ರೂಢಿ ಲೋಕದ ಧರ್ಮ ಹರಿಭಜನೆ ।
ನಿರುಕಿಸುತಲಿ ಚಕೋರ ಚಂದ್ರನ
ಹರುಷಗೊಂಬುದು ಸಾಧು ಮುನಿಜನ
ಚರಣ ದರ್ಶನದಿಂದ ಸಂತೋಷವನು ಪೊಂದುವರು ॥೨೯॥

ವಿಷ ಮಶಕಗಣ ಶರದ ಶೀತಕೆ
ಮಸಗುವೊಲು ಭೂಸುರರ ನಿಂದಿಸಿ
ನಶಿಸಿಕೊಂಬರು ಕುಲವ ದುರ್ಜನ ವೃಂದ ನಿಜ ಗುಣದಿ ।
ನಶಿಸುವುವು ವಿಷಜೀವಿ ಸಂಕುಲ
ವುಸುರು ದೊರೆಯುತ ಶರದೊಳದರೊಲು
ನಶಿಸುವುವು ಸಂದೇಹ ಸದ್ಗುರು ಮಿಲನದಿಂದೆಮಗೆ ॥೩೦॥

ಸರಿಯೆ ವರ್ಷಾಕಾಲ ನಿರ್ಮಲ
ಶರದ ಋತು ಬರವಾಯ್ತು ಕಾಣೆನು
ಧರಣಿಜೆಯ ತಾವನ್ನು ಕುಶಲವನರಿಯೆ ನಾನಿನ್ನು ।
ಅರಿದೆನಾದೊಡನೊಂದು ಬಾರಿಗೆ
ಸರಿದು ಮೃತ್ಯುವ ನಿಮಿಷದಲಿ ತುಂ
ಡರಿಸಿ ಸೀತೆಯ ತರುವೆನೀ ಕೋದಂಡಕಿದಿರಾರು ॥೩೧॥

ಜೀವದಿಂದಿರೆ ಸೀತೆ ಕರೆತಹೆ
ನಾವ ಬಗೆಯಿಂದಾದೊಡಂ ಸು
ಗ್ರೀವ ಪುರ ಸತಿ ರಾಜ್ಯಕೋಶವ ಪಡೆದು ಮರೆತಿಹನು ।
ಈ ವಿಶಿಖ ವಾಲಿಯನು ಕೊಂದಂ
ತಾ ವಿಕಳನಂ ಕೊಲದೆ ಬಿಡುವುದೆ
ಜೀವದೊರೆವನು ಬಿದ್ದು ಕೋಪಾಗ್ನಿಯಲಿ ಕಪಿಯೆಂದ ॥೩೨॥

ಅವನ ಕೃಪೆಯಿಂ ಮೋಹ ಮದ ನಶಿ
ಸುವುವು ಮತ್ತವಗೆಲ್ಲಿ ಕೋಪವು
ಬುವಿಗೆ ತೋರುವನಿಂತು ಲೀಲೆಯನೆಂದ ಶಂಕರನು ।
ರವಿಕುಲಜನೀ ಕೃತಿಯ ಸುಜ್ಞರ
ರಿವರು ಚರಣಪ್ರೀತಿವಡೆಯುತ
ಲವನ ಕೋಪವನರಿತು ಲಕ್ಷ್ಮಣ ಧನುವ ಕೈಗೊಂಡ ॥೩೩॥

ಮನಕೆ ಶಾಂತಿಯನೊರೆದು ರಘುವರ
ನನುಜ ಕೋಪವ ನಟಿಸಿ ಕರೆತಾ
ಘನಗುಣನು ಸುಗ್ರೀವ ಹಿಂಸಿಪುದೆಮಗೆ ತರವಲ್ಲ ।
ಎನುತಲಿತ್ತಲು ಕಳುಹಲತ್ತಲು
ಹನುಮ ಭಯದಿಂದೆಚ್ಚರಿಸಿದನು
ಸನಿಹಕೈದಿಯಿದಾವ ಕಾರ್ಯವ ಬಗೆದೆ ಮರವೆಯಲಿ ॥೩೪॥

ಎನಲು ಭೀತಿಯು ತಾಳ್ದು ವಿಷಯಗ
ಳೆನಗೆ ಮರುಳೊಡ್ಡಿದುವು ಮರೆದೆನು
ಹನುಮ ದೂತರನಟ್ಟಿ ವಾನರಪಡೆಯ ಬರಮಾಡು।
ಜನಕಜೆಯನರಸಿಸುವೆ ವಹಿಲದೊ
ಳನಘ ಕರೆಸೈಯೆನಲು ಸರ್ವರ
ಹನುಮ ದಿನಹದಿನೈದರಲಿ ನೆರೆಸಿದನು ನಗರಿಯಲಿ ॥೩೫॥

ಬರುವ ವಾನರ ಯೂಥರಂ ಸ
ತ್ಕರಿಸುತವರವರುಚಿತವರಿಯುತ
ಲುರುವ ಕಜ್ಜದ ಬಗೆಯನೊರೆಯುತಲಿರಲು ಕಪಿಪಡೆಯು ।
ಅರಿತು ಮಾರುತಿಗೆರಗಿ ರಾಮನ
ಚರಣ ಸೇವೆಯೊಳಿಮ್ಮ ಮೀರುವ
ಪುರುಷರಾರೀ ಕಡುಹ ಬಲ್ಲವರಾರೆನುತ ಹೊಗಳುತಿಹರು ॥೩೬॥

ವೀರ ಲಕ್ಷ್ಮಣ ಬಂದ ಕಾರ್ಮುಕ
ಕೇರಿಸುತ ಬಾಣವನು ಕೆಂಡವ
ಕಾರಿ ಕೋಪವ ತೋರಿ ನಿಂದೊಡನರಿತು ಕಪಿನಿಕರ ।
ಜಾರಿದುದು ಭೀತಿಯಲಿ ದೆಸೆದೆಸೆ
ಸಾರಿ ಬಾಯಾರುತ್ತ ನಾಚುಗೆ
ಯೇರಿ ನಡುಗುತಲಡಗಿ ನಿಂದರು ಮುಖವ ತೋರಿಸದೆ ॥೩೭॥

ಧನುವಿಗೇರಿಸಿ ಬಾಣ ಪುರವ
ನ್ನನಲಗಾಹುತಿಯೊವೆನೆನುತಿರೆ
ಮನದ ಭಯದಿಂದೊರಲೆ ಪುರಜನ ಬಂದನಂಗದನು ।
ವಿನಯದಿಂದೆರಗಿದೊಡೆ ಮನ್ನಿಸಿ
ಮುನಿಸದೊರೆದನು ಧೈರ್ಯವೊರೆಯು
ಲ್ಕನುವನರಿಯದೆ ನಡುಗಿ ತಳಮಳಗೊಂಡ ಸುಗ್ರೀವ ॥೩೮॥

ಹನುಮ ತಾರಾಸಹಿತ ಕಾಣಿಸಿ
ವಿನತಿಯಂ ಮಾಡೆನಲು ಮಾರುತಿ
ಸನಿಹಕೆಯ್ದುತ ರಾಮಗುಣ ಕೀರ್ತನದಿ ಹೊಗಳುತಲಿ |
ವಿನಯದಿಂದರಮನೆಗೆ ಕರೆತಂ
ದನಘ ಪದಯುಗ್ಮಗಳ ತೊಳೆಯುತ
ಮಣಿವ ಸುಗ್ರೀವನನು ಮನ್ನಿಸಿ ರಾಮನುಡಿಯೊರೆದ ||೩೯||

ಎರಗಿ ಕರವಿಡಿದಪ್ಪಿ ಕಪಿಪತಿ
ಯೊರೆದ ಲಕ್ಷ್ಮಣ ವಿಷಯಸುಖಸವು
ವರಿಯೆ ಮುನಿಮನ ಮೋಹಗೊಳಿಪುದು ಚಣದೊಳಾವರಿಸಿ |
ನೆರೆದಿಹರು ವಾನರರು ರಾಘವ
ನುರುವ ಸೇವೆಯನೆಸಗೆ ಬಂದಿರೆ
ಹರಿಯ ಸಾನ್ನಿಧ್ಯವನು ಸೇರುವೆನಿಂದು ನಡೆಯೆಂದ ||೪೦||

ನಡೆದು ಸುಖದಿಂದಂಗದಾದಿಯು
ಪಡೆವೆರಸಿ ಸುಗ್ರೀವ ಲಕ್ಷ್ಮಣ
ತಡೆದು ರಕ್ಕಸ ಬಲವ ಸೀತೆಯ ತಹೆನೆನುತ ಬಂದು |
ನಿಡುಗೆಡೆದು ಕ್ಷಮಿಸೆಂದು ಬೇಡಲು
ಕೊಡಹಿ ಧೂಲಿಯ ಕೃಪೆಯೊಳೆತ್ತಿದ
ನಡಗಿಸುತ ಕೋಪವನು ನಸುನಗೆ ಮೊನೆಯ ಬೀರುತಲಿ ||೪೧||

ಎಣಿಸದಿರು ದೋಷವನು ವಾನರ
ನಣಲ ಮುರಿಯದಿರೆಲೆಲೆ ಕರುಣಾ
ಮಣಿಯೆ ಕಾಮಕೆ ವಿವಶವಾದೆನು ಪಶು ವಿಮೋಹದಲಿ |
ವನಿತೆನಯನ ಕರಾಲ ಕತ್ತರಿ
ಮಣಿಯದಿಹರೇ ವಿಷಯ ವಿವಶರು
ಮುನಿಯದಿರು ತಮಮನ್ನೊದೆದು ಸನ್ಮತಿಯನರಿತಿಹೆನು ||೪೨||

ಸಿಲುಕಿ ಲೋಭಕೆ ನವೆಯುದಿಹ ನರ
ನಿಳೆಯೊಳಗೆ ಪಾವನನು ವಿಷಯಕೆ
ಹೊಳಕೆ ಬಹುದೇ ಸಾಧಕನು ಮುಖದಿರುಹುವನು ಸುಖಕೆ ।
ತಿಳಿಯೆ ನಿನಗವ ಹೊಣಕೆ ಹರಿ ನೀ
ನೊಲಿಯೆ ಲೋಕದ ಸುಖವು ಬೇಹುದೆ
ಸಲಹು ಸಲಹೆನೆ ಮುಗುಳುನಗುತಲಿ ರಾಮ ನೋಡಿದನು ॥೪೩॥

ಭರತನೊಲು ನೀ ಪ್ರೀತಿಪಾತ್ರನು
ಧರಣಿಜೆಯನರಸಲ್ಕೆ ವಹಿಲದಿ
ಚರರ ಕಳುಹೈ ತಂದೆ ಯುಕ್ತಿಯನೊರೆದು ಬೆಸಸೆನಲು ।
ನೆರೆದುದಾಗಳು ಬಂದು ಕಪಿಪಡೆ
ಪರುವತಾಕಾರದಲಿ ರಾಮನ
ಚರಣಕಮಲದಿ ನೊಸಲ ಚಾಚಿದುವಂದು ಭಕ್ತಿಯಲಿ ॥೪೪॥

## ವಿಶ್ರಾಮ ೩

ಸೂ ॥ ಕರೆಸಿ ಕಪಿಪಡೆಯಟ್ಟಿ ದೆಸೆದೆಸೆ
ಗರಸೆ ಸೀತೆಯ—ಪಯಣಗತಿಯಲಿ
ಶರಧಿಯಂ ಸೇರಿದರು ಜಾಂಬವ ಹನುಮದಾದಿಗಳು ॥

ದೇವಿ ನೋಡಿದೆ ನಾನು ಕಪಿಸೇ
ನಾವಳಿಯನದ ನೆಣಿಸಲಾಪುದೆ
ದೇವಿ ಸೀತಾನ್ವೇಷಣಕ್ಕನುವಾಗಿ ನೆರೆದಿರಲು ।
ತೀವಿದುತ್ಸಹದಿಂದ ರಾಮನ
ಭಾವನೆಯ ಮನದಂದು ಲೋಕದಿ
ಪಾವನರು ತಾವೆಂದು ಬಗೆದರು ರಾಮಕೃಪೆಗಳಿಸಿ ॥೧॥

ಹರಿಯು ಕುಶಲ ಪ್ರಶ್ನೆ ಮಾಡದ
ಕರಡಿ ಕಪಿಯಾರಿಲ್ಲವುವರೊಳು
ಹರಿಗೆ ದೊಡ್ಡಿತೆ ವಿಶ್ವರೂಪಿಗೆ ಸರ್ವಚೇತನಗೆ ।
ಭರದಿ ನಿಂದಿರಲಾತುರದಿ ಕಪಿ
ಯೊರೆದ ಘನಕಾರ್ಯವಿದು ನಿಮ್ಮಯ
ಪರ ಸಹಾಯದೊಳರಸಿ ಸೀತೆಯ ಪಡೆವುದಾವಿಂದು ॥೨॥

ಅವನಿಜಾನ್ವೇಷಣವ ಗೈವುದು
ದಿವಸ ಮೂವತ್ತರೊಳು ಬಹುದಿ
ನ್ನವಧಿ ಮೀರಲು ಮರಣದಂಡನೆ ನಿಮಗೆ ತಪ್ಪದಲ ।
ಜವದೊಳೈದಿರಿಯೆನುತ ಹೊಗಳುತ
ಲವರ ಕಳುಹುತ, ಜಾಂಬವಾಂಗದ
ಪವನಸುತ ನಳನೀಲ ಮೊದಲಾದವರ ಬರಮಾಡಿ ॥೩॥

ಇನಕುಲೋತ್ತಮನರಸಿಯಂ ದ
ಕ್ಷಿಣದೊಳರಸಿರಿ ಲಂಕೆಯುಲಿ ರಾ
ವಣನ ರಾಜ್ಯವ ಬಿಡದೆ ಧೈರ್ಯದಿ ಹುಡುಕಿ ಜಾನಕಿಯ ।
ಜನರ ಮುನಿಗಳ ಕಂಡುಕೇಳ್ದರ
ವಿನಯದಿ ವಿಚಾರಿಸುತ ಸೀತಾ
ವನಿತೆಯಿರವನ್ನರಿತು ಬರುವುದು ಕುರುಹ ತೋರುವುದು ॥೪॥

ಅನಲನುರದೊಳು ರವಿಯ ಬೆನ್ನೊಳು
ಮಣಿದಿರಲ್ಕದನರಿತು ದೋಷವ
ಗಣಿಸದೀ ರಘುರಾಮ ಕಾರ್ಯವ ಮಾಡಿ ಭಕ್ತಿಯಲಿ ।
ಘನವೆ ಮಾಯಾ ದೂರಗೀ ಭವ
ಜನಿತ ದುಃಖವು ಸೋಂಕಲರಿವುದೆ
ವನಜನಾಭನ ಭಜನೆಯೇ ಸಾರ್ಥಕವು ಜೀವರಿಗೆ ॥೫॥

ಮರೆಯುತಿತರ ಸಮಸ್ತ ಕಾರ್ಯವ
ಹರಿ ಭಜನ ಸುಸ್ಮರಣವಂದನ
ವರಿದ ಪದಪದ್ಮಾನುರಾಗಿಯೆ ಪರಮ ಪಾವನನು ।
ಎರಗಿ ರಾಮ ಸ್ಮರಣೆಯಿಂ ಕಪಿ
ವರರು ಮಾರುತಿ ಸಹಿತ ಜೈಯೆಂ
ದೆರಗೆ ಪವನಜನಿಂದ ಜಯಮಹುದೆಂದು ಹರಿತಿಳಿದು ||೬||

ಕರೆದು ಕರತಾಮರಸವಿರಿಸುತ
ಶಿರದೊಳಾಶೀರ್ವದಿಸಿ ಕೊಟ್ಟನು
ಬೆರಳ ಮುದ್ರಿಕೆಯನ್ನು ಮಾರುತಿ ಸೀತೆಯಂ ಕಂಡು ।
ವಿರಹದಿರಗಳ ತಿಳುಹಿ: ವೇದನೆ
ಯುರುಹಿ ಶೀಘ್ರದಿ ಕಳುಹೆ ಬಹುದೈ
ತರಳ ಹೋಗೆನೆ ಹಿಗ್ಗಿ ನಡೆದನು ರಾಮ ಸ್ಮರಣೆಯಲಿ ||೭||

ಅಖಿಳ ಲೋಕಾವರಣ ಸುರ ರ
ಕ್ಷಕನು ರಕ್ಷಾಭಾರ ಮಾರ್ಗದ
ಸಕಲ ಧರ್ಮವ ಬಲ್ಲನವರೊಲು ನಡೆವ ರಾಘವನು ।
ಪ್ರಕಟ ಕಂಟಕ ವನ ಸರೋವರ
ವಿಕಟ ಗಂಹರ ಗಿರಿ ಗುಹಾಂತರ
ನಿಖಿಳ ನದಿನದ ಹೊದರುಗಳನರಸಿದುದು ಕಪಿವೃಂದ ||೮||

ಕಂಡೊಡನೆ ರಕ್ಕಸರ ಕೆಡುಹುತ
ದಿಂಡುಗೆಡೆವರು ನಿಜವೊರೆಯುದರ
ತುಂಡರಿಸಿ ಹುಡುಕುತ್ತ ಕಾನನ ಮಾರ್ಗದಲಿ ನಡೆದು ।
ಕಂಡರಾದೊಡೆ ಸಾಧು ವೃಂದವ
ಮಂಡೆಯಾನುತ ಬೇಡುವರು ಭಯ
ಗೊಂಡು ಜಾನಕಿಯಿರವ ಕಾಣದೆ ವನದೊಳಲೆದಾಡಿ ||೯||

ಅಲೆದಲೆದು ಬಾಯಾರಿ ಢಗೆಯುಲಿ
ಜಲವ ಕಾಣದೆ ಬೀಳೆ – ಮಾರುತಿ
ಸುಲಭದಲಿ ಮೃತಿಯಹುದೆ ತಮಗೆಂದರಿದು ಚಿಂತಿಸುತ।
ಅಳಲ ಸೈರಿಸಿ ಶಿಖರ ಪರ್ವತ
ಗಳಲಿ ದೆಸೆದೆಸೆಗಳನು ನೋಡುತ
ನೆಲದಿ ಕಂಡನು ಬಿಲವನೊಂದನು ಮನದ ಕೌತುಕದಿ ॥೧೦॥

ಬಕ ಚಕೋರ ಮರಾಳ ಶುಕಪಿಕ
ವಿಕಿರಿಯುತಲೊಳಹೊಗಲು ವಾನರ
ನಿಕರ ನಿಲಿಸುತ ತೋರ್ದನೆಲ್ಲವ ಬಿಲದ ಬಗೆಗಳನು।
ಭಕುತನಂ ಮುಂದಿಟ್ಟು ಹೊಕ್ಕುದು
ಸಕಲ ವಾನರ ವೃಂದವಿದಿರೊಳು
ಪ್ರಕಟಮಾದುದು ಪುಷ್ಪವಾಟಿಕೆ ಸೊಬಗ ಸೂಸುತಲಿ ॥೧೧॥

ಅರಳಿ ನಗುತಿಹ ಕಮಲವೆಸೆಯುವ
ಸರಸಿಜಾಕರ ಮೇಲೆ ಗಗನ
ಕ್ಕೆರಗಿ ತೋರುವ ಸೌಧ ಸನಿಹದೊಳೊರ್ವ ತಾಪಸಿಯು।
ಬರುವ ಕಪಿಪಡೆಯನ್ನು ಮನ್ನಿಸಿ
ಪರಿಮಳೋದಕ ಸವಿ ಫಲಂಗಳ
ತರಿಸಿ ಕೊಡುತುಪಚರಿಸುತಾಯಸಗಳೆದಳಾ ಸಾಧು ॥೧೨॥

ಮಿಂದು ಜಲವಂ ಕೊಂಡು ಫಲವಂ
ತಿಂದು ವಿಶ್ರಮಿಸುತಿರೆ ಯೋಗಿನಿ
ಯೆಂದಳವರಿಗೆ ತನ್ನ ಚರಿತಾಸಾರವೆಲ್ಲವನು।
ಇಂದೆ ತೆರಳುವೆ ರಾಮಸನ್ನಿಧಿ
ಗೆಂದು ಕಣ್ಗಳ ಮುಚ್ಚಿ ಸೀತೆಯ
ನ್ಮಂದಿರವ ಕಾಣುವಿರಿ ಬೆದರದಿರೆಂದು ಹೇಳಿದಳು ॥೧೩॥

ನಡೆದಳತ್ತಳು ರಾಮ ಪದದಲಿ
ಕೆಡೆದು ದೇಹವ ಹಲವು ಪರಿಯಿಂ
ದೆಡಬಿಡದೆ ಹೊಗುಳುತ್ತ ಭಕ್ತಿಯ ಸೂರೆ ಮಾಡಿದಳು ।
ಉಡುಗಿ ಕಂಪಿಸಿ ರಾಮಕೃಪೆಯನು
ಪಡೆದು ಬದರೀನಾಥ ಸನ್ನಿಧಿ
ಯೆಡೆಯ ಸಾರ್ದಳು ರಾಮನಾಮವ ನೆನೆದು ಹೃದಯದಲಿ॥೧೪॥

ಜಲಧಿಯೆಡೆಯೊಳು ತನ್ನ ಮನರಿಯುತ
ಕಳೆದುದವಧಿಯು ರಾಮಕಾರ್ಯ
ಕ್ಕಳಿವು ತಲೆದೋರಿದುದೆ ಹಾಯೆಂದೊರೆದನಂಗದನು ।
ಅಳಿವುವೆನಗಿನ್ನು ಭಯ ತೆರದಲಿ
ಇಳೆಯ ಮಗಳೆಲ್ಲಿಹಳೊ ಕಪಿಪತಿ
ಕೊಲುವ ಹಿಂದಿರುಗಲ್ಕೆ ಬರಿಗೈಯಿಂದಲಾವೆಂದ ॥೧೫॥

ಜನಕನಳಿದಾಗೆನ್ನನುಳುಹಿದ
ಇನಕುಲೋತ್ತಮ ಕರುಣಗರೆಯುತ
ಲೆನಗೆ ತಪ್ಪದು ಮರಣವಹ ಸುಗ್ರೀವ ಕೊಲದಿಹನೆ ।
ಎನಲು ಜಾಂಬವನಂಗದನ ಕರೆ
ದನಘ ನೀತಿಗಳೊರೆದು ರಾಮನ
ಘನ ಮಹಿಮೆಯಿಂತೆಂದು ಪೇಳ್ದನು ಕತೆಗಳೊರೆಯುತಲಿ ॥೧೬॥

ನರನೆ ರಾಘವನಜಿತನಭವನು
ಪರಮ ನಿರ್ಗುಣ ಬೊಮ್ಮನವನಿಗೆ
ಚರಣ ಸೇವಕರಾವು ಸಗುಣ ಬ್ರಹ್ಮ ಪೂಜಕರು ।
ಧರಣಿ ಗೋದ್ವಿಜ ದೇವ ಕಾರಣ
ಹರಿ ನಿಜೇಚ್ಛೆಯೊಳವತರಿಸುವನು
ಭರದಿ ಮಾಡಿರಿ ಸಗುಣ ಭಜನೆಯ ಮೋಕ್ಷಸುಖದೊರೆದು ॥೧೭॥

ಹರಿಗುಣವ ಬಹುವಿಧದಿ ಬಣ್ಣಿಸು
ತಿರುವ ಸಮಯದಿ ಕೇಳಿ ಗಂಹರ
ದೊರೆದು ಮೆಲನೆ ಬಂದ ಖಗ ಸಂಪಾತಿ ನೋಡಿದನು ।
ನೆರೆದಿರುವ ಕಪಿ ಪಡೆಯ ಕಾಣುತ
ಹರನು ಕರುಣಿಸಿ ಕೊಟ್ಟ ಭೋಜನ
ಪರವನೆನುತಲಿ ಹಿಗ್ಗಿ ನಲಿದನು ಹಸಿವಿನಿಂದಳಲಿ ||೧೮||

ನೋಡಿ ಗೃಧ್ರನ ಕಪಿಗಳಿದ್ದುವು
ಆ ಥಗೆಯನರಿಯುತ್ತ ಜಾಂಬವ
ಬಾಡಿದನು ದುಃಖದಲಿ ಕಪಿಗಳ ಹೇಡಿತನವರಿತು ।
ನಾಡೆ ರಘುಪತಿ ಸೇವೆಯಲಿ ಹೋ
ಗಾಡಿದನು ದೇಹವ ಜಟಾಯು ಸ
ಗಾಢಿಕೆಯಲವ ಧನ್ಯ ಸಮರಾರೆಂದನಂಗದನು ||೧೯||

ರಾಮ ಕಾರ್ಯ ನಿಮಿತ್ತ ಜೀವವಿ
ರಾಮವಾದುದೆ ಪಕ್ಷಿಗೆನುತಿರೆ
ಭೂಮಿಗೊರಗಿದನಳುತಲಾ ಸಂಪಾತಿ ದುಃಖದಲಿ ।
ಹಾ ಮಹಾದೇವೆನುತ ಕೇಳಿದ
ನಾ ಮಹಾ ಖಗನಳಿದನೇ ರಿಪು
ಭೀಮ ವಿಕ್ರಮ ಸರಿದನೇ ಹಾಯೆಂದು ಬರುತಿರಲು ||೨೦||

ಖಗನ ಕಂಡೋಡುತಿರೆ ಕಪಿಗಳ
ಬಗೆಯನರಿಯುತ ತಡೆದು ಭೀತಿಯು
ನೊಗೆದು ನಿಲ್ಲಿರಿ ಭಾಷೆಯಿದೆಕೋ ಪೇಳಿ ವಾರ್ತೆಗಳ ।
ಖಗ ಜಟಾಯುವಿನಣ್ಣ ನಾನೆನೆ
ರಘುವರನ ಚರಿತೆಗಳನೊರೆದೊಡೆ
ಮುಗಿದು ಕೈಗಳ ಹೊಗಳಿತುತಿಸಿದ ರಾಮ ಮಹಿಮೆಗಳ ||೨೧||

ಜಲಧಿತಟಕೊಯ್ದೆನ್ನ ಕರುಣದೊ
ಳಿಳುಹಿ ತರ್ಪಣವೀವೆ ತಮ್ಮನಿ
ಗೊಲಿದು ಮತ್ತಾನೊದಗಿ ತೋರುವೆ ಮಾರ್ಗ ಪಯಣಕ್ಕೆ ।
ಎಳೆಯ ತಮ್ಮ ಜಟಾಯು ಜವ್ವನ
ಬಲದಿ ಹಾರಲು ಸೂರ್ಯತಾಪದಿ
ಬಳಲುತಿಳಿದನು ಪೆರ್ಮೆಯಿಂದಾಂ ನೆಗೆದೆನಾಗಸಕೆ ॥೨೨॥

ಹಾರಿದೆನು ರವಿಯೆಡೆಗೆ ಪಕ್ಷಗ
ಳಾರಿದುವು ಸೂರ್ಯಾಗ್ನಿ ಹುತದಲಿ
ಚೀರುತಲಿ ಧರೆಗುರುಳೆ ಚಂದ್ರಮನೆಂಬ ಋಷಿಕಂಡು ।
ಆರಯಿದು ಸಲಹಿದನು ಸನ್ಮತಿ
ತೋರಿ ಸುಜ್ಞಾನೋಪದೇಶದಿ
ಮಾರಮಣನವತಾರ ಕಾರಣವೊರೆದನೆನಗಂದು ॥೨೩॥

ಧರಣಿಜೆಯ ಕದ್ದೊಯ್ದನಾಗಳು
ದುರುಳ ರಕ್ಕಸರೊಡೆಯ ಸತಿಯ
ನ್ನರಸಲಟ್ಟುವ ವಾನರರನಾ ದೂತದರ್ಶನದಿ ।
ಪರಮಪಾವನನೆನಿಸಿ ನೀನೆಂ
ದೊರೆದಿಹನು ನುಡಿಸತ್ಯಮಾದುದು
ಹರಿಯ ಕಾರ್ಯವನೆಸಗಿ ಭರದಿಂದೆಂದ ಸಂಪಾತಿ ॥೨೪॥

ಅದಕೊ ಹೊಳೆಯುವುದಾ ತ್ರಿಕೂಟದಿ
ವಿದಿತ ಲಂಕಾನಗರವಿರುತಿಹು
ದದಕೆ ರಾವಣನೊಡೆಯನಲ್ಲಿಯಶೋಕವನವಿಹುದು ।
ಅದರೊಳಿಹಳಾ ಸೀತೆ ದುಃಖದಿ
ಕುದಿದು ಕಂದಿಹಳವಳ ನೋಡುವೆ
ನದನು ಕಾಣಿರಿ ನೀವು ಗೃಧ್ರದ ದೃಷ್ಟಿತೀಕ್ಷ್ಣವಲ ॥೨೫॥

ನಾನು ವೃದ್ಧನು ಶಕ್ತಿಗುಂದಿಹೆ
ನೇನಮಾಡಲಿ ಜಲಧಿ ಲಂಘಿಸಿ
ವಾನರರೆ ನಿಮಗೇನಸಾಧ್ಯವೆ ನೂರುಯೋಜನವು ।
ಜ್ಞಾನ ಧೀಮಂತರಿರೆ ಹಾರುತ
ಲಾ ನರೋತ್ತಮ ಸೇವೆಗೈವವ
ನೇನು ಧನ್ಯನೊ ಮಾನ್ಯನವನಿಗೆ ಜಗದಿ ಸಮರಾರು ॥೨೬॥

ನೋಡುತೆನ್ನನು ಧೈರ್ಯವಡೆಯಿರಿ
ಮೂಡಿದುದು ಮುನ್ನಿನೊಲು ದೇಹವು
ಕೂಡಿದುವು ಪಕ್ಷಗಳು ರಘುಪತಿ ಕೃಪೆಗೆ ಮಿತಿಯುಂಟೆ ।
ದೂಡುತಾಲಸ್ಯವನು ಜಾನವ
ಮಾಡಿ ರಾಘವನಾಮ ಭಯದಲಿ
ಖೋಡಿಯಾಗಲುಬಹುದೆ ರಾಮನ ಭಕ್ತರಿರೆ ನೀವು ॥೨೭॥

ಇಂತೊರೆದು ಸಂಪಾತಿ ತೆರಳಲ
ನಂತರಂ ಕೌತುಕದಿ ಕಪಿಪಡೆ
ಚಿಂತಿಸುತ ಹೇಳಿದುವು ತಮ್ಮಯ ದೇಹ ಬಲಗಳನು ।
ಎಂತು ಲಂಘಿಸಲಹುದು ವೃದ್ಧನು
ಪಿಂತೆ ಬರಲರಿಯೆನು ಸಮುದ್ರವ
ನೆಂತು ಹಾರಲಿ ಹೋಯ್ತು ಜವ್ವನವೆಂದ ಜಾಂಬವನು ॥೨೮॥

ಬಲಿಯ ಬಂಧಿಸುವಾಗ ದೇವನು
ಬೆಳೆದ ಬಹು ಘನವಾಗಿ ವರ್ಣಿಸ
ಲಳವೆ ತಾಸೆರಡರಲಿ ನಾನೇಳು ಪ್ರದಕ್ಷಿಣೆಯ ।
ಸುಲಭದಿಂ ಗೈದೆನೆನೆ ಜಾಂಬವ
ಜಲಧಿಯಂ ಲಂಘಿಸುತ ಹೋಗುವೆ
ಸಿಲುಕದೆನಗುಂ ಹಿಂದೆ ಬರುವುದಕೆಂದನಂಗದನು ॥೨೯॥

ಒಡೆಯ ನೀನು ಸಮಸ್ತ ವಾನರ
ಪಡೆಗೆ ಕಳುಹುವುದುಚಿತವೇ ನೀ
ಕಡುಗಲಿಯು ಬಲ್ಲೆನದ ಲಂಘಿಸಲರಿವೆ ನೀನೆನುತ ।
ಕಡೆಗೆ ಮಾರುತಿಯನ್ನು ನೋಡುತ
ನುಡಿಯದಿಹೆ ಮೌನದಲಿ ಶೌರ್ಯದಿ
ಪೊಡವಿಯಲಿ ಸಮರಾರು ಬುದ್ಧಿ ವಿವೇಕದಲಿ ನಿನಗೆ ॥೩೦॥

ನಿನಗಸಾಧ್ಯದ ಕಾರ್ಯವಾವುದು
ಜನುಮವೇ ರಘುರಾಮ ಸೇವೆಗೆ
ಜನಿತಮಾದುದುಯೆನಲು ಜಾಂಬವ ಬೆಳೆದ ಹನುಮಂತ ।
ಕನಕವರ್ಣ ಶರೀರ ಕಾಂತಿಯು
ಹೆಣೆದು ಗಿರಿಪತಿಯಂತೆ ನಿಂದನು
ವನಧಿಯಂ ಲಂಘಿಸುವೆನೆಂದನು ಸಿಂಹನಾದದಲಿ ॥೩೧॥

ರಾವಣನ ಬಲ ಸಹಿತ ಬಳಗದ
ಜೀವಗಳೆಯುವೆನಾ ತ್ರಿಕೂಟವ
ಸಾವುಗೆಡಹುತ ತಹೆನು ಸೀತೆಯ ಪೇಳ್ವುತುಚಿತಗಳು ।
ಆವುದೆಸಗಲಿ ಆರನೊರೆಸಲಿ
ಸಾವಧಾನದಿ ಪೇಳೆನಲು ನೀ
ದೇವಿಯಂ ಕಂಡವಳ ಕುಶಲವನರಿತು ಮರಳೆಂದ ॥೩೨॥

ಇದುವೆ ನಿನ್ನಯ ಕಜ್ಜ ಸೀತಾ
ಪದವ ಕಾಂಬುದು ಮತ್ತೆ ರಾಘವ
ಹದನನೊರೆವನು ಬಹನು ವಾನರ ಸೇನೆಯೊಡಗೊಂಡು ।
ಉದಧಿ ಲಂಘಿಸಿ ಗೆಲುವ ರಾವಣ
ನೆದೆಯ ಸೀಳುವ ಮತ್ತೆ ಕೋಸಲ
ಪದಕೆ ತೆರಳುವ ಮೂರು ಲೋಕಗಳನ್ನು ಸುಖಗೊಳಿಸಿ ॥೩೩॥

ದೇವ ಮುನಿನರ ನಾರದಾದಿಗ
ಳಾ ವಿರಾಗಿಯ ಕೀರ್ತಿಗಾನವ
ತೀವಿದತಿಶಯದಿಂದ ಮಾಡುವರದನರಿದ ನರನು ।
ಪಾವನನು ಜಗದಲ್ಲಿ ರಘುಪತಿ
ದೇವ ನಾಮುವ ಭಜನೆ ಮಾಳ್ಪರು
ತಾವು ತುಲಸೀದಾಸಗೋಸ್ವಾಮಿಗಳು ಸಂತತವು ॥೩೪॥

ಭವರುಜೆಗೆ ಪರವೌಷಧವು ರಾ
ಘವನ ಕೀರ್ತನ ಕೇಳ್ದರಂ ಪರ
ಶಿವನು ಸುಮನೋರಥವ ಕೈಗೂಡಿಸುವ ಭರದಿಂದ ।
ಅವನು ಮನ್ಮಥ ತಾತ ವಿಧಿಹರ
ರವನ ಗುಣಗಾನವನು ಮಾಡುವ
ರವನ ನಾಮುವ್ಯಾಧನಘಖಗವೃಂದಕೀ ಜಗದಿ ॥೩೫॥

ಇದುವೆ ವಿಮಲ ಜ್ಞಾನಸಾಗರ
ಇದುಕೃಪಾಳುವಿನೆರಕ ವ್ಯೈತ್ರೀ
ಹೃದಯ ಲಾಂಛನ ಭಾವ ಶುದ್ಧಿಯಗ್ಯೈವ ಬೋಧೆಯಿದು ।
ಇದುವೆ ಭಕ್ತರ ಚರಿತೆ ಮುನಿಜನ
ಪದವನೋಲೈಸುತ್ತ ಹಾಡಿದ
ಪದುಮನಾಭನ ಪುಣ್ಯ ಚರಿತಾಮೃತವು ಪಾವನವು ॥೩೬॥

ರಾಮುದಾಸರ ಕರುಣ ಸಿರಿರಘು
ರಾಮು ಚಂದ್ರನ ಸೇವೆ ರಾಘವ
ನಾಮುರಸ ಪೀಯೂಷ ತುಳಸೀದಾಸ ಸದ್ವಾಣಿ ।
ಪಾಮುರರ ಸುಜ್ಞಾನಸಾಗರ
ನಾಮುಧಾರಕರತುಳ ಸೌಧವು
ಭೂಮಿಯೊಳು ರಘುರಾಮು ಚರಿತಾಮೃತಕೆ ಪಡಿಯುಂಟೆ ॥೩೭॥

---